ಮನೆ ಮಂದಿಗೆಲ್ಲ ಮುದ ನೀಡುವ ಮಾಸಿಕ

# ಕಸ್ತೂರಿ

ಡಿಸೆಂಬರ್
೧೯೯೬

ಪುಸ್ತಕ ವಿಭಾಗ

ಭೀಷ್ಮ ಸಾಹನಿಯವರ

'ತಮಸ್'



ಮಧುರ ಗಾನದ
ಮೋಡಿಗಾರ

ಬೆಲೆ:
ರೂ. ೬-೦೦

ಹೊದ್ದೇನೆಂದರೆ ಎಲೆಯೂ ಇಲ್ಲ!



(ಕಸ್ತೂರಿಯ ಸಂಗ್ರಹದಿಂದ)



# ಕಸ್ತೂರಿ

ಕನ್ನಡ ಡೈಜೆಸ್ಟ್


ಲೋಕ ಶಿಕ್ಷಣ ಟ್ರಸ್ಟಿನ
ಹೆಮ್ಮೆಯ ಕಾಣಿಕೆ

ವ್ಯವಸ್ಥಾಪಕ ಸಂಪಾದಕ:
ಕೆ. ಶಾಮರಾವ್

ಸಂಪಾದಕ:
ಎನ್.ವಿ. ಜೋಶಿ

ಸಹಸಂಪಾದಕ:
ವೆಂಕಟನಾರಾಯಣ

ನಿರ್ವಹಣೆ:
ಗೋಪಾಲ ವಾಜಪೇಯಿ
ಶ್ರೀಕಾಂತ ಮಳಗಿ

ಕಲೆ:
ಪಿ.ಆರ್. ಪಾಟೀಲ
ಎಂ.ಎಸ್. ಶಶಿಧರ

ಮುಖಪುಟ:
"ಕಸ್ತೂರಿ"ಯ
ಸಂಗ್ರಹದಿಂದ

ಕಸ್ತೂರಿ ಕಾರ್ಯಾಲಯ,
ಕೊಪ್ಪೀಕರ ರಸ್ತೆ,
ಹುಬ್ಬಳ್ಳಿ-೫೮೦ ೦೨೦.


## ಚಿಂತನ

ಪತ್ರಿಕೆಗಳಲ್ಲಿ ದಿನಕ್ಕೊಂದು ಹಗರಣವನ್ನು ಓದಿ ಓದಿ ಬೇಸತ್ತ ನಾನು 'ಕಾಲ ಎಷ್ಟು ಕೆಟ್ಟುಹೋಯಿತಲ್ಲ' ಎನ್ನುತ್ತಾ ಮಲಗಿದೆ. ಆದರೆ ನಿದ್ದೆ ಹತ್ತಲಿಲ್ಲ. ಬೆಳಗಾಗುವತನಕ ಹೇಗಾದರೂ ವೇಳೆಯನ್ನು ಕಳೆಯಬೇಕಲ್ಲ. ಬಹಳ ಹಿಂದೆ ಅರ್ಧಕ್ಕೇ ಓದಿ ಬಿಟ್ಟಿದ್ದ ವಿಲ್ ಡ್ಯೂರಂಟರ ಪುಸ್ತಕವನ್ನು ಕೈಗೆತ್ತಿಕೊಂಡು ಓದತೊಡಗಿದೆ.

ವಿಷಯ ಹತ್ತನೆಯ ಶತಮಾನದ ಇಂಗ್ಲಂಡಿನ ಕಾನೂನು ವ್ಯವಸ್ಥೆಗೆ ಸಂಬಂಧಿಸಿದ್ದು. ಆಗಿನ ಕಾಲದಲ್ಲಿ ಯಾರಾದರೂ ಇನ್ನೊಬ್ಬರಿಗೆ ಗಾಯಮಾಡಿದರೆ ಗಾಯ ಎಷ್ಟು ಉದ್ದವಾಗಿದೆ ಎಂಬುದರ ಮೇಲೆ ದಂಡದ ಪ್ರಮಾಣವನ್ನು ನಿರ್ಧರಿಸಲಾಗುತ್ತಿತ್ತಂತೆ. ಕಿವಿಯನ್ನು ಕತ್ತರಿಸಿದರೆ ೩೦ ಶಿಲ್ಲಿಂಗುಗಳಷ್ಟು ದಂಡ ಕೊಡಬೇಕಾಗುತ್ತಿತ್ತು. ಯಾರಾದರೂ ಪರಸ್ತ್ರೀ ಸಂಗ ಮಾಡಿದರೆ ಆತನಿಗೆ ದಂಡವನ್ನಷ್ಟೇ ಅಲ್ಲ, ಇನ್ನೊಬ್ಬಳು ಹೆಂಡತಿಯನ್ನು ಒದಗಿಸುವ ಭಾರವನ್ನೂ ಹೊತ್ತುಕೊಳ್ಳಬೇಕಾಗುತ್ತಿತ್ತು. ರಾಜಾಜ್ಞೆಯನ್ನು ಉಲ್ಲಂಘಿಸಿದರೆ ಅವನ ಎಲ್ಲ ಆಸ್ತಿಯನ್ನೂ ಕಸಿದುಕೊಳ್ಳಲಾಗುತ್ತಿತ್ತಲ್ಲದೆ ಆತನನ್ನು ಯಾರಾದರೂ ಕೊಂದರೆ ಕೊಂದವರಿಗೆ ಶಿಕ್ಷೆಯ ಭಯವಿರಲಿಲ್ಲ. ಸಾಲ ಹಿಂದಿರುಗಿಸದವರನ್ನು ಗುಲಾಮಗಿರಿಗೆ ತಳ್ಳಲಾಗುತ್ತಿತ್ತು. ಹಣದ ಅವಶ್ಯಕತೆಯಿದ್ದಾಗ ತಂದೆ ಮಕ್ಕಳನ್ನೂ ಗಂಡ-ಹೆಂಡತಿಯನ್ನೂ ಗುಲಾಮರನ್ನಾಗಿ ಮಾರಬಹುದಿತ್ತು. ಗುಲಾಮಳನ್ನು ಕೊಲ್ಲುವ ಅಧಿಕಾರ ಒಡೆಯನಿಗಿತ್ತು. ಗುಲಾಮಳನ್ನು ಗರ್ಭಿಣಿಯಾಗಿಸಿ ಆನಂತರ ಆ ಕಾರಣದಿಂದಾಗಿ ಹೆಚ್ಚು ಬೆಲೆಗೆ ಮಾರುವ ಅಧಿಕಾರವೂ ಅವನಿಗಿತ್ತು. ಗುಲಾಮರಿಗೆ ನ್ಯಾಯಾಲಯಕ್ಕೆ ಹೋಗುವ ಅಧಿಕಾರವಿರಲಿಲ್ಲ. ಮನೆಬಿಟ್ಟು ಓಡಿಹೋದಾಗ ಆತ ಸಿಕ್ಕುಬಿದ್ದರೆ ಸಾಯುವ ತನಕ ಥಳಿಸಲಾಗುತ್ತಿತ್ತು. ದೊಡ್ಡ ಅಪರಾಧಗಳನ್ನು ಮಾಡಿದವರನ್ನು ಅವರ ಶಿಕ್ಷೆಗೆ ಅನುಸಾರವಾಗಿ ಮೇಲ್ತುಟಿಯನ್ನಾಗಲಿ, ಕೈಯನ್ನಾಗಲಿ, ತಲೆಯನ್ನಾಗಲಿ ಕತ್ತರಿಸಲಾಗುತ್ತಿತ್ತು; ಜೀವಂತ ದಹಿಸಲಾಗುತ್ತಿತ್ತು, ವೃಷಣಗಳನ್ನು ಕತ್ತರಿಸಿ ನಪುಂಸಕರನ್ನಾಗಿಸಲಾಗುತ್ತಿತ್ತು ಇಲ್ಲವೆ ಕಡಿದಾದ ಪ್ರಪಾತಕ್ಕೆ ತಳ್ಳಲಾಗುತ್ತಿತ್ತು.

ಹರಿದು ಹಂಚಿಹೋಗಿದ್ದ ಇಂಗ್ಲಂಡಿಗೆ ಭದ್ರವಾದ ನೆಲೆಯನ್ನೂ ತಾಯ್ನಾಡಿಗೆ ರಾಜಮನ್ನಣೆಯನ್ನೂ ದೊರಕಿಸಿ ಆ ಕಾರಣದಿಂದ ಇತಿಹಾಸಕಾರರ ಪ್ರೀತಿಗೆ ಪಾತ್ರನಾದ ಆಲ್‌ಫ್ರೆಡ್ ದೊರೆಯ ಕಾಲದಲ್ಲಿದ್ದ ಚಿತ್ರಣವಿದು. ಇದನ್ನೋದಿದ ನಂತರ ಈಗಿನ ಕಾಲ ಕೆಟ್ಟು ಹೋಗಿದೆ ಎನ್ನುವುದರಲ್ಲಿ ಯಾವ ಅರ್ಥವೂ ಉಳಿದಂತೆ ನನಗೆ ಕಾಣಲಿಲ್ಲ.

— ವ್ಯವಸ್ಥಾಪಕ ಸಂಪಾದಕ

# ಸಹಚಿಂತನ

## ಸ್ವಾನುಭವ

ಅಕ್ಟೋಬರ್-ತಿಂಗಳಲ್ಲಿನ 'ಕಸ್ತೂರಿ'ಯಲ್ಲಿ ನೆಲ ನೆಲ್ಲಿಯ ಔಷಧಿಗುಣದ ಬಗ್ಗೆ ನಮಗೆ ಅನುಭವ ವಾಗಿದೆ.

ಕಳೆದ ತಿಂಗಳು ನಮ್ಮ ಮೂರು ವರ್ಷದ ಮಗ ಕಾಮಾಲೆಯಿಂದ ಬಳಲುತ್ತಿದ್ದಾಗ ನಾವು ನೆಲನೆಲ್ಲಿಯ ರಸವನ್ನು ೧೫ ದಿವಸ ಕೊಟ್ಟೆವು. ಈಗ ಅವನು ಸಂಪೂರ್ಣ ಗುಣಮುಖಿ.

ಬೆಂಗಳೂರು ✶ ಬಿ.ಎಂ. ನಾಗಭೂಷಣ-ನಂದಿನಿ

## ಅಪ್ರಸ್ತುತ

ತೋಳ ಮನುಷ್ಯ, ಮತ್ಸ್ಯ ಬಾಲಕ, ಪ್ರೇತಾತ್ಮ ವೃತ್ತಾಂತಗಳನ್ನು ಪ್ರಕಟಿಸಿ ಮೋಜು ನೋಡುವುದಕ್ಕಿಂತ ಹೆಚ್ಚೆಚ್ಚು ವೈದ್ಯಕೀಯ, ವೈಜ್ಞಾನಿಕ, ಸಾಹಿತ್ಯಕ ವಿಚಾರಗಳನ್ನು ದಯವಿಟ್ಟು ಪ್ರಕಟಿಸಿ. ಅಮೂಲ್ಯವಾದ ಕಾಗದ ಒಳ್ಳೆಯ ರೀತಿಯಲ್ಲಿ ಉಪಯೋಗವಾಗಲಿ. ೨೧ನೇ ಶತಮಾನಕ್ಕೆ ಹತ್ತಿರವಾಗುತ್ತಿರುವ ಈ ಕಾಲದಲ್ಲಿ ಪ್ರೇತಗಳ ವಿಷಯ ತೀರಾ ಅಪ್ರಸ್ತುತ.

ಉಡುಪಿ ✶ ಶ್ಯಾಮಪ್ರಸಾದ್

## ಪರಿಣಾಮಕರ

ಮದಿರೆ ಮತ್ತು ಮದಿರೆಯ ಭಕ್ತರ ಬಗ್ಗೆ 'ಎಂ. ದೀಪಾ'ಅವರ ವಿಶ್ಲೇಷಣೆ ಕುಡುಕರಿಗೆ ಪರಿಣಾಮಕರ. ಮಿದುಳು, ನರಮಂಡಲ ಹಾಗೂ ಯಕೃತ್ತಿನ ಮೇಲೆ ಮದ್ಯಾರ್ಕದಿಂದ ಘೋರ ಪರಿಣಾಮ ಉಂಟಾಗುತ್ತದೆ. ಮದ್ಯಪ್ರಾಶನದಿಂದ ಸಿರೋಸಿಸ್ ಆಗಿ ಕೊನೆಗೆ ಸಾವಿನಂಚಿಗೆ ತಲುಪುವದು ನಿಶ್ಚಿತ ಅನ್ನುವುದನ್ನು ಚೆನ್ನಾಗಿ ವಿವರಿಸಿದ್ದಾರೆ.

ಬೆನಕಟ್ಟಿ ✶ ವೀರಪ್ಪ ಆ. ಗಯ್ಯಾಳಿ

## ಏನು 'ಅನವಸರ?'

ಅಕ್ಟೋಬರ್ ಸಂಚಿಕೆಯಲ್ಲಿ ಪ್ರಕಟವಾದ ಶಬ್ದ ಭಂಡಾರದಲ್ಲಿ 'ಅನವಸರ' ಪದಕ್ಕೆ ಸಂದರ್ಭಕ್ಕೆ ಸರಿಹೊಂದದ, ಅಸಂಗತ ಎಂಬರ್ಥವನ್ನು ಕೊಟ್ಟಿರುವಿರಿ. ಆದರೆ 'ಅನವಸರ' ಎಂದರೆ 'ಬಿಡುವಿಲ್ಲದ', 'ಪುರುಸೊತ್ತಿಲ್ಲದ' ಎಂದರ್ಥವಾಗುತ್ತದೆ. ಉದಾಹರಣೆಗೆ: ಆ ದಿನ ನನಗೆ ಅನವಸರವಾಗಿತ್ತು.

ಹಿರೇಗುತ್ತಿ
❀ ಮಂಜುನಾಥ ಬೀರಣ್ಣ ನಾಯಕ

**[ನೀವು ಹೇಳುವ ಅರ್ಥವೂ ಸರಿ. ಅವಸರಕ್ಕೆ ಸಂದರ್ಭ, ಸುಸಂಗತ ಎಂಬ ಅರ್ಥವನ್ನು ಕೋಶಗಳು ಹೇಳುತ್ತವೆ. ಆದ್ದರಿಂದ ನಾವು ಕೊಟ್ಟ ಅರ್ಥವೂ ಸರಿ. -ಸಂ.]**

## ಹಕ್ಕು ನಿಮಗಿದೆಯೇ?

ನವಂಬರ್ ತಿಂಗಳ ಸಂಚಿಕೆಯಲ್ಲಿ ಪ್ರಕಟವಾದ 'ಅಲಂಕಾರದ ಹಿಂದಣ ಹಿಂಸಾಚಾರ' ಓದಿ ದಿಗ್ಭ್ರಮೆಯಾಯಿತು. ಶೃಂಗಾರ ಪ್ರಸಾಧನಗಳ ನಿರ್ಮಾಣದ ಹಿಂದೆ ಅದೆಷ್ಟು ಮುಗ್ಧ ನಿಷ್ಪಾಪಜೀವಿಗಳ ಬಲಿದಾನವಡಗಿದೆಯೆಂಬುದನ್ನು ಓದಿದಾಗ, ಇಂಥ ಪ್ರಸಾಧನಗಳ ಅವಶ್ಯಕತೆ ಇದೆಯೆ? ಎಂದು ನಮ್ಮನ್ನೇ ನಾವು ಕೇಳಿಕೊಳ್ಳಬೇಕೆನಿಸುತ್ತಿದೆ.

ಜಮಖಂಡಿ ✶ ಡಾ. ವ್ಹಿ.ಎಸ್. ಕಾರಜೋಳ
ಡಾ. ಜೆ.ಎಸ್. ಕಾರಜೋಳ

## ಮನಕಲಕಿತು

ನವಂಬರ್ ಸಂಚಿಕೆಯಲ್ಲಿ ಪ್ರಕಟವಾದ 'ಹಣಕ್ಕಾಗಿ ಭ್ರೂಣ ಮಾರಿದ ತಾಯಿ' ಎಂಬ ಸತ್ಯಕಥೆ ಮನಕಲಕಿತು. ಭ್ರೂಣಮಾರಿ ಬಂದ ಹಣದಿಂದ ಗಂಡ, ಮಕ್ಕಳಿಗೆ ಹೊಟ್ಟೆ ತುಂಬ ಊಟ ಮಾಡಿಸಬೇಕೆಂಬ ಬಡಮಹಿಳೆ ವ್ಯಾಪಾರಿ-ವೈದ್ಯರ ಕಪಿಮುಷ್ಟಿಗೆ ಸಿಲುಕಿ ಬಲಿಯಾದದ್ದು ಎಂತಹ ದುರಂತ!

'ತಕ್ಕಡಿಯಲ್ಲಿ ವೇದಗಳ ಮಾರಾಟ' ಲೇಖನ ಅರೆಬರೆ ಪಂಡಿತರಿಗೆ ಬರೆ ಎಳೆದಂತಿದೆ. ಹಳೆಯ ಗ್ರಂಥಗಳನ್ನು ನಿರ್ಲಕ್ಷಿಸಿ ರದ್ದಿಗೆ ಹಾಕುವ ಎಷ್ಟೋ

ಪಂಡಿತರು ಆಧುನಿಕ ಗ್ರಂಥಗಳ ಮೊರೆ ಹೋಗುತ್ತಿರುವುದು ದುರದೃಷ್ಟಕರ.

ಸೇಡಂ ✶ ಮುಡಬಿ ಗುಂಡೇರಾವ್

## ಉತ್ತಮ ನಿರೂಪಣೆ

ನವಂಬರ್ ಸಂಚಿಕೆಯ 'ಮರ ಹೇಳಿದ ಕತೆ' ಉತ್ತಮ ನಿರೂಪಣೆಯಿಂದಾಗಿ ಮನಸೆಳೆಯಿತು. ಜಾತಿಯ ಬಗ್ಗೆ ದಂಗೆಗಳು ಏಕೆ ಏಳುತ್ತವೆ ಎಂಬುದನ್ನು ಈ ಕತೆ ಓದಿದರೆ ತಿಳಿಯಬಹುದು.

ಚಡಚಣ ✶ ಚಿದಾನಂದ ಸಾಂಗೋಲಿ

---

## ಸ್ಪಷ್ಟೀಕರಣ

'ಕಸ್ತೂರಿ'ಯ ಅಕ್ಟೋಬರ್ ಸಂಚಿಕೆಯಲ್ಲಿ ಪ್ರಕಟವಾದ ಕೆ.ಎಚ್. ಸಾವಿತ್ರಿಯವರ ಲೇಖನದಲ್ಲಿ ಸೈನಿಕರ ಕುರಿತಾದ ಕೆಲವು ಮಾತುಗಳು ವಿಯೆಟ್‌ನಾಮ್ ಯುದ್ಧದಲ್ಲಿ ಅಮೆರಿಕನ್ ಸೈನಿಕರು ಎಸಗಿದ ಅತ್ಯಾಚಾರವನ್ನು ಮನಸ್ಸಿನಲ್ಲಿಟ್ಟುಕೊಂಡು ಬರೆದಂಥವು. ಈ ಅಂಶವನ್ನು ತಿಳಿಸದಿದ್ದುದರಿಂದ ನಮ್ಮ ಸೈನಿಕರ ಬಗೆಗೆ ವೃಥಾ ತಪ್ಪುಕಲ್ಪನೆಯಾಗುವ ಸಾಧ್ಯತೆಯಿದ್ದುದರಿಂದ ಈ ಸ್ಪಷ್ಟೀಕರಣ. ಸೈನಿಕವೃತ್ತಿಯಲ್ಲಿರುವವರ ಮನಸ್ಸಿಗೆ ನೋವಾಗಿದ್ದರೆ 'ಕಸ್ತೂರಿ'ಯು ಅದಕ್ಕಾಗಿ ಕ್ಷಮೆ ಕೋರುತ್ತದೆ.

❀ -ಸಂ

---

## ಇಲ್ಲೂ ಸರಳ ವಿವಾಹ

ಅಕ್ಟೋಬರ್ ಸಂಚಿಕೆಯಲ್ಲಿ ಬಿಹಾರದ ರಾಮರೇಖಾ ಘಾಟ್‌ದಲ್ಲಿ ಜರುಗುವ ಸರಳ ವಿವಾಹಗಳ ಬಗ್ಗೆ ಪ್ರಕಟವಾದ ಕಿರುವರದಿ ಓದಿದೆ.

ಚಿತ್ರದುರ್ಗದ ಶ್ರೀ ಜಗದ್ಗುರು ಮುರುಘರಾಜೇಂದ್ರ ಬೃಹನ್ಮಠದಲ್ಲಿ ಪ್ರತಿ ತಿಂಗಳು ದಿನಾಂಕ ೫ರಂದು ಶ್ರೀಮಠದ ಮುರುಘವನದಲ್ಲಿ ಕನಿಷ್ಟ ಪಕ್ಷ ೫೦ ರಿಂದ ೬೦ ಮದುವೆಗಳು ಜರುಗುತ್ತವೆ.

ಬೃಹನ್ಮಠದ ಶ್ರೀ ಶಿವಮೂರ್ತಿ ಮುರುಘರಾಜೇಂದ್ರ ಮಹಾಸ್ವಾಮಿಗಳ ಸನ್ನಿಧಿಯಲ್ಲಿ ಜರಗುವ ಈ ಸಾಮೂಹಿಕ ವಿವಾಹಗಳಲ್ಲಿ ಯಾವುದೇ ಆಡಂಬರವಿಲ್ಲ, ಪುರೋಹಿತರ ಹಾವಳಿ ಇಲ್ಲ.

ಧಾರವಾಡ ✶ ಪ್ರೊ. ಆರ್.ವ್ಹಿ. ಹೆಗಡಾಳ

## ದೊಡ್ಡವರ ಸಣ್ಣತನ

ಅಕ್ಟೋಬರ್ ೯೬ರ "ಕಸ್ತೂರಿ"ಯಲ್ಲಿನ "ಹಿತ್ತಲಗಿಡಕ್ಕೆ 'ಪೇಟೆಂಟ್'ನ ಪಟ್ಟು" ಓದಿ ಬೇಸರವಾಯಿತು. ಮುಂದುವರೆದ ದೇಶವೆಂದು ಹೆಮ್ಮೆಪಟ್ಟುಕೊಳ್ಳುವವರು ಬಡ ದೇಶವಾದ ಭಾರತದವರ ಮನೆಮದ್ದಿಗೆ ತಾವು ಒಡೆಯರಾಗಬಯಸುವುದು "ದೊಡ್ಡವರ ಸಣ್ಣತನ"ವೆಂದೇ ಹೇಳಬಹುದು.

ಲೇಖನದಲ್ಲಿ ವಿವರಿಸಿರುವ ನೆಲನೆಲ್ಲಿಯನ್ನು ಕಾಮಾಲೆ ರೋಗಕ್ಕೂ ಅಲ್ಲದೇ ಹಳ್ಳಿಯಲ್ಲಿ ಬಳಸುವಂತೆ ತಲೆಗೆ ಹಾಕಿ ಸ್ನಾನಮಾಡಲು, ಎಣ್ಣೆ ತಯಾರಿಸಲೂ ಉಪಯೋಗಿಸಬಹುದು.

ನೆಲನೆಲ್ಲಿ, ಗರ್ಗ, ಸಹದೇವಿ ಸೊಪ್ಪು, ತಿಮರೆ (ಒಂದೆಲಗ ಅಥವಾ ಬ್ರಾಹ್ಮೀ), ಪಚ್ಚೆತೆನೆ, ಗರಿಕೆ ಹುಲ್ಲು-ಎಲ್ಲವನ್ನೂ ತೊಳೆದು, ಅರೆದು ರಸ ತೆಗೆಯಬೇಕು. ಅರ್ಧಲೀಟರ್ ರಸಕ್ಕೆ, ಒಂದು ಲೀಟರ್ ತೆಂಗಿನೆಣ್ಣೆ ಹಾಕಿ ಕುದಿಸಬೇಕು. ಇದನ್ನು ಆಗಾಗ ಕಲಕುತ್ತಿರಬೇಕು. ರಾತ್ರಿ ಹೊತ್ತು ಎಣ್ಣೆಯ ಪಾತ್ರೆಯನ್ನು ಒಲೆಯಿಂದ ಇಳಿಸಿ, ಮರುದಿನ ಪುನಃ ಒಲೆಯಲ್ಲಿಟ್ಟು ಕಾಯಿಸಬೇಕು. ಪ್ರತೀ ದಿನ ೧/೪ ಲೀ ಹಾಲು ಸುರಿಯುತ್ತಾ ಸರಿಯಾಗಿ ಎರಡು ದಿನ ಕಾಯಿಸಬೇಕು. ಇದರ ಅಡಿಯಲ್ಲಿರುವ ಮಡ್ಡಿ ಗರಿಗರಿಯಾದಾಗ ಅರ್ಧ ಲೀಟರ್ ಎಳ್ಳೆಣ್ಣೆಯನ್ನು ಸುರಿಯಬೇಕು. ನೆನಪಿಡಿ: ಈಗ ಕಾವು ಜೋರಾಗಿರದೆ ಹದವಾಗಿರಬೇಕು. ಎಳ್ಳೆಣ್ಣೆ ಸುರಿದಾಗ ಇದು ಉಕ್ಕಿ ಬರಬಹುದು. ಆಗ ಜಾಗ್ರತೆಯಿಂದ ಕಲಕುತ್ತಾ, ಎಣ್ಣೆ ಚೆಲ್ಲದಂತೆ ನೋಡಿಕೊಳ್ಳುತ್ತಾ, ಸ್ವಲ್ಪ ಹೊತ್ತು ಕಾಯಿಸಿದ ನಂತರ ಮಡ್ಡಿ ಇನ್ನೂ ಗರಿಗರಿಯಾಗುತ್ತದೆ. ಆಗ ಅದಕ್ಕೆ ಸ್ವಲ್ಪ ಪಚ್ಚೆ ಕರ್ಪೂರ ಹಾಕಿ ಇಳಿಸಬೇಕು. ಎಣ್ಣೆ ತಣ್ಣಗಾದ ಮೇಲೆ ಅದನ್ನು ಶೋಧಿಸಿ, ಎಣ್ಣೆಯನ್ನೂ ಮಡ್ಡಿಯನ್ನೂ ಬೇರ್ಪಡಿಸಬೇಕು.

(ಆರನೇ ಪುಟಕ್ಕೆ)

# ಅಂತರಂಗ





ಪುಸ್ತಕ ವಿಭಾಗ

೧೧೩

## ತಮಸ್

ಮೂಲ: ಭೀಷ್ಮಸಾಹನಿ
ಸಂಗ್ರಹ: ವ. ಉಮೇಶ ಕಾರಂತ

## ಸ್ಥಿರ ಶೀರ್ಷಿಕೆಗಳು



## ಬೆಳಕಿಂಡಿ

✿ ವಾಣಿಜ್ಯರಂಗದಲ್ಲಿ ನನಗೆ ಹೆದರಿಕೆಯಿರುವುದು ವಕ್ರಬುದ್ಧಿಯ ಜನರಿಂದಲ್ಲ, ತಾವೇನು ಮಾಡುತ್ತಿದ್ದೇವೆಂಬುದೇ ಗೊತ್ತಿರದ ಪ್ರಾಮಾಣಿಕ ಜನರಿಂದ.

*ಓವೆನ್ ಡಿ. ಯಂಗ್*

✿ ಅಜ್ಞಾನಿಗಳ ಸಂಗದಲ್ಲಿ ಜಾಣನಿರುವುದೂ ಒಂದೇ, ಕುರುಡರ ಸಂಗದಲ್ಲಿ ಸುಂದರ ಸ್ತ್ರೀ ಇರುವುದೂ ಒಂದೇ.

*'ಸಾದಿ' (ಮುಸ್ಲಿಂಉದ್ದೀನ್)*

✿ ಎಲ್ಲರ ಜೀವನವೂ ಪರಮಾತ್ಮನಿಂದ ಬರೆಯಲ್ಪಟ್ಟ ಯಕ್ಷಿಣಿ ಕಥೆಯ ಹಾಗೆ.

*ಹ್ಯಾನ್ಸ್ ಕ್ರಿಶ್ಚಿಯನ್ ಆ್ಯಂಡರ್‌ಸನ್*

✿ ಕೋರ್ಟಿಗೆ ಹೋಗುವುದೆಂದರೆ ಬೆಕ್ಕನ್ನು ಪಡೆದುಕೊಳ್ಳಲು ಆಕಳನ್ನೇ ಕಳೆದುಕೊಂಡ ಹಾಗೆ.

*ಜೇನಿ ಗಾದೆ*

✿ ಜೀವನವನ್ನು ಆನಂದಿಸಬೇಕೆ? ಹಾಗಾದರೆ ಅದರ ಬಗ್ಗೆ ಹೆಚ್ಚಿನ ಮೋಹ ಇಟ್ಟುಕೊಳ್ಳಬೇಡಿ.

*ಮಹಾತ್ಮಾ ಗಾಂಧಿ*

✿ ಶಿಷ್ಟಾಚಾರಕ್ಕೂ ನಾವು ಹಾಕಿಕೊಳ್ಳುವ ಬಟ್ಟೆಗೂ ಏನು ಸಂಬಂಧ ಎನ್ನುತ್ತೀರಾ? ಹಾಗಾದರೆ ಬಿಗಿಯಾದ ಪ್ಯಾಂಟ್ ಧರಿಸಿ ಸಾಷ್ಟಾಂಗ ನಮಸ್ಕಾರ ಮಾಡಲು ಪ್ರಯತ್ನಿಸಿನೋಡಿ.

*ಮೇರಿ ಬೋಡೇನ್*

(ಮೂರನೇ ಪುಟದಿಂದ)

ಇದು ಕಣ್ಣಿಗೆ ತಂಪನ್ನೀಯುತ್ತದೆ. ಕೂದಲುಗಳು ಉದುರುವುದಿಲ್ಲ ಹಾಗೂ ಯಾವಾಗಲೂ ಕಪ್ಪಾಗಿ, ನೋಡಲು ಸುಂದರವಾಗಿ ಇರುತ್ತದೆ. ಬೇಗನೇ ನಿದ್ದೆ ಬರಿಸುತ್ತದೆ. ಬಾಣಂತಿಯರಿಗಂತೂ ಇದು ಅತ್ಯುಪಯುಕ್ತವಾದ ಎಣ್ಣೆ.

ಸುರತ್ಕಲ್     * ಪಿ. ಹರೀಶ ಐತಾಳ

## ಕುತೂಹಲಕರ

ಶಂಕರ ಅಜ್ಜಂಪುರ ಅವರ 'ಹೀಗೊಂದು ಅಂತ್ಯಕ್ರಿಯೆ'(ಅಕ್ಟೋಬರ್ ಸಂಚಿಕೆ)ಲೇಖನ ಕುತೂಹಲಕರವಾಗಿತ್ತು. ಆತನ ಪಿತೃಭಕ್ತಿಗಿಂತ ಸಾಹಸ ಮನೋಭಾವ ಮೆಚ್ಚುಗೆಯಾಯಿತು.

ವನಮಾಲ ರಂಗನಾಥರಾವ್‌ರ 'ಹಸುವಿನ ಹಾಲು ಅಮೃತವೆ?' ಲೇಖನ ಓದಿ ಆತಂಕವಾಯಿತು. ಹಸುವಿನ ಹಾಲಷ್ಟೇ ಏಕೆ, ಅದರ ಮೂತ್ರವೂ ಪವಿತ್ರವೆಂದು ಸೇವಿಸುವ ನಮ್ಮ ದೇಶದ ಜನ 'ಹಾಲು ಅಮೃತವಲ್ಲ' ಎಂಬುದನ್ನು ಒಪ್ಪಲಾರರು. ಅದಕ್ಕೆ ಸಾಕಷ್ಟು ಸಮಯ ಬೇಕಾದೀತು.

ಗಂಗಾವತಿ     * ತಟ್ಟ ಕಾಶೀಮ್ ಅಲಿ

## ಸಂದೇಹ ಏಕೆ?

ಶತಮಾನದ ಕ್ಯಾಲೆಂಡರ್ ಬಗ್ಗೆ ರಘುರಾಮ ಉಡುಪಿ ಅವರು ಸಂಶಯ ವ್ಯಕ್ತಪಡಿಸಿದ್ದಾರೆ (ಅಕ್ಟೋಬರ್ ಸಂಚಿಕೆಯ ಸಹಚಿಂತನ). ಆದರೆ ಗಾಂಧೀಜಿಯವರ ಜನ್ಮದಿನವಾದ ೧೮೬೯ರ ಅಕ್ಟೋಬರ್ ೨ ಶನಿವಾರವಾಗಿತ್ತು ಎಂದು ಸ್ಪಷ್ಟೀಕರಿಸಬಯಸುತ್ತೇನೆ.

ದರ್ಬೆ, ಪುತ್ತೂರು     * ಚಿಕೊರ್ರೈ ಬೃಂದಾವನ

## ಲೇಖಕರಿಗೆ ಸೂಚನೆ

- 'ಕಸ್ತೂರಿ'ಗಾಗಿ ಕಳಿಸುವಂಥ ಲೇಖನಗಳು ಕಾಗದದ ಒಂದೇ ಮಗ್ಗುಲಲ್ಲಿ ಸ್ಫುಟವಾಗಿ ಬರೆದಂಥವಾಗಿರಲಿ. ನಿಮ್ಮ ಹೆಸರು-ವಿಳಾಸಗಳು ಸ್ಪಷ್ಟವಾಗಿರಲಿ. ಅನುವಾದ, ರೂಪಾಂತರ, ಆಧಾರಿತ ಲೇಖನಗಳಾದರೆ ಮೂಲ ಲೇಖಕ-ಪ್ರಕಾಶಕರ ವಿಳಾಸ, ಅನುಮತಿ ಪತ್ರಗಳನ್ನು ಜತೆಗೆ ಲಗತ್ತಿಸಿ.
- ಅಸ್ವೀಕೃತ ಲೇಖನಗಳನ್ನು ಮರಳಿ ಪಡೆಯಲಿಚ್ಛಿಸುವವರು ಲೇಖನಗಳ ಸಂಗಡವೆ ಅಗತ್ಯ ಅಂಚೆಚೀಟಿ ಲಗತ್ತಿಸಿದ ಲಕೋಟೆಯನ್ನಿಡಿ.
- ಚುಟುಕು, ಪುಟಕೊನೆಯ ಕಿರುಲೇಖನ, 'ನೆನಪು ನೆರಳಿನಲ್ಲಿ' ಮುಂತಾದವುಗಳ ಕುರಿತು ಪತ್ರವ್ಯವಹಾರ ಮಾಡಲಾಗುವುದಿಲ್ಲ.
- ಲೇಖನದ ಕಾರ್ಬನ್ ಅಥವಾ ಝೆರಾಕ್ಸ್ ಪ್ರತಿಯನ್ನು ಕಳಿಸಲೇಬೇಡಿ.
- ಸ್ವೀಕೃತ ಲೇಖನಗಳನ್ನು ಯಥಾವಕಾಶ ಪ್ರಕಟಿಸಿ ಸೂಕ್ತ ಗೌರವಧನವನ್ನು ನೀಡಲಾಗುವುದು.

## ಚಂದಾದಾರರಿಗೆ ಸೂಚನೆ

- 'ಕಸ್ತೂರಿ'ಯು ಪ್ರತಿ ತಿಂಗಳ ೧ನೇ ದಿನಾಂಕದೊಳಗೆ ಪ್ರಕಟವಾಗುವುದು. ತಿಂಗಳಿನ ೨ನೆಯ ದಿನಾಂಕದೊಳಗೆ ನಿಮಗೆ ತಲುಪದಿದ್ದಲ್ಲಿ ಚಂದಾದಾರರು ತಮ್ಮ ಟಪ್ಪಾಲು ಕಚೇರಿಯಲ್ಲಿ ಮೊದಲು ವಿಚಾರಿಸಿ ಅನಂತರ ನಮಗೆ ತಿಳಿಸಬೇಕು. ಈ ಸಂಬಂಧದಲ್ಲಿ ಪತ್ರವ್ಯವಹಾರ ಮಾಡುವಾಗ, ವಿಳಾಸ ಬದಲಾವಣೆಯ ಸಂದರ್ಭದಲ್ಲಿ, ದಯವಿಟ್ಟು ಚಂದಾನಂಬರು ಸ್ಫುಟವಾಗಿ ನಮೂದಿಸಬೇಕಾದದ್ದು ಅತ್ಯವಶ್ಯಕ.

### ಪತ್ರವ್ಯವಹಾರ ವಿಳಾಸ:

ಪ್ರಸಾರಾಂಗ ವ್ಯವಸ್ಥಾಪಕ,
ಕಸ್ತೂರಿ, ಪೊ.ಬಾ. ನಂ. ೩೦,
ಹುಬ್ಬಳ್ಳಿ-೫೮೦ ೦೨೦

### ಚಂದಾ ದರಗಳು

| | |
|---|---|
| ಬಿಡಿ ಸಂಚಿಕೆಗೆ | ರೂ. ೬-೦೦ |
| ೬ ತಿಂಗಳಿಗೆ ಅಂಚೆ ವೆಚ್ಚ ಸೇರಿ | ರೂ. ೩೫-೦೦ |
| ೧ ವರ್ಷಕ್ಕೆ ಅಂಚೆ ವೆಚ್ಚ ಸೇರಿ | ರೂ. ೭೦-೦೦ |
| ೨ ವರ್ಷಕ್ಕೆ ಅಂಚೆ ವೆಚ್ಚ ಸೇರಿ | ರೂ. ೧೩೦-೦೦ |

ಕಸ್ತೂರಿ
ಕನ್ನಡ ಡೈಜೆಸ್ಟ್

ವರ್ಷ: ೪೧ ಡಿಸೆಂಬರ್ ೧೯೯೬ ಸಂಚಿಕೆ: ೪

# ಮುಖಭಂಗ

ಮಹಾಭಾರತ ಯುದ್ಧ ಮುಗಿದು ಧರ್ಮರಾಯನು ಹಸ್ತಿನಾಪುರದ ಸಿಂಹಾಸನ ವನ್ನೇರಿದ್ದಾನೆ. ರಾಜಕಾರ್ಯಗಳು ಸ್ತಿಮಿತಕ್ಕೆ ಬಂದಿವೆ. ಮರೆತಂತಿದ್ದ ಅರ್ಜುನನ ಶಿವ ಪೂಜೆ ಪುನಃ ಪ್ರಾರಂಭವಾಗಿದೆ. ಘಮ ಘಮಿಸುವ ಮಲ್ಲಿಗೆ, ಸಂಪಿಗೆ, ಜಾಜಿ, ಕಮಲ, ಪಾರಿಜಾತ ಪುಷ್ಪಗಳು ರಾಶಿ ರಾಶಿ ಯಾಗಿ ಅರ್ಚನೆಗೆ ಸಿದ್ಧವಾಗಿವೆ. ಪೂಜೆ ಮುಗಿಸಿ ಹೊರಟ್ಟಿದ್ದ ಅರ್ಜನನಿಗೆ ಹಣ್ಣು ತಿನ್ನುತ್ತ ಕುಳಿತಿದ್ದ ಭೀಮ ಕಣ್ಣಿಗೆ ಬೀಳುತ್ತಾನೆ. ಅರ್ಜುನನಿಗೆ ಭೀಮನೊಬ್ಬ ಹೊಟ್ಟೆಬಾಕ ನೆಂಬ ತಾತ್ಸಾರ ಭಾವನೆ.

ಮುಗುಳು ನಗೆಯೊಂದಿಗೆ ಬಂದ ಕೃಷ್ಣ "ನಿನ್ನ ಪೂಜೆ ಮುಗಿಯಿತಲ್ಲವೆ? ನಡೆ ಅರ್ಜುನ ಹೋಗೋಣ," ಎಂದ. ದಾರಿ ಯಲ್ಲಿ ಅರ್ಜುನ ನೋಡಿದ. ಬೆಟ್ಟಗಳಂತೆ ರಾಶಿ ರಾಶಿಯಾಗಿ ನೈರ್ಮಲ್ಯವನ್ನು ಗಾಡಿಗ ಳಲ್ಲಿ ತುಂಬಿಕೊಂಡು ನೌಕರರು ಸರಸರನೆ ನಡೆಯುತ್ತಿದ್ದಾರೆ. ಗಾಡಿಗಳ ನಂತರ ಗಾಡಿ ಗಳು ಬರುತ್ತಲೇ ಇವೆ. ಚಕಿತನಾದ ಅರ್ಜುನ ನೌಕರನನ್ನು ನಿಲ್ಲಿಸಿ ಕೇಳಿದ, "ಇದೇನು? ಎಲ್ಲಿಗೆ ಒಯ್ಯುತ್ತಿರುವಿರಿ? ಈ ಅವಸರದ ಕಾರಣವೇನು?" ನೌಕರ, "ಸ್ವಾಮಿ, ನನಗೆ ಮಾತನಾಡಲು ವೇಳೆ ಇಲ್ಲ, ಇನ್ನೂ ಎಷ್ಟೋ ಗಾಡಿಗಳಷ್ಟು ಭೀಮನ ಪೂಜಾ ನೈರ್ಮಲ್ಯ ವನ್ನು ನಾನು ಒಯ್ಯಬೇಕಾಗಿದೆ. ಕ್ಷಮಿಸಿ," ಎನ್ನುತ್ತ ಮುನ್ನಡೆದ. ಹಿಂದೆ ಒಬ್ಬ ನೌಕರ ಚಿಕ್ಕ ಗಾಡಿಯಲ್ಲಿ ಸ್ವಲ್ಪ ಮಾತ್ರ ನೈರ್ಮಲ್ಯ ವನ್ನು ತುಂಬಿಕೊಂಡು ಬರುತ್ತಿದ್ದ. ಅವನನ್ನು ಕೇಳಿದಾಗ ಅದು ಅರ್ಜುನನ ಪೂಜಾ ನೈರ್ಮ್ಯಲ್ಯವೆಂದು ಕೋಪಾಶ್ಚರ್ಯಗಳಿಂದ ಕೇಳಿದ ಅರ್ಜುನ, "ಇದೇನು, ನನ್ನ ಪೂಜಾ ನೈರ್ಮಲ್ಯವನ್ನು ಭೀಮನದೆಂದು ತಪ್ಪು ತಿಳಿ ದಿಲ್ಲವಷ್ಟೆ? ಸದಾ ತಿನ್ನುವುದರಲ್ಲೇ ಆಸಕ್ತನಾ ಗಿರುವ ಭೀಮನಿಗೆ ಗಾಡಿ, ಗಾಡಿ ಹೂಗಳಿಂದ ದೇವರನ್ನು ಅರ್ಚಿಸಲು ಸಮಯವಾದರೂ ಎಲ್ಲಿದೆ?" ಎಂದನು ತಿರಸ್ಕಾರ ತುಂಬಿದ ಧ್ವನಿಯಲ್ಲಿ.

ಇದುವರೆಗೂ ಸುಮ್ಮನೆ ಎಲ್ಲವನ್ನೂ ನೋಡುತ್ತಿದ್ದ ಕೃಷ್ಣ ಹೇಳಿದ, "ಅರ್ಜುನ, ಮನಸ್ಸು ಅಹಂಕಾರಕ್ಕೊಳಗಾದರೆ ನಡೆಯು ವದು ಕೇವಲ ಬಾಹ್ಯಾಡಂಬರದ ಪೂಜೆ. 'ನಾನೇ ಶ್ರೇಷ್ಠ' ಎಂಬ ಅಹಂಕಾರಕ್ಕೊಳಗಾ ಗಿದೆ ನಿನ್ನ ಮನಸ್ಸು. ಆದರೆ ಭೀಮನದು ನಿಜವಾದ ಭಕ್ತಿ, ಅವನು ಮಾಡಿದ್ದು ರಾಶಿ ರಾಶಿ ಹೂಗಳ ಅರ್ಚನೆಯಲ್ಲ. ಅವನದು ಕೇವಲ ಮಾನಸಿಕ ಪೂಜೆ," ಎಂದಾಗ ಅರ್ಜುನನಿಗೆ ಮುಖಭಂಗವಾದಂತಾಯಿತು.

✤ (ಸಂಗ್ರಹ) ಟಿ.ಎಸ್. ಲಲಿತ

೧೯೮೮ರಲ್ಲಿ ಮ್ಯಾಜಿಕ್ ಶೋ ನೀಡಲು ನಾನು ಜಪಾನಿನ ಇವಾಕಿಸಿಟಿ ನಗರಕ್ಕೆ ಭೇಟಿ ನೀಡಿದ್ದೆ. ಈ ನಗರ ರಾಜಧಾನಿ ಟೋಕಿಯೋ ದಿಂದ ಸುಮಾರು ೨೦೦ ಕಿಲೋ ಮೀಟರ್ ದೂರದಲ್ಲಿದೆ. ಅಲ್ಲಿ ನನ್ನೊಬ್ಬ ಮಿತ್ರರು ನನಗೆ ಜಪಾನಿ ಯುವತಿ ಮಿನ್ಸುಕಾನಕ ಅವರ ಪರಿಚಯ ಮಾಡಿಕೊಟ್ಟರು. ಬಿಳಿ ಮೈಬಣ್ಣದ ಮಿನ್ಸುಕಾನಕಾ ಳಿಗೆ ಆಗಲೆ ೪೦ರಷ್ಟು ವಯಸ್ಸಾಗಿದ್ದರೂ ಆಕರ್ಷಕ ಮೈಕಟ್ಟು ಅವಳಿಗಿದ್ದು ಯೌವನದ ಚೆಲುವನ್ನು ಉಳಿಸಿಕೊಂಡಿದ್ದಳು. ಎಲ್ಲಕ್ಕಿಂತಲೂ ಮುಖ್ಯವಾಗಿ ಮಿನ್ಸುಕಾನಕಾ ಭಾರತೀಯ ದರ್ಶನ, ತಂತ್ರಶಾಸ್ತ್ರದ ಬಗ್ಗೆ ಆಳವಾದ ವ್ಯಾಸಂಗ ಮಾಡಿದ್ದಳು.

ನಾವಿಬ್ಬರೂ ಬಹಳ ಹೊತ್ತು ಉಭಯ ದೇಶಗಳ ಧಾರ್ಮಿಕ, ಸಾಮಾಜಿಕ ಸಂಪ್ರದಾಯ, ರೀತಿನೀತಿಗಳ ಬಗ್ಗೆ ವ್ಯಾಪಕವಾಗಿ ಚರ್ಚಿಸಿದೆವು. ನನಗಂತೂ ಮಿನ್ಸುಕಾನಕಾಳ ಬಗ್ಗೆ ಅಪಾರ ಕುತೂ



# ಶ್ರೀಯಂತ್ರದ ರಹಸ್ಯ

ಹಲ ಹುಟ್ಟಿತು. ಅವಳ ಬಗ್ಗೆ ಹೆಚ್ಚು ಹೆಚ್ಚು ತಿಳಿದುಕೊಳ್ಳಬೇಕೆನಿಸಿತು. ನಾನು ಆ ಕುರಿತು ವಿಚಾರಿಸಿದಾಗ ಆಕೆ,

'ಅಶೋಕ್, ನಾನೂ ಓರ್ವ ತಾಂತ್ರಿಕಳು. ಮೃತ ವ್ಯಕ್ತಿಗಳಿಗೆ ಮುಕ್ತಿ ಕರುಣಿಸುವದು ನನ್ನ ಹವ್ಯಾಸ,' ಎಂದಳು ನನ್ನ ಕುತೂಹಲ ಕೆರಳಿತು.

ಅಷ್ಟರಲ್ಲೆ ಆಕೆ, 'ನೀವು ಇವತ್ತು ನನ್ನ ಅತಿಥಿಯಾಗಿ ನನ್ನ ಮನೆಗೆ ಬರುತ್ತೀರಾ?' ಎಂದಳು.

ಸಂಪ್ರದಾಯದಂತೆ ಮೃತರ ಅಸ್ಥಿಯನ್ನು ಪವಿತ್ರ ನದಿಗಳಲ್ಲಿ ವಿಸರ್ಜನೆ ಮಾಡುವ ಪದ್ಧತಿ ಅಲ್ಲಿ ಇಲ್ಲ. ಜಪಾನ್‌ನಲ್ಲಿ ಅಸ್ಥಿಗಳನ್ನು ನೆಲದಲ್ಲಿ ಆಳವಾದ ತಗ್ಗು ತೆಗೆದು, ಅದರಲ್ಲಿ ಹೂತಿಟ್ಟು, ಅದರ ಮೇಲೆ ಸಮಾಧಿ ಕಲ್ಲಿರಿಸಿ, ಕಲ್ಲಿನ ಮೇಲೆ ಮೃತನ ಹೆಸರು, ಸತ್ತ ದಿನಾಂಕ ಬರೆದಿಡುತ್ತಾರೆ. ಅಲ್ಲಿನ ಮನೆಗಳು ಸಾಮಾನ್ಯವಾಗಿ ಚಿಕ್ಕವು. ಆದರೆ ಮಿನ್ಸು ಕಾನಕಾಳ ನಿವಾಸ ಸಾಕಷ್ಟು ವಿಶಾಲವಾಗಿತ್ತು.

**ಭಾರತದ ಜಾದೂಗಾರ ಅಶೋಕ ಭಂಡಾರಿ ಎಂಟು ವರ್ಷಗಳ ಹಿಂದೆ ಜಪಾನಿಗೆ ಭೇಟಿ ನೀಡಿದ್ದಾಗ ಅವರ ಅನುಭವಕ್ಕೆ ಬಂದ ರೋಚಕ ಘಟನೆಯೊಂದರ ಕುತೂಹಲಕರ ವೃತ್ತಾಂತವನ್ನು ಅವರ ಮಾತುಗಳಲ್ಲೆ ಕೇಳಿ.**

ಸಾಮಾನ್ಯವಾಗಿ ಜಪಾನೀಯರು ಅಪರಿಚಿತರನ್ನು ತಮ್ಮ ಮನೆಗೆ ಆಹ್ವಾನಿಸುವುದು ಕಡಿಮೆ. ಅದರಲ್ಲೂ ಜಪಾನಿ ಹೆಣ್ಣೊಬ್ಬಳು ಅಪರಿಚಿತ ಭಾರತೀಯನನ್ನು ತನ್ನ ಮನೆಗೆ ಅತಿಥಿಯಾಗಿ ಆಹ್ವಾನಿಸುತ್ತಾಳೆಂದರೆ.... ನನಗೆ ವಿಸ್ಮಯವಾಯಿತು.

ಭಾರತೀಯ ಸಂಸ್ಕೃತಿ ಹಾಗೂ ಜಪಾನಿ ಸಂಸ್ಕೃತಿಗಳಲ್ಲಿ ಕೆಲವೊಂದು ಸಮಾನ ಅಂಶಗಳಿವೆ. ಉದಾಹರಣೆಗೆ ಮೃತರ ಅಂತ್ಯಸಂಸ್ಕಾರ ವಿಧಿಗಳು. ಹಿಂದುಗಳು ಶವಗಳನ್ನು ಚಿತೆಯಲ್ಲಿ ಸುಡುತ್ತಾರೆ. ಅಂತೆಯೇ ಜಪಾನಿನಲ್ಲಿ ಮೃತರ ದೇಹಗಳನ್ನು ದಹಿಸುವ ಸಂಪ್ರದಾಯವಿದೆ. ಆದರೆ ಹಿಂದೂ

ಉಳಿದೆಲ್ಲ ನಿವಾಸಗಳಿಂದ ಪ್ರತ್ಯೇಕವಾಗಿ ಏಕಾಂತದಲ್ಲಿತ್ತು. ವಿಶಾಲವಾದ ಈ ನಿವಾಸದಲ್ಲಿ ಮೂರು ಕೊಠಡಿಗಳಿದ್ದುವು. ಆ ಮನೆಯಲ್ಲಿ ಮಿನ್ಸುಕಾನಕಾಳ ಹೊರತು ಬೇರೆ ಯಾರೂ ವಾಸಿಸುತ್ತಿದ್ದ ಹಾಗೆ ಕಾಣಲಿಲ್ಲ. ಡ್ರಾಯಿಂಗ್ ರೂಮಿನಲ್ಲಿ ಕುಳಿತು ಸುತ್ತಲೂ ದೃಷ್ಟಿ ಹರಿಸುತ್ತಿದ್ದಂತೆ ನನಗೆ ವಿಸ್ಮಯವಾಯಿತು. ಗೋಡೆಯ ಮೇಲೆ ಶ್ರೀಯಂತ್ರದ ನಾನಾ ನಮೂನೆಯ ಚಿತ್ರಪಟಗಳು, ದೇಶ ವಿದೇಶಗಳ ತಾಂತ್ರಿಕ ವಿದ್ಯೆಯ ಮಹತ್ವದ ಲಕ್ಷಣಗಳನ್ನು

(ಸಾಧಾರ)

✷ ಅರುಣ ನಾರಾಯಣ

ವಿವರಿಸುವ ಚಿತ್ರಗಳನ್ನು ವ್ಯವಸ್ಥಿತವಾಗಿ ಅಳವಡಿಸಿದ್ದರು. ಮೇಜಿನ ಮೇಲೆ ಅಮೃತ ಶಿಲೆಯಲ್ಲಿ ರಚಿಸಿದ ಸುಂದರವಾದ ಬುದ್ಧನ ಪ್ರತಿಮೆಗಳಿದ್ದುವು. ಅದರ ಪಕ್ಕದಲ್ಲಿ ಕಾಳಿಕಾದೇವಿಯ ವಿಗ್ರಹ. ಎಡಭಾಗದ ಗೋಡೆಯ ಪಕ್ಕದಲ್ಲಿ ಒಂದು ದೊಡ್ಡ ಬೀರುವಿನ ಮೇಲೆ ಕಾಳಿಕಾದೇವಿಯ ಇನ್ನೊಂದು ದೊಡ್ಡ ಚಿತ್ರವನ್ನು ತೂಗು ಹಾಕಿದ್ದರು. ಆ ಚಿತ್ರದ ಪಕ್ಕದಲ್ಲಿ ಸುಮಾರು ೨೦-೨೨ ವಯಸ್ಸಿನ ಸುಂದರ ಯುವಕನೊಬ್ಬನ ಫೊಟೋ ಇರಿಸಲಾಗಿತ್ತು. ಈ ಫೋಟೋದ ಸುತ್ತಲೂ ಹಾರ ಹಾಕಿ ಅಗರಬತ್ತಿ ಉರಿಸಿದ್ದರು. ಫೊಟೋದ ಸಮೀಪ ಅರಶಿನ ಬಣ್ಣದ ಒಂದು ಕಲಶವಿತ್ತು. ಕಲಶದ ಮುಚ್ಚಳಕ್ಕೆ ಕೆಂಪುಬಣ್ಣದ ವಸ್ತ್ರ ಬಿಗಿದಿದ್ದರು. ಇದನ್ನೆಲ್ಲಾ ನೋಡಿ ನನಗೆ ದಿಗ್ಭ್ರಮೆಯಾಯಿತು.

ಅಷ್ಟರಲ್ಲಿ ಮಿನ್ಸುಕಾನಕಾ ಕಪ್ಪು ಬಣ್ಣದ ಕಿಮೋನೋ (ಜಪಾನಿಯರ ಉಡುಪು) ಹಾಗೂ ಪಾವರಕ್ಷೆಗಳನ್ನು ಹಿಡಿದುಕೊಂಡು ಅಲ್ಲಿಗೆ ಬಂದಳು. 'ಮೊದಲು ನೀವು ಕೈಕಾಲು ಮುಖ ತೊಳೆದುಕೊಂಡು ಬನ್ನಿ. ಆಮೇಲೆ ಆರಾಮವಾಗಿ ಮಾತನಾಡೋಣವಂತೆ,' ಎಂದಳು. 'ನಾನು ಬಾತ್‌ರೂಮಿಗೆ ಹೋಗಿ ಸ್ನಾನಮುಗಿಸಿ, ಶುಭ್ರವಾದ ಕಿಮೊನೋ ಧರಿಸಿ, ಡ್ರಾಯಿಂಗ್ ರೂಮಿಗೆ ಹಿಂತಿರುಗಿದೆ. ಆ ವೇಳೆಗೆ ಆಕೆಯೂ ತನ್ನ ಉಡುಪು ಬದಲಾಯಿಸಿ ಅಲ್ಲಿಗೆ ಬಂದಿದ್ದಳು. ನಾನು ಮಿನ್ಸುಕಾನಕಾಳ ಕುಟುಂಬದವರ ಬಗ್ಗೆ ವಿಚಾರಿಸಿದೆ. ಆಗ ಆಕೆ 'ಈ ಜಗತ್ತಿನಲ್ಲಿ ನಾನು ಒಂಟಿಯಾಗಿದ್ದೇನೆ. ಆದರೆ ತಂತ್ರವಿದ್ಯೆ ಸದಾ ನನ್ನ ನೆರವಿಗಿದೆ,'ಅಂದಳು. ಬೀರುವಿನಲ್ಲಿ ಬುದ್ಧ ಭಗವಾನರ ಮೂರ್ತಿಯ ಪಕ್ಕದಲ್ಲಿದ್ದ ಫೊಟೋ ಪ್ರಾಯಃ ಮಿನ್ಸುಕಾನಕಾಳ ಗತಿಸಿದ ಪತಿಯದಾಗಿರಬಹುದು ಎಂದು ಭಾವಿಸಿದ್ದೆ. ಆದರೆ ಅದು ಆಕೆಯ ಮಗನ ಫೋಟೋ ಎಂದು ತಿಳಿದುಬಂತು. ಆ ಫೋಟೋದ ಪಕ್ಕದಲ್ಲಿದ್ದ ಕಲಶದಲ್ಲಿ ಮಗನ ಅಸ್ಥಿಗಳಿವೆ ಎಂದು ಆಕೆ ಹೇಳಿದಳು. 'ಎಲ್ಲರಿಗೂ ಸತ್ತ ಬಳಿಕ ಮೋಕ್ಷ ಪ್ರಾಪ್ತಿಯಾಗಲು ನೆರವಾಗುವ ನನಗೆ ನನ್ನ ಮಗನ ಅಸ್ಥಿಗಳಿಗೇ ಮೋಕ್ಷ ಒದಗಿಸಲು ಸಾಧ್ಯವಾಗಿಲ್ಲ. ನೀವು ಇಂದ್ರಜಾಲವಿದ್ಯೆ ಕಲಿತಿರುವ ಹೆಸರಾಂತ ಜಾದೂಗಾರರಾಗಿದ್ದೀರಿ. ಈ ದಿಶೆಯಲ್ಲಿ ನೀವು ನನಗೆ ಸಹಾಯ ಮಾಡುತ್ತೀರೆಂಬ ಆಕಾಂಕ್ಷೆಯಿಂದ ನಿಮ್ಮನ್ನು ಇಲ್ಲಿಗೆ ಬರಮಾಡಿಕೊಂಡಿದ್ದೇನೆ,'ಎಂದಳು ಮಿನ್ಸುಕಾನಕಾ.

'ಭಾರತ ಮತ್ತು ಜಪಾನಿನಲ್ಲಿ ಮೋಕ್ಷ ಪ್ರಾಪ್ತಿಗೆ ಸಂಬಂಧಿಸಿದಂತೆ ಪರಿಕಲ್ಪನೆಗಳು ವಿಭಿನ್ನವಾಗಿವೆ. ನಮ್ಮ ದೇಶದಲ್ಲಿ ಮೃತರ ಅಸ್ಥಿಗಳನ್ನು ಗಂಗಾನದಿಯಲ್ಲಿ ವಿಸರ್ಜಿಸಿದ ಬಳಿಕ ಅವರಿಗೆ ಮುಕ್ತಿ ಲಭಿಸಿತೆಂಬ ನಂಬಿಕೆ ಜನರಲ್ಲಿದೆ. ಆದರೆ ಜಪಾನಿನಲ್ಲಿ ಮೋಕ್ಷದ ಪರಿಕಲ್ಪನೆಯ ಬಗ್ಗೆ ನನಗೆ ತಿಳುವಳಿಕೆ ಇಲ್ಲ. ಈ ಬಗ್ಗೆ ನನಗೆ ಹೆಚ್ಚಿನ ಮಾಹಿತಿ ದೊರೆತರೆ ನಿಮಗೇನಾದರೂ ಸಹಾಯ ಮಾಡಬಹುದೇನೋ,' ಎಂದು ನಾನು ಆಕೆಗೆ ಹೇಳಿದೆ.

'ಜಪಾನಿನಲ್ಲಿ ಮೃತರಿಗೆ ಮೋಕ್ಷ ಪ್ರಾಪ್ತಿ ಹೇಗಾಗುತ್ತದೆ ಎಂಬುದನ್ನು ತಿಳಿಯುವ ಆಸಕ್ತಿ ನಿಮಗಿದೆಯಲ್ಲವೆ? ಹಾಗಾದರೆ ನಾವು 'ಬೀಚ್‌ಹೌಸ್'ಗೆ ಹೋಗೋಣ. ಅಲ್ಲಿ ನಿಮಗೆ ಎಲ್ಲವೂ ಸ್ಪಷ್ಟವಾಗುತ್ತದೆ,' ಎಂದಳು ಮಿನ್ಸುಕಾನಕಾ. ನಾನು ಅವಳ ಜೊತೆ ಹೊರಡಲು ತಯಾರಾದೆ.

ಮಿನ್ಸುಕಾನಕಾ ಒಳಗೆ ಬೆಡ್‌ರೂಂಗೆ ಹೋಗಿ ಎರಡು ಸೂಟ್‌ಕೇಸ್‌ಗಳೊಂದಿಗೆ ಹೊರಬಂದಳು. ಅವುಗಳನ್ನಾಕೆ ಹೊರಗೆ ಕಾರಿನಲ್ಲಿರಿಸಿದಳು. ಅನಂತರ ಒಳಬಂದು ಮಗನ ಅಸ್ಥಿಗಳು ತುಂಬಿದ ಕಲಶವನ್ನು ತೆಗೆದುಕೊಂಡಳು. ಕಲಶವನ್ನೂ ಸೂಟ್‌ಕೇಸ್‌ನಲ್ಲಿರಿಸಿದ ಬಳಿಕ ಕಾರಿನ ಮುಂದಿನ ಸೀಟಿನಲ್ಲಿ ಕುಳಿತುಕೊಳ್ಳಲು ನನಗೆ ಸೂಚಿಸಿದಳು. ಅನಂತರ ಆಕೆ ನನ್ನ ಪಕ್ಕದಲ್ಲಿ ಕುಳಿತು ಕಾರು ನಡೆಸತೊಡಗಿದಳು.

## ಬೀಚ್‌ಹೌಸ್‌ನಲ್ಲಿ

ಕ್ರಮೇಣ ಕತ್ತಲು ಆವರಿಸತೊಡಗಿತ್ತು. ಮಿನ್ಸುಕಾನಕಾಳ ಕಾರು ಆರಂಭದಲ್ಲಿ ನಿಧಾನವಾಗಿ ಚಲಿಸುತ್ತಿತ್ತು. ನಗರ ಪ್ರದೇಶವನ್ನು ದಾಟುತ್ತಿದ್ದಂತೆ ಕಾರು ವೇಗದಿಂದ ಧಾವಿಸತೊಡಗಿತು. ಸುಮಾರು ನಲ್ವತ್ತು ನಿಮಿಷ ಪ್ರಯಾಣಿಸಿದ ಬಳಿಕ ಕಾರು

'ಬೀಚ್ ಹೌಸ್' ತಲುಪಿತು. ಬೀಚ್ ಹೌಸ್ ಆಸುಪಾಸಿನಲ್ಲಿ ಬೇರೆ ಯಾವ ಮನೆಗಳೂ ಇರಲಿಲ್ಲ. ದೂರದಲ್ಲಿ ಸಮುದ್ರದ ಮೊರೆತವೊಂದೇ ಸದಾ ಕೇಳಿಬರುತ್ತಿತ್ತು.

ಮಿನ್ನುಕಾನಕಾ ಚಾವಿಯಿಂದ ಮನೆಯ ಬಾಗಿಲು ತೆರೆದು ಒಳ ಪ್ರವೇಶಿಸಿದಳು. ನಾನೂ ಅವಳನ್ನು ಹಿಂಬಾಲಿಸಿದೆ. ಒಳಗಿನ ಗೋಡೆಯಲ್ಲಿದ್ದ ಒಂದು ಬಟನ್ ಒತ್ತಿದಾಗ ಕೆಂಪು ಹಾಗೂ ನೀಲಿ ಬಣ್ಣದ ಇಲೆಕ್ಟ್ರಾನಿಕ್ ಲೈಟುಗಳು ಬೆಳಗಿದವು. 'ಇಲ್ಲಿಗೆ ನಾನಲ್ಲದೆ ಬೇರೆ ಯಾರೂ ಬರುವುದಿಲ್ಲ. ನನ್ನ ಎಲ್ಲ ತಾಂತ್ರಿಕ ವಿಧಿಗಳನ್ನೂ ಇಲ್ಲಿಯೇ ನಿರ್ವಹಿಸುತ್ತಿದ್ದೇನೆ,' ಎಂದಾಕೆ ಹೇಳಿದಳು.

ಕಾರಿನಲ್ಲಿದ್ದ ಸೂಟ್‌ಕೇಸ್ ಹಾಗೂ ಕಲಶವನ್ನು ಒಳಗೆ ತಂದ ಬಳಿಕ ಆಕೆ ಬಾಗಿಲು ಮುಚ್ಚಿದಳು. 'ಬೀಚ್ ಹೌಸ್' ಹೊರನೋಟಕ್ಕೆ ಒಂದು ಕುಟೀರದಂತೆ ಕಂಡರೂ ಒಳಗೆ ಸಾಕಷ್ಟು ವಿಶಾಲವಾಗಿತ್ತು. ಒಳಗೊಂದು ಬಾಗಿಲು. ಆ ಬಾಗಿಲನ್ನು ತೆರೆದು ಆಕೆ ತನ್ನನ್ನು ಹಿಂಬಾಲಿಸಲು ಹೇಳಿದಳು. ಒಳಗಿನ ಕೋಣೆ ಗುಹೆಯ ಆಕಾರದಲ್ಲಿತ್ತು. ಅಲ್ಲಿ ಗೋಡೆಯ ಪಕ್ಕದ ಅಲ್ಮಾರಿನ ಮೇಲೆ ಕಿಟಕಿಯ ಬದಿಗಳಲ್ಲಿ ಕಪ್ಪು ಹಾಗೂ ಬೂದು ಬಣ್ಣದ ಕಲ್ಲುಗಳಿದ್ದವು. ಗುಹೆಯಂತೆ ಕಾಣುವ ಈ ಕೊಠಡಿಯಲ್ಲಿ ಮೊಂಬತ್ತಿಯಾಕಾರದ ಇಲೆಕ್ಟ್ರಾನಿಕ್ ಲೈಟ್‌ಗಳಿದ್ದುವು. ಆ ಕೊಠಡಿಯನ್ನು ಪ್ರವೇಶಿಸುತ್ತಿದ್ದಂತೆಯೇ ಸೂಟ್‌ಕೇಸ್‌ನಿಂದ ಪುರುಷರು ಧರಿಸುವ ಉಡುಪನ್ನು ಹೊರತೆಗೆದು ಧರಿಸಲು ನನಗೆ ನೀಡಿ ಒಂದು ಜೊತೆ ಉಡುಪನ್ನು ತನ್ನೊಂದಿಗೆ ಇರಿಸಿಕೊಂಡಳು. 'ಎದುರು ಗೋಡೆಯ ಪಕ್ಕದಲ್ಲಿ ಒಂದು ಏಣಿ ಮೆಟ್ಟಲಿದೆಯಲ್ಲವೆ? ಅದರ ಮೂಲಕ ಇಳಿದು ಕೆಳಗಿನ ಕೋಣೆಗೆ ಹೋಗಬಹುದು. ಅಲ್ಲಿ ಹೋಗಿ ನಿಮ್ಮ ಬಟ್ಟೆ ಬದಲಾಯಿಸಿ ಬನ್ನಿ. ಆ ವೇಳೆಗೆ ನಾನೂ ಬಟ್ಟೆ ಬದಲಾಯಿಸಿ ಸಿದ್ಧವಾಗುತ್ತೇನೆ,' ಎಂದಳು ಮಿನ್ನುಕಾನಕಾ.



ಮಿನ್ನುಕಾನಕಾ

ಮಿನ್ನುಕಾನಕಾ ನೀಡಿದ ಉಡುಪುಗಳನ್ನು ತೆಗೆದುಕೊಂಡು ಆ ಕಡೆ ಹೆಜ್ಜೆ ಹಾಕಿದೆ. ಕಲ್ಲಿನಿಂದ ನಿರ್ಮಾಣವಾದ ಆ ಗೋಡೆಯಲ್ಲಿಯೇ ಎರಡು ಭಾಗಗಳಿದ್ದವು. ಎರಡು ಭಾಗಗಳ ತಳದಲ್ಲಿ ಉಪ್ಪರಿಗೆ ಮೆಟ್ಟಿಲುಗಳಿದ್ದುವು. ಅವುಗಳ ಮೂಲಕ ಕೆಳಗಿನ ಕೊಠಡಿಗಳಿಗೆ ಹೋಗಬಹುದಾಗಿತ್ತು.

ಏಣಿ ಮೆಟ್ಟಲಿಳಿದು ಕೆಳಗಿನ ಕೊಠಡಿ ಪ್ರವೇಶಿಸಿದೆ. ಅದೂ ಒಂದು ಗುಹೆಯ ಮಾದರಿಯ ಕೊಠಡಿ. ಅಲ್ಲಿಯೂ ಇಲೆಕ್ಟ್ರಾನಿಕ್ ಲೈಟುಗಳಿದ್ದುವು. ನಾನು ಕಪ್ಪು ಕಿಮೊನೊ ಕಳಚಿ ಸ್ವಚ್ಛವಾದ ಬಿಳಿ ಉಡುಪು ಧರಿಸಿದೆ. ಅಷ್ಟು ಹೊತ್ತಿಗೆ ಮಿನ್ನುಕಾನಕಾ ಶ್ವೇತ ನಿಲುವಂಗಿ ಧರಿಸಿ ಸಿದ್ಧಳಾಗಿದ್ದಳು.

ಆಕೆಯ ಮೇಲೆ ನೆಟ್ಟ ದೃಷ್ಟಿಯನ್ನು ನನ್ನಿಂದ ಕೀಳಲಾಗಲಿಲ್ಲ. ಆಕೆ ತಂತ್ರವಿದ್ಯೆಯಲ್ಲಿ ಪರಿಣತಳಾದ ಭೈರವಿಯಂತೆ ಕಾಣಸುತ್ತಿದ್ದಳು. ಕುತ್ತಿಗೆಯಲ್ಲಿ ರುದ್ರಾಕ್ಷಿ ಮಾಲೆ ಧರಿಸಿದ್ದಳು. ಕೈಯಲ್ಲಿ ನವಿಲುಗರಿಯ ಬೀಸಣಿಗೆ ಇತ್ತು. ಮುಖದಲ್ಲಿ ಅಪೂರ್ವ ಕಳೆ, ಕಣ್ಣುಗಳಲ್ಲಿ ವಿಲಕ್ಷಣ ತೇಜಸ್ಸು.

ಮಿನ್ನುಕಾನಕಾ ನನ್ನತ್ತ ದೃಷ್ಟಿ ಬೀರಿ ಎಡಭಾಗದ ಗೋಡೆಯತ್ತ ಹೆಜ್ಜೆ ಹಾಕಿದಳು. ಹೊರನೋಟಕ್ಕೆ ಆ ಗೋಡೆ ಕಲ್ಲಿನಿಂದ ನಿರ್ಮಾಣವಾಗಿರುವಂತೆ

ಭಾಸವಾಗುತ್ತಿತ್ತು. ಆದರೆ ಆಕೆ ಗೋಡೆಯಲ್ಲಿದ್ದ ಗೋಲಾಕೃತಿಯ ತಿರುಗಣೆಯನ್ನು ತಿರುಗಿಸಿದಾಗ ವಿಚಿತ್ರ ಧ್ವನಿ ಹೊರಡಿಸುತ್ತಾ ಗೋಡೆಯ ಒಂದು ಪಕ್ಕ ಸೀಳಾಗಿ ತೆರೆದುಕೊಂಡಿತು. ಅಲ್ಲಿಯೂ ಒಂದು ಗುಹೆಯ ಸ್ವರೂಪದ ಕೊಠಡಿ ಇರಬಹುದೆಂದು ಭಾವಿಸಿದ ನಾನು ಆ ದಿಶೆಯಲ್ಲಿ ಹೆಜ್ಜೆ ಹಾಕಿದೆ. ಯಾವುದನ್ನು ನಾನು ಕಲ್ಲಿನ ಗೋಡೆಯ ಒಂದು ಭಾಗವಿದ್ದಿರಬಹುದೆಂದು ಭಾವಿಸಿದ್ದೆನೋ ಅದು ವಾಸ್ತವವಾಗಿ ಮರವೊಂದರ ಹಳೆಯ ಕಾಂಡದಿಂದ ನಿರ್ಮಿಸಿದ ಮರದ ಗೋಡೆಯಾಗಿತ್ತು. ಬಾಗಿಲು ತೆರೆದ ಬಳಿಕ ಮಿನ್ನುಕಾನಕಾ ಅಲ್ಲಿಗೆ ಬರುವಾಗ ತಂದಿದ್ದ ಸೂಟ್‌ಕೇಸ್ ಮತ್ತು ಅಸ್ಥಿಕಲಶದೊಂದಿಗೆ ಒಳ ಹೋದಳು. ಅವಳನ್ನು ಹಿಂಬಾಲಿಸುವಂತೆ ನನಗೂ ಸಂಜ್ಞೆ ಮಾಡಿದಳು. ನಾನೂ ಸದ್ದುಮಾಡದೆ ಅವಳನ್ನು ಹಿಂಬಾಲಿಸಿದೆ. ಆ ಕೋಣೆಯಲ್ಲೂ ಬಣ್ಣ ಬಣ್ಣದ ಇಲೆಕ್ಟ್ರಾನಿಕ್ ಲೈಟುಗಳು ಬೆಳಗುತ್ತಿದ್ದುವು. ಆ ಕೊಠಡಿಯ ಸುತ್ತ ಮುತ್ತ ದೃಷ್ಟಿ ಹಾಯಿಸಿದಾಗ ಅಲ್ಲಿ ಯಾವುದೋ ಯಜ್ಞಕ್ಕೆ ಸಿದ್ಧತೆ ನಡೆಯುತ್ತಿದ್ದ ಹಾಗೆ ಭಾಸವಾಯಿತು. ಮರದ ಗೋಡೆಯ ನಡುವೆ ಅಲ್ಲಲ್ಲಿ ಸಣ್ಣ ಸಣ್ಣ ಕಿಂಡಿಗಳಲ್ಲಿ ನಾನಾ ವಿಧದ ಬೌದ್ಧಮೂರ್ತಿಗಳು ಇರಿಸಲ್ಪಟ್ಟಿದ್ದುವು. ಮೂರ್ತಿಗಳ ಪಕ್ಕದಲ್ಲಿ ತಾಮ್ರದ ಕೆತ್ತಿದ ಹಲವು ಬಗೆಯ ಯಂತ್ರಗಳಿದ್ದುವು. ಕಟ್ಟಿಗೆಯಿಂದ ರಚಿಸಿದ ಹಾವು ಮತ್ತು ನರಿಯ ಆಕೃತಿಗಳಿದ್ದುವು. ಒಂದು ಮೂಲೆಯಲ್ಲಿ ಕಾಳಿಯ ದೊಡ್ಡ ವಿಗ್ರಹವಿತ್ತು. ಅದರ ಎದುರುಗಡೆ ಪೂಜಾ ಸಾಮಗ್ರಿಗಳು ಇದ್ದವು.

ಕೊಠಡಿಯಲ್ಲಿ ಮಧ್ಯದಲ್ಲೊಂದು ಹೋಮ ಕುಂಡ. ನನಗೆ ಕುಳಿತುಕೊಳ್ಳಲು ಸೂಚಿಸಿ, ಮಿನ್ನು ಕಾನಕಾ ಅಸ್ಥಿಕಲಶ ಮತ್ತು ಸೂಟ್‌ಕೇಸ್‌ಗಳನ್ನು ಹೋಮಕುಂಡದ ಬಳಿ ಇರಿಸಿ ತಾನು ತುಸು ಎತ್ತರಿಸಿದ ವೇದಿಕೆಯ ಮೇಲೆ ಕುಳಿತಳು. ಸೂಟ್‌ಕೇಸ್‌ನಲ್ಲಿ ಸಮಿತ್ತು ಮುಂತಾದ ಹೋಮದಲ್ಲಿ ಬಳಸುವ ಸಾಮಗ್ರಿಗಳು ಇದ್ದವು. ಮಿನ್ನುಕಾನಕಾ ಮೌನವಾಗಿ ಹವನದ ಸಿದ್ಧತೆಗೆ ತೊಡಗಿದಳು. ನಾನು ಕುತೂಹಲ ಹತ್ತಿಕ್ಕಿ ಕೊಳ್ಳಲಾರದೆ, "ಪ್ರಾಯಃ ನೀವು ಮೋಕ್ಷ ಪ್ರಾಪ್ತಿಯ ಕ್ರಿಯಾವಿಧಿಗೆ ಸಿದ್ಧತೆ ನಡೆಸುತ್ತಿದ್ದೀರಲ್ಲವೆ? ಇದೆಲ್ಲ ಮಂತ್ರ ತಂತ್ರಗಳ ಮೂಲಕವೇ ಸಾಧ್ಯವೇ"ಎಂದು ಕೇಳಿದೆ.

"ಅದಿಲ್ಲದೆ ಯಾವುದೂ ಸಾಧ್ಯವಾಗದು," ಎಂದ ಮಿನ್ನುಕಾನಕಾ, "ಮೊದಲು ನಾವು ಮಂತ್ರೋಚ್ಚಾರದ ಮುಖಾಂತರ, ವ್ಯಕ್ತಿಯ ಅಸ್ಥಿಗಳನ್ನು 'ಮಮ್ಮಿ'ಯ ರೂಪಕ್ಕೆ ಪರಿವರ್ತಿಸುತ್ತೇವೆ. ಮುಕ್ತಿ ದೊರಕಿಸಿಕೊಡಲು ಪ್ರಯತ್ನಿಸುತ್ತೇವೆ," ಎಂದಳು. 'ಆದರೆ ಮೃತನಿಗೆ ಮುಕ್ತಿ ದೊರೆತದ್ದು ನಿಮಗೆ ಗೊತ್ತಾಗುವುದಾದರೂ ಹೇಗೆ?' ಎಂದು ನಾನು ಪ್ರಶ್ನಿಸಿದೆ.

'ಮಂತ್ರಶಕ್ತಿಯ ಪ್ರೇರಣೆಯಿಂದ ಕಲಶದಲ್ಲಿರುವ ಅಸ್ಥಿಗಳು ತಮ್ಮಷ್ಟಕ್ಕೆ ತಾವೇ ಹೊರಗೆ ನೆಗೆದು ಮಮ್ಮಿಯರೂಪ ತಾಳುತ್ತವೆ. ಅನಂತರ ನಾವು ಆ ಮೂಳೆಗಳ ಒಡೆಯನ ಆತ್ಮಕ್ಕೆ ಮುಕ್ತಿ ದೊರಕಲಿ ಎಂದು ಪ್ರಾರ್ಥಿಸುತ್ತೇವೆ. ತುಸು ಹೊತ್ತಿನ ತರುವಾಯ ಅಸ್ಥಿಗಳು ಪುನಃ ಕಲಶದೊಳಗೆ ಸೇರಿಕೊಳ್ಳುತ್ತವೆ. ಅನಂತರ ಅವುಗಳನ್ನು ನೆಲದಲ್ಲಿ ಹೂತುಹಾಕುತ್ತಾರೆ. ಅಸ್ಥಿಗಳು ಮಮ್ಮಿಯ ರೂಪ ತಾಳಲು ನಿರಾಕರಿಸಿದರೆ ಅಥವಾ ಮಂತ್ರೋಚ್ಚಾರ ಹಾಗೂ ಪ್ರಾರ್ಥನೆಯ ತರುವಾಯವೂ ಕಲಶದೊಳಗೆ ಸೇರಲು ನಿರಾಕರಿಸಿ ಹೊರಭಾಗದಲ್ಲಿಯೇ ಚೆದುರಿ ಹೋದರೆ ಮೃತಾತ್ಮಕ್ಕೆ ಮುಕ್ತಿ ಲಭಿಸುವುದಿಲ್ಲ. ನನ್ನ ಮಗನ ಅಸ್ಥಿಗಳು ಮಮ್ಮಿಯ ರೂಪ ತಾಳಲು ಅಥವಾ ಕಲಶದೊಳಗೆ ಮರು ಪ್ರವೇಶಿಸಲು ನಿರಾಕರಿಸಿವೆ. ಕಳೆದ ಒಂದು ವರ್ಷದಿಂದ ಹೀಗೇ ಆಗುತ್ತಿದೆ,' ಎಂದಳು ಮಿನ್ನುಕಾನಕಾ.

ಮಿನ್ನುಕಾನಕಾ ವರ್ಣಿಸಿದ ಇವೆಲ್ಲ ವಿಧಿಗಳನ್ನು ಕಣ್ಣಾರೆ ಕಾಣಬೇಕೆಂದು ಮೌನವಾಗಿ ಅವಳ ಎದುರು ಕುಳಿತೆ. ಮಿನ್ನುಕಾನಕಾ ಮೊದಲು ಹವನಕ್ಕೆ ಸಿದ್ಧತೆ ನಡೆಸಿದಳು. ಹವನದಲ್ಲಿ ಆಹುತಿಗಾಗಿ ಬಳಸುವ ಸಾಮಗ್ರಿಗಳನ್ನು ಸಜ್ಜುಗೊಳಿಸಿದಳು. ಅನಂತರ ನನ್ನತ್ತ ನೋಡುತ್ತಾ, "ಅಶೋಕ್, ನಿಮಗೆ ಗಾಯತ್ರಿ ಮಂತ್ರದ ಮಹತ್ವ ಗೊತ್ತಿರಬೇಕಲ್ಲವೆ? ಈ ಮಂತ್ರವನ್ನು ಶಾಪಮುಕ್ತಗೊಳಿಸಲು ನಾವು ಬಳಸಬೇಕು. ಮೃತಾತ್ಮಗಳಿಗೆ ಮುಕ್ತಿ

ನೀಡುವ ಈ ಕ್ರಿಯಾವಿಧಿಯಲ್ಲಿ ಗಾಯತ್ರಿ ಮಂತ್ರಕ್ಕೆ ಮಹತ್ವದ ಪಾತ್ರವಿದೆ," ಅಂದಳು.

ಗಾಯತ್ರೀ ಮಂತ್ರ ನನಗೂ ಗೊತ್ತಿತ್ತು. ನಿತ್ಯವೂ ಜಪ ಮಾಡುವ ಸಂದರ್ಭದಲ್ಲಿ ಸಾವಿರಾರು ಬಾರಿ ಈ ಮಂತ್ರ ಜಪಿಸಿದ್ದೇನೆ. ಆದರೆ ಮಿನ್ನುಕಾನಕಾ ಈ ಮಂತ್ರದ ಶಕ್ತಿಗೆ ಹೊಸ ಅರ್ಥವನ್ನೇ ನೀಡಿರುವುದು ನನಗೆ ಸೋಜಿಗ ಉಂಟು ಮಾಡಿತು. 'ನಮ್ಮ ಅಧ್ಯಾತ್ಮದ ಬಗ್ಗೆ, ಮಂತ್ರ ತಂತ್ರಗಳ ಬಗ್ಗೆ ನಿಮಗೆ ಇಷ್ಟೊಂದು ವಿದ್ವತ್ತು ಹೇಗೆ ಲಭಿಸಿತು?,' ಎಂದು ನಾನು ಪ್ರಶ್ನಿಸಿದಾಗ, 'ನಾನು ಈ ಹಿಂದೆ ಟಿಬೇಟ್ ಮತ್ತು ಹಿಮಾಲಯದ ಕೆಲವು ಸಾಧು-ಸಂತರ ಶಿಷ್ಯಳಾಗಿದ್ದೆ. ಭಾರತೀಯ ದರ್ಶನ ಶಾಸ್ತ್ರದ ಬಗ್ಗೆ ಅವರಿಂದ ಸಾಕಷ್ಟು ಕಲಿತಿದ್ದೇನೆ,' ಆಕೆ ಎಂದಳು.

ಎಲ್ಲ ಸಿದ್ಧತೆಗಳು ಮುಗಿದ ಬಳಿಕ ಮಿನ್ನುಕಾನಕಾ ತನ್ನ ಗುರುವನ್ನು ಮನದಲ್ಲಿಯೇ ಸ್ಮರಿಸಿ ಉದ್ದಂಡ ನಮಸ್ಕರಿಸಿದಳು. ಅನಂತರ ಭಕ್ತಿಯಿಂದ ಕೈಮುಗಿದು ಗಾಯತ್ರಿ ಮಂತ್ರವನ್ನು ಶಾಪಮುಕ್ತಿಗಾಗಿ ಉಚ್ಚರಿಸಿ ನನಗೂ ಅದೇ ರೀತಿ ಮಾಡುವಂತೆ ಹೇಳಿದಳು. ಅನಂತರ ಮಂತ್ರ ಉಚ್ಚರಿಸುತ್ತಾ ಹೋಮಕುಂಡದಲ್ಲಿ ಅಗ್ನಿ ಜ್ವಲಿಸುವಂತೆ ಮಾಡಿದಳು. ವಿಭಿನ್ನ ಬಗೆಯ ಮಂತ್ರಗಳನ್ನು ಪಠಿಸುತ್ತಾ ಸಮೀಪದಲ್ಲಿದ್ದ ಹವನ ಸಾಮಗ್ರಿಗಳನ್ನು ಹೋಮಕುಂಡದ ಅಗ್ನಿಗೆ ಆಹುತಿ ನೀಡತೊಡಗಿದಳು. ಈ ಮಧ್ಯೆ ಆಕೆ ಕಲಶದ ಮುಚ್ಚಳಕ್ಕೆ ಬಿಗಿದ ಕೆಂಪು ವಸ್ತ್ರ ತೆಗೆದಳು. ಒಂದು ಗಮನಾರ್ಹ ಅಂಶವೆಂದರೆ ಮಿನ್ನುಕಾನಕಾ ಸಂಸ್ಕೃತದಲ್ಲಿ ಮಾತ್ರವಲ್ಲ, ಪಾರಸಿ, ಟಿಬೇಟಿ, ತಮಿಳು ಭಾಷೆಗಳಲ್ಲೂ ಮಂತ್ರ ಉಚ್ಚರಿಸುತ್ತಿದ್ದಳು. ಸುಮಾರು ಅರ್ಧ ತಾಸು ಆಕೆ ಮಂತ್ರ ಉಚ್ಚರಿಸುತ್ತಾ, ಅಗ್ನಿಗೆ ಆಹುತಿ ನೀಡುತ್ತಾ ಇದ್ದಳು. ಬಳಿಕ ಆಕೆ ಅತ್ಯಂತ ವೇಗವಾಗಿ ಗಂಭೀರ ಧ್ವನಿಯಲ್ಲಿ ಮಂತ್ರ ಉಚ್ಚರಿಸಲು ಪ್ರಾರಂಭಿಸಿದಾಗ ಕಲಶದೊಳಗೆ ಸದ್ದು ಹೊರಟಿತು. ಅದರೊಳಗಿಂದ ಹೊಗೆ ಹೊಮ್ಮುತ್ತಿತ್ತು. ಆ ಹೊಗೆ ನಿಧಾನವಾಗಿ ಮನುಷ್ಯಾಕೃತಿಯ ರೂಪ ತಾಳಿತು.




ಹದಿನೈದು ನಿಮಿಷಗಳ ಬಳಿಕ ಮಿನ್ನುಕಾನಕಾ ತಾರಕ ಧ್ವನಿಯಲ್ಲಿ ಒಂದು ಮಂತ್ರವನ್ನು ಉಚ್ಚರಿಸುತ್ತಾ ಅಗ್ನಿಗೆ ತುಪ್ಪದ ಆಹುತಿ ನೀಡತೊಡಗಿದಳು. ಅದೇ ಕ್ಷಣದಲ್ಲಿ ಮನುಷ್ಯಾಕೃತಿಯ ಹೊಗೆ ಇದ್ದಕ್ಕಿದ್ದಂತೆ ಮಾಯವಾಯಿತು. ಕಲಶದೊಳಗಿಂದ ಏನೋ ಹೊರಬೀಳುವ ಸದ್ದು ಕೇಳಿಸತೊಡಗಿತು. ಕಣ್ಣು ಮುಚ್ಚಿ ತೆರೆಯುವುದರಲ್ಲಿ ಕಲಶದ ಸುತ್ತ ನಾಲ್ಕು ಕಡೆ ಮಾನವ ಅಸ್ಥಿಗಳು ಚದುರಿ ಚೆಲ್ಲಾಪಿಲ್ಲಿಯಾಗಿ ಬಿದ್ದಿದ್ದವು. ಮಿನ್ನುಕಾನಕಾ ವಿಸ್ಮಯಭಾವದಿಂದ ಆ ಅಸ್ಥಿಗಳನ್ನೇ ನೋಡತೊಡಗಿದಳು. ಮರುಕ್ಷಣದಲ್ಲಿ ಅವಳ ಕಣ್ಣುಗಳಲ್ಲಿ ದುಃಖದ ಛಾಯೆ ಆವರಿಸಿತು. ಸ್ವಲ್ಪ ಹೊತ್ತು ಮೌನವಾಗಿದ್ದ ಆಕೆ ನನ್ನತ್ತ ನೋಡುತ್ತಾ ದುಃಖಬಿಗಿದ ಸ್ವರದಲ್ಲಿ ಹೇಳಿದಳು, 'ನೋಡಿದಿರಾ ಅಶೋಕ್, ನಾನು ನಿಷ್ಠೆಯಿಂದ ನಿರ್ವಹಿಸಿದ ಎಲ್ಲ ವಿಧಿಗಳೂ ನಿಷ್ಫಲವಾದುವು. ನನ್ನ ಮಗನ ಅಸ್ಥಿಗಳು ಕಲಶದೊಳಗೆ ಮತ್ತೆ ಪ್ರವೇಶಿಸಲಿಲ್ಲ. ಅವನಿಗೆ ಹೇಗೆ ನಾನು ಮುಕ್ತಿ ಕರುಣಿಸಲಿ ನೀವೇ ಹೇಳಿ? ಅವನ ಆತ್ಮ ನೆಲೆ ಕಾಣದೆ ಎಲ್ಲೆಲ್ಲಿ ಅಡ್ಡಾಡುತ್ತಿದೆಯೋ!'

ಆ ಸಂದರ್ಭದಲ್ಲಿ ಮಿನ್ನುಕಾನಕಾಳ ಮುಖದಲ್ಲಿ

ದುಃಖ, ಅಸಹಾಯಕತೆ, ರೋಷ ಮಡುವುಗಟ್ಟಿತ್ತು. ಹೊರಗಡೆ ಜಪಾನಿ ದೇಶದ ಚಿರಪರಿಚಿತ ಉಗ್ರ ಚಳಿಯ ವಾತಾವರಣವಿದ್ದರೂ ಒಳಗೆ ಮಿನ್ನುಕಾನ ಕಾಳ ಮೈಯಿಂದ ಬೆವರು ಸುರಿಯುತ್ತಿತ್ತು. ಆಕೆ ಮತ್ತೆ ಅಸ್ಥಿಗಳನ್ನೆಲ್ಲಾ ಒಟ್ಟುಗೂಡಿಸಿ, ಕಲಶದೊಳಗೆ ತುಂಬಿ, ಮತ್ತೊಮ್ಮೆ ವಿಧಿವತ್ತಾಗಿ ಮಂತ್ರ ಉಚ್ಚ ರಿಸಲು ಆರಂಭಿಸಿದಳು. ಈ ಬಾರಿಯೂ ಹೊಗೆಯ ರೂಪದಲ್ಲಿ ಮಾನವಾಕೃತಿ ಕಾಣಿಸಿಕೊಂ ಡಿತು. ಆದರೆ ಅಸ್ಥಿಗಳೆಲ್ಲ ಕಲಶದ ಹೊರಗೆ ಚೆದುರಿ ಬಿದ್ದುವೇ ಹೊರತು ಕಲಶದೊಳಗೆ ಮರುಪ್ರವೇಶ ಮಾಡಲಿಲ್ಲ. ಮಿನ್ನುಕಾನಕಾ ಮೂರು ಬಾರಿ ಈ ಕ್ರಿಯಾವಿಧಿ ನಡೆಸಿದಳು. ಮೂರು ಬಾರಿಯೂ ಹೀಗೇ ಆಯಿತು. ಕೊನೆಗೆ ಆಕೆ ಅಸಹಾಯಳಾಗಿ ಸೋತಧ್ವನಿಯಲ್ಲಿ ಅಶೋಕ್, "ಈಗ ನೀವೇ ಹೇಳಿ, ನಾನೇನು ಮಾಡಲಿ?" ಎಂದು ಕೇಳಿದಳು.

ನಾನು ತುಸುಹೊತ್ತು ಈ ಬಗ್ಗೆ ಯೋಚಿಸಿ, "ಈ ಕೆಲಸ ಇಲ್ಲಿ ನಿಮ್ಮಿಂದ ಸಾಧ್ಯವಿಲ್ಲ ಮೇಡಂ, ನಿಮ್ಮ ಮಗನ ಅಸ್ಥಿಗಳನ್ನು ತೆಗೆದುಕೊಂಡು ಭಾರ ತಕ್ಕೆ ಬನ್ನಿ," ಎಂದೆ. ವಾಸ್ತವವಾಗಿ ಭಾರತದಲ್ಲಿಯೂ ಅವಳ ಮಗನ ಅಸ್ಥಿಗಳಿಗೆ ಮುಕ್ತಿ ದೊರಕಬಹು ದೆನ್ನುವ ಭರವಸೆ ನನಗಿರಲಿಲ್ಲ. ಆದರೂ ಆಕೆಗೆ ಸಮಾಧಾನವಾಗಲು ಹಾಗೆ ಹೇಳಿದ್ದೆ. ಆದರೆ ಮಿನ್ನುಕಾನಕಾ ತನ್ನ ಮಗನ ಅಸ್ಥಿಗಳೊಂದಿಗೆ ಭಾರತಕ್ಕೆ ಹೊರಡಲು ಸಿದ್ಧಳಾದಳು. 'ಭಾರತಕ್ಕೆ ಹಿಂತಿರುಗಿದ ಬಳಿಕ ನಾನು ಪತ್ರ ಬರೆಯುತ್ತೇನೆ. ಆನಂತರವೇ ನೀವು ಬಂದರೆ ಸಾಕು,' ಎಂದು ನಾನು ಆಕೆಯಲ್ಲಿ ಭರವಸೆ ತುಂಬಿದೆ.

* * * * * *

ಬೀಚ್‌ಹೌಸ್‌ನಲ್ಲಿ ನಾಲ್ಕು ತಾಸು ಕಳೆದ ಬಳಿಕ ನಾವು ಅದೇ ಕಾರಿನಲ್ಲಿ ಇವಾಕೀಸಿಟಿಗೆ ವಾಪಸಾ ದೆವು. ಪ್ರಯಾಣದುದ್ದಕ್ಕೂ ಮಿನ್ನುಕಾನಕಾ ತನ್ನ ಜೀವನದ ದುಃಖದ ಕಥೆಯನ್ನು ಹೇಳುತ್ತಾ ಹೋದಳು. ಹತ್ತು ವರ್ಷದ ಹಿಂದೆ ಅವಳ ಪತಿ ಆತ್ಮಹತ್ಯೆ ಮಾಡಿಕೊಂಡಿದ್ದ. ಒಂದು ವರ್ಷದ ಹಿಂದೆ ಅವಳ ೧೨ರ ಹರೆಯದ ಏಕೈಕ ಪುತ್ರ ಬಸ್ಸಿನಲ್ಲಿ ಪ್ರಯಾಣಿಸುತ್ತಿದ್ದಾಗ ಬಸ್ಸಿಗೆ ಬೆಂಕಿ ಹತ್ತಿಕೊಂಡು ಆತ ಜೀವಂತ ದಹಿಸಲ್ಪಟ್ಟಿದ್ದ.

ಮಿನ್ನುಕಾನಕಾಳಿಗೆ ನಾನು ವಿದಾಯ ಹೇಳು ವಾಗ ಮತ್ತೊಮ್ಮೆ ಆಕೆ ದುಃಖಭರಿತ ಧ್ವನಿಯಲ್ಲಿ, 'ಭಾರತಕ್ಕೆ ಹಿಂತಿರುಗಿದ ಕೂಡಲೇ ಮರೆಯದೇ ಪತ್ರ ಬರೆಯಿರಿ. ನಾನು ಮಗನ ಅಸ್ಥಿಗಳೊಂದಿಗೆ ನಿಮ್ಮಲ್ಲಿಗೆ ಬರ್ತೇನೆ,' ಎಂದಳು. ನಾನು 'ಹಾಗೇ ಆಗಲಿ,' ಎಂಧು ತಲೆ ಅಲ್ಲಾಡಿಸಿದೆ.

ಭಾರತಕ್ಕೆ ಹಿಂತಿರುಗಿದ ಬಳಿಕ ನಾನು ಹೆಚ್ಚು ಕಡಿಮೆ ಮಿನ್ನುಕಾನಕಾಳನ್ನು ಮರೆತು ನನ್ನ ನಿತ್ಯದ ಜಂಜಾಟದಲ್ಲಿ ತೊಡಗಿಕೊಂಡೆ. ಎರಡು ತಿಂಗಳ ಬಳಿಕ ಅವಳಿಂದ ಪತ್ರ ಬಂತು. ಮಿನ್ನುಕಾನಕಾಳನ್ನು ಭಾರತಕ್ಕೆ ಆಹ್ವಾನಿಸಿ ಅವಳ ಪುತ್ರನ ಅಸ್ಥಿಗಳನ್ನು ಪುಣ್ಯಕ್ಷೇತ್ರ ಹರದ್ವಾರದಲ್ಲಿ ಗಂಗಾನದಿಯಲ್ಲಿ ವಿಸ ರ್ಜಿಸುವುದೇ ಉತ್ತಮ ಆಗಲಾದರೂ ಅವಳ ಮಗನ ಅಸ್ಥಿಗಳಿಗೆ ಮುಕ್ತಿ ಲಭಿಸಬಹುದು ಎಂದು ನನಗೆ ಅನಿಸಿತು. ಆದರೆ ಮಿನ್ನುಕಾನಕಾಳಿಗೆ ಇದ ರಿಂದ ಮನಸ್ಸಮಾಧಾನವಾದೀತು ಎಂಬ ನಂಬಿಕೆ ನನಗಿರಲಿಲ್ಲ. ಆದುದರಿಂದ ಉದ್ದೇಶಪೂರ್ವಕವಾಗಿ ನಾನು ಅವಳಿಗೆ ಪತ್ರ ಬರೆಯಲಿಲ್ಲ. ಅನಂತರ ಅವಳಿಂದ ಹಲವು ಪತ್ರಗಳು ಬಂದವು. ಅವುಗ ಳಿಗೂ ನಾನು ಉತ್ತರಿಸಲಿಲ್ಲ. ಏತನ್ಮಧ್ಯೆ ಎಂಟು-ಒಂಭತ್ತು ತಿಂಗಳುಗಳು ಕಳೆದಿದ್ದವು.

## ಬಾಬಾ ರಮೇಶಚಂದ್ರಾನಂದ

ಉತ್ತರ ಪ್ರದೇಶದ ಬುಲಂದರ್ ಶಹರ್ ಜಿಲ್ಲೆಯ ಹಾಪುಡಗಢ ತಾಲೂಕಿನ ಬೈಸೋಡಾ ಗ್ರಾಮದ ದಟ್ಟವಾದ ಅರಣ್ಯದಲ್ಲಿ ರಮೇಶಚಂದ್ರಾ ನಂದ ಎಂಬ ಹೆಸರಿನ ಓರ್ವ ಸಾಧು ನೆಲಸಿದ್ದರು. ಆಧ್ಯಾತ್ಮಿಕ ಕ್ಷೇತ್ರದಲ್ಲಿ ಉನ್ನತ ಮಟ್ಟದ ಸಾಧನೆ ಮಾಡಿ ಅವರು ಹಲವಾರು ಅಲೌಕಿಕ ಶಕ್ತಿಗಳನ್ನು ಪಡೆದಿದ್ದರು. ಅರಣ್ಯದಲ್ಲಿ ನೆಲಸಿದ್ದ ಕಾರಣ ಅವರ ಬಳಿಗೆ ಜನ ಬರುತ್ತಿದ್ದುದು ತೀರಾ ಕಡಿಮೆ. ಅದೂ ಅಲ್ಲದೆ ಅರಣ್ಯದಲ್ಲಿರುವ ಅವರ ಕುಟೀರಕ್ಕೆ ತಲು ಪಲು ದುರ್ಗಮವಾದ ಕಾಡಿನ ದಾರಿಯಲ್ಲಿ ಏಳೆಂಟು ಕಿಲೋಮೀಟರ್ ದೂರ ನಡೆಯಬೇಕಾ ಗುತ್ತಿತ್ತು. ಹೀಗಿದ್ದರೂ ಬಾಬಾ ರಮೇಶ ಚಂದ್ರಾ

ನಂದರ ಖ್ಯಾತಿ ಉತ್ತರ ಭಾರತದಾದ್ಯಂತ ವ್ಯಾಪಿಸಿತ್ತು. ಕಾಶ್ಮೀರದ ಮಾಜಿ ಮಹಾರಾಜ ಡಾ. ಕರಣ ಸಿಂಗ್, ನೇಪಾಳದ ದೊರೆ ಮಹಾರಾಜ ಬೀರೇಂದ್ರ ವಿಕ್ರಮ ಹಾಗೂ ಅವರ ತಾಯಿ ರತ್ನರಾಜ ಲಕ್ಷ್ಮಿ ಜೋಧಪುರದ ಗಜಸಿಂಹ, ಮಾಜಿ ಪ್ರಧಾನಮಂತ್ರಿ ವಿಶ್ವನಾಥ ಪ್ರತಾಪ ಸಿಂಗ್ ಮಾಜಿ ಸಚಿವ ಮಾಧವರಾವ್ ಸಿಂಧ್ಯಾ, ಅವರ ತಾಯಿ ವಿಜಯ ರಾಜೆ ಸಿಂಧ್ಯಾ, ಕಾಶಿಯ ವಿಭೂತಿ ನಾರಾಯಣ ಸಿಂಗ್, ಹಿಮಾಚಲ ಪ್ರದೇಶದ ಮುಖ್ಯಮಂತ್ರಿ ವೀರಭದ್ರ ಸಿಂಹ ಮುಂತಾದ ಗಣ್ಯರು ಅವರ ಶಿಷ್ಯ ವರ್ಗದಲ್ಲಿ ಸೇರಿದ್ದರು.

ಬಾಬಾ ರಮೇಶಚಂದ್ರಾನಂದರು ಸರ್ವಸಂಗ ಪರಿತ್ಯಾಗಿಯಾಗಿದ್ದರು. ಅವರ ಕುಟೀರದಲ್ಲಿ ಒಳಗೆ ನೆಲಮಾಳಿಗೆಯಲ್ಲಿ ಒಂದು ಕೊಠಡಿಯಿತ್ತು. ಈ ಕೊಠಡಿಯಲ್ಲಿಯೇ ಅವರು ಇರುತ್ತಿದ್ದರು. ಸೊಂಟದ ಕೆಳಗೆ ಒಂದು ತುಂಡು ಅರಿವೆ, ಆಹಾರ ಸ್ವೀಕರಿಸಲು ಮಣ್ಣಿನ ಒಂದು ಪಾತ್ರೆ-ಇಷ್ಟೇ ಅವರ ಆಸ್ತಿಯಾಗಿತ್ತು.

ಬಾಬಾ ರಮೇಶಚಂದ್ರಾನಂದಜೀ ತಮ್ಮ ಗುರು ಉಗ್ರಾನಂದಜೀ ಅವರಿಂದ ಸಂನ್ಯಾಸ ದೀಕ್ಷೆ ಪಡೆಯುವ ಸಂದರ್ಭದಲ್ಲಿ ತಮ್ಮ ಅರಿವೆಗಳನ್ನೆಲ್ಲಾ ಸರಯೂ ನದಿಯಲ್ಲಿ ಹರಿಯಬಿಟ್ಟರು. ಆ ಕ್ಷಣದಿಂದಲೇ ಅವರು ತಾವು ಆಯುಷ್ಯದುದ್ದಕ್ಕೂ ಮಾನ ಮುಚ್ಚಲು ಸೊಂಟದ ಸುತ್ತ ಒಂದು ತುಂಡು ಅರಿವೆಯನ್ನು ಮಾತ್ರ ಧರಿಸುವುದಾಗಿಯೂ ಯಾವುದೇ ನಗರ ಅಥವಾ ಗ್ರಾಮವನ್ನು ಪ್ರವೇಶಿಸುವುದಿಲ್ಲವೆಂದೂ ನಿರ್ಧರಿಸಿದ್ದರು. ಇಹ ಜೀವನಕ್ಕೆ ಅಂತಿಮ ವಿದಾಯ ಕೋರುವ ವರೆಗೂ ಅವರು ತಮ್ಮ ಕುಟೀರ ತ್ಯಜಿಸಿ ಎಲ್ಲಿಗೂ ಹೋಗಿರಲಿಲ್ಲ.

ಸುಮಾರು ೩೧ ವರ್ಷಕಾಲ ರಮೇಶ ಚಂದ್ರಾನಂದಜೀ ಮೌನವ್ರತದಿಂದ ಇದ್ದರು. ಎಷ್ಟೋ ಮಂದಿ ಶ್ರೀಮಂತರು ಸ್ವಾಮೀಜಿಯನ್ನು ತಮ್ಮ ನಿವಾಸಕ್ಕೆ ಆಹ್ವಾನಿಸಲು ಹೆಲಿಕಾಪ್ಟರ್ ಕಳುಹಿಸುವ ಪ್ರಲೋಭನೆಯನ್ನು ಒಡ್ಡಿದರೂ ಸ್ವಾಮೀಜಿ ಆಹ್ವಾನವನ್ನು ನಿರ್ದಾಕ್ಷಿಣ್ಯವಾಗಿ ತಿರಸ್ಕರಿಸಿದ್ದರು. ಅವರು ತೀರಿಕೊಳ್ಳುವ ವೇಳೆಗೆ ಅವರ ಕುಟೀರದಲ್ಲಿ ಅವರ ಗುರುಗಳು ಕೊಟ್ಟ ಮಣ್ಣಿನ ಪಾತ್ರೆ ಹೊರತು ಬೇರೇನೂ ಇರಲಿಲ್ಲ.

ಸ್ವಾಮೀ ರಮೇಶಚಂದ್ರಾನಂದಜೀ ನನ್ನ ಆಧ್ಯಾತ್ಮಿಕ ಗುರುವಾಗಿದ್ದರು. ಒಂದು ದಿನ ನಾನು ಅವರನ್ನು ಭೇಟಿಯಾಗಿ ಮಿನ್ನುಹಾನಕಾಳ ವೃತ್ತಾಂತವನ್ನು ಅವರಿಗೆ ವಿವರಿಸಿದಾಗ ಸ್ವಾಮೀಜಿ ಸ್ವಲ್ಪ ಹೊತ್ತು ನನ್ನನ್ನೇ ತದೇಕ ದೃಷ್ಟಿಯಿಂದ ನೋಡುತ್ತಾ, ಮುಗುಳ್ನಕ್ಕು, "ನೀನು ಇಷ್ಟಪಟ್ಟರೆ ಅವಳನ್ನು ಇಲ್ಲಿಗೆ ಕರೆದುಕೊಂಡು ಬರಬಹುದು," ಎಂದು ಹೇಳಿದರು.

ಬಾಬಾ ರಮೇಶಚಂದ್ರಾನಂದಜೀ ಅವರಲ್ಲಿ ನನಗೆ ಸಂಪೂರ್ಣ ವಿಶ್ವಾಸವಿತ್ತು. ಹೀಗಾಗಿ ನಾನು ಆಕೆಗೆ ಪತ್ರ ಬರೆದು ಮಗನ ಅಸ್ಥಿಗಳೊಂದಿಗೆ ಭಾರತಕ್ಕೆ ಬರುವಂತೆ ತಿಳಿಸಿದೆ. ದೀಪಾವಳಿಯ ಸಂದರ್ಭದಲ್ಲಿ ಬಂದರೆ ಉತ್ತಮ ಎಂದೆ. ನನ್ನ ಪತ್ರ ದೊರೆತ ಬಳಿಕ ಮಿನ್ನುಹಾನಕಾ ದೂರವಾಣಿಯ ಮೂಲಕ ಸಂಪರ್ಕಿಸಿ ತಾನು ಭಾರತಕ್ಕೆ ಬರುವ ದಿನವನ್ನು ಮುಂಚಿತವಾಗಿ ತಿಳಿಸಿದಳು.

ಪೂರ್ವ ನಿರ್ಧಾರಿತ ದಿನದಂದು ಮಿನ್ನುಹಾನಕಾ ತನ್ನ ಮಗನ ಅಸ್ಥಿಗಳೊಂದಿಗೆ ಭಾರತಕ್ಕೆ ಆಗಮಿಸಿದಳು. ದಿಲ್ಲಿ ವಿಮಾನ ನಿಲ್ದಾಣದಲ್ಲಿ ನಾನು ಆಕೆಯನ್ನು ಎದುರುಗೊಂಡೆ. ಅಲ್ಲಿಂದ ನಾವಿಬ್ಬರೂ ನೇರವಾಗಿ ಬುಲಂದರಶಹರ್‌ಗೆ ತಲುಪಿ, ಅಲ್ಲಿಂದ ಬೈಸೋಡಾ ಗ್ರಾಮಕ್ಕೆ ಹೋಗಿ, ಸ್ವಾಮಿ ರಮೇಶ್ ಚಂದ್ರಾನಂದಜೀ ಅವರ ದರ್ಶನ ಪಡೆದೆವು. ನಾನು ಸ್ವಾಮೀಜಿಯವರಿಗೆ ಮಿನ್ನುಹಾನಕಾಳ ಪರಿಚಯ ಮಾಡಿಸಿದೆ. ಬಾಬಾ ರಮೇಶ್ ಚಂದ್ರಾನಂದಜಿ ಕೆಲವು ಕ್ಷಣ ಮಿನ್ನುಹಾನಕಾಳನ್ನು ದಿಟ್ಟಿಸಿ ನೋಡಿ, ಅನಂತರ ಮುಗುಳ್ನಕ್ಕು, 'ಮೃತರಿಗೆ ಮುಕ್ತಿ ಒದಗಿಸುವ ವಿಧಿಗಳ ಬಗ್ಗೆ ನಿನಗೆ ಬಹಳಷ್ಟು ಗೊತ್ತಿದೆಯಂತಲ್ಲ. ಮಾಡಿ ತೋರಿಸುತ್ತೀಯಾ?' ಎಂದು ಕೇಳಿದರು. ನಾನು ಅವರ ಮಾತುಗಳನ್ನು ಇಂಗ್ಲೀಷಿಗೆ ಭಾಷಾಂತರಿಸಿ ಹೇಳಿದಾಗ ಆಕೆ, 'ಅದಕ್ಕೆಲ್ಲ ಬಹಳಷ್ಟು ಸಾಮಗ್ರಿಗಳು ಬೇಕು,' ಎಂದು ಉತ್ತರಿಸಿದಳು.

ಆಕೆ ಸೂಚಿಸಿದ ಸಾಮಗ್ರಿಗಳನ್ನೆಲ್ಲ ಹಾಪುಡ್‌ಗಢ ಪಟ್ಟಣದ ಅಂಗಡಿಯಲ್ಲಿ ಖರೀದಿಸಿ ಮತ್ತೆ ಬಾಬಾನ ಕುಟೀರಕ್ಕೆ ಹಿಂದಿರುಗಿದೆ. ಕ್ರಿಯಾ ವಿಧಿಗಳನ್ನು ರಾತ್ರಿಯ ವೇಳೆ ಯಾವುದಾದರೊಂದು ನದಿ ಸಮೀಪ ಕೈಗೊಂಡರೆ ಉತ್ತಮ ಎಂದು ಆಕೆ ಸೂಚಿಸಿದಳು. ಅಲ್ಲಿಂದ ಗಂಗಾನದಿ ಹೆಚ್ಚು ದೂರ ವಿರಲಿಲ್ಲ. ರಾತ್ರಿ ಸ್ವಾಮೀಜಿಯವರನ್ನು ನದಿ ತೀರಕ್ಕೆ ಕರೆದೊಯ್ಯಲು ಸಿದ್ಧತೆ ನಡೆಸಿದೆ. ಆದರೆ ಸ್ವಾಮೀಜಿ ಕಾರಿನಲ್ಲಾಗಲಿ ಅಥವಾ ಬೇರಾವುದೇ ವಾಹನದ ಲ್ಲಾಗಲೀ ಕುಳಿತುಕೊಳ್ಳುವವರಲ್ಲ. ಹೀಗಾಗಿ ನಾವು ಅವರೊಂದಿಗೆ ಕಾಲ್ನಡಿಗೆಯಲ್ಲಿ ಹೋದೆವು. ಗಂಗಾನದಿಯ ದಡ, ಅರಣ್ಯದ ದಟ್ಟಹಸಿರಿನ ವಾತಾವರಣ ಮಿನ್ನುಕಾನಕಾಳಿಗೆ ಬಹಳ ಇಷ್ಟವಾಯಿತು.

ಆಕೆ ಗಂಗಾನದಿಯಲ್ಲಿ ಸ್ನಾನ ಮುಗಿಸಿ, ಶ್ವೇತ ವಸ್ತ್ರಗಳನ್ನು ಧರಿಸಿ ಸಿದ್ಧವಾಗುವಷ್ಟರಲ್ಲಿ ನಾನು ಹವನದ ತಯಾರಿ ನಡೆಸಿದೆ. ಮಿನ್ನುಕಾನಕಾ ಅಸ್ಥಿ ಕಲಶದೊಂದಿಗೆ ಅಲ್ಲಿಗೆ ಬಂದು ಹವನ ಕುಂಡದ ಪಕ್ಕದಲ್ಲಿ ಪೀಠದಲ್ಲಿ ಕುಳಿತಳು. ನಾನು ಮತ್ತು ಸ್ವಾಮೀಜಿ ಪಕ್ಕದಲ್ಲಿ ಕುಳಿತೆವು. ಮಿನ್ನುಕಾನಕಾ ಕುಂಡದಲ್ಲಿ ಅಗ್ನಿಯನ್ನು ಪ್ರತಿಷ್ಠಾಪಿಸಿ ಕ್ರಿಯಾವಿಧಿಗಳನ್ನು ಆರಂಭಿಸಿದಳು. ಮೊದಲ ಹಂತ ಮುಕ್ತಾಯವಾಗುತ್ತಿದ್ದಂತೆ ಕಲಶದೊಳಗಿನಿಂದ ಹೊಗೆ ಹೊಮ್ಮ ತೊಡಗಿ ಅಸ್ಪಷ್ಟವಾದ ಮಾನವಾಕೃತಿ




ಎತ್ತಿದ ದೊಣ್ಣೆ ನಿಮ್ಮ ಮೇಲೆ ಬೀಳ್ದೇನೇ.... ಇಸಬೇಕಾದ್ರೆ ನೀವೇ ತಿರುಗಿ ಲಂಚಕೊಡಬೇಕು. ....ಹ್ಞಂ... ಬೇಗ ಕೊಡಿ.

ಯನ್ನು ತಾಳಿತು. ಬಾಬಾ ರಮೇಶ್ ಚಂದ್ರಾನಂದಜೀ ಅದನ್ನು ತದೇಕ ದೃಷ್ಟಿಯಿಂದ ಗಮನಿಸಿದರು. ಆ ಆಕೃತಿ ಎಂಟು ಹತ್ತು ನಿಮಿಷ ಗಾಳಿಯಲ್ಲಿ ತೇಲುತ್ತಿತ್ತು. ಆ ಮೇಲೆ ಇದ್ದಕ್ಕಿದ್ದಂತೆಯೇ ಹೊಗೆ ಸಂಪೂರ್ಣವಾಗಿ ಕಣ್ಮರೆಯಾಯಿತು. ಮರುಕ್ಷಣದಲ್ಲಿಯೇ ಕಲಶದೊಳಗಿಂದ ಅಸ್ಥಿಗಳೆಲ್ಲ ಹೊರ ಚೆಲ್ಲಲ್ಪಟ್ಟವು. ಬಾಬಾ ರಮೇಶ್ ಚಂದ್ರಾನಂದರು ತುಸುಹೊತ್ತು ಶಾಂತಭಾವದಿಂದ ಯೋಚಿಸತೊಡಗಿದರು. ಅನಂತರ ನನ್ನೊಂದಿಗೆ ಬುಲಂದರ್ ಶಹರ್ ಕಡೆಯ ಉರ್ದು ಮಿಶ್ರಿತ ಹಿಂದಿಯಲ್ಲಿ 'ಇನ್ನೊಮ್ಮೆ ಇದೇ ಕ್ರಿಯಾವಿಧಿಯನ್ನು ಮಾಡಿ ತೋರಿಸಲು ಆಕೆಗೆ ಹೇಳು,' ಎಂದರು. ಬಾಬಾರ ಇಚ್ಛೆಯನ್ನು ಮಿನ್ಸುಕಾನಕಾಳಿಗೆ ತಿಳಿಸಿದೆ. ಆಕೆ ಅಸ್ಥಿಗಳನ್ನೆಲ್ಲಾ ಒಟ್ಟು ಸೇರಿಸಿ ಮತ್ತೆ ಕಲಶದೊಳಗೆ ತುಂಬಿ ಅದೇ ಕ್ರಿಯಾವಿಧಿಯನ್ನು ಪುನರಾವರ್ತಿಸಿದಳು. ಈ ಬಾರಿಯೂ ಬಾಬಾ ಹೊಗೆಯಲ್ಲಿ ಮೂಡಿದ ಆ ಮಾನವಾಕೃತಿಯನ್ನು ಮೈಯೆಲ್ಲಾ ಕಣ್ಣಾಗಿ ನೋಡಿದರು. ಅವರ ಮುಖದಲ್ಲಿ ಮಂದಹಾಸ ತೇಲಿತು. ಅವರು ನನ್ನತ್ತ ನೋಡಿ, 'ಅಶೋಕ್, ಈಕೆ ಸುಮಿಯೋ ಎಂಬಾತನ ಹೆಸರಲ್ಲಿ ಕ್ರಿಯಾವಿಧಿಗಳನ್ನು ನಡೆಸಬೇಕಾಗಿತ್ತು. ಅದರ ಬದಲು ನಕಾಮೋರಾನ ಹೆಸರಲ್ಲಿ ಕ್ರಿಯಾವಿಧಿಗಳನ್ನು ಕೈಗೊಳ್ಳುತ್ತಿದ್ದಾಳೆ. ಇದು ಸರಿಯಲ್ಲ,' ಎಂದರು.

ಬಾಬಾರ ಮಾತುಗಳನ್ನು ಕೇಳಿ ನಾನು ವಿಸ್ಮಯದಿಂದ ಮೂಕನಾದೆ. ಸುಮಿಯೋ ಮಿನ್ಸುಕಾನಕಾಳ ಮಗನ ಹೆಸರಾಗಿತ್ತು. ಈ ವಿಚಾರವನ್ನು ನಾನಾಗಲಿ ಮಿನ್ಸುಕಾನಕಾಳಾಗಲಿ ಬಾಬಾರಿಗೆ ತಿಳಿಸಿರಲಿಲ್ಲ. ಬಾಬಾ ಉಚ್ಚರಿಸಿದ ಎರಡನೇ ಹೆಸರೂ ಜಪಾನೀ ಹೆಸರಾಗಿತ್ತು. ಬಾಬಾಗೆ ಈ ವರೆಗೆ ಜಪಾನಿನೊಂದಿಗೆ ಯಾವುದೇ ಸಂಬಂಧವಿರಲಿಲ್ಲ. ಜಪಾನಿ ಭಾಷೆ ಅವರಿಗೆ ಗೊತ್ತಿದ್ದಿಲ್ಲ. ಯಾವ ಜಪಾನಿಯರ ಪರಿಚಯ ಅವರಿಗಿರಲಿಲ್ಲ. ಬಾಬಾರ ಅಭಿಪ್ರಾಯವನ್ನು ಮಿನ್ಸುಕಾನಕಾಳಿಗೆ ತಿಳಿಸಿದೆ. ಆಕೆ ಮೂರನೇ ಬಾರಿ ನಕಮೋರಾನ ಹೆಸರಲ್ಲಿ ಕ್ರಿಯಾವಿಧಿ ಕೈಗೊಂಡಳು. ಈ ಬಾರಿ ಆಕೆಯ ಕ್ರಿಯಾವಿಧಿ ಸಫಲವಾಯಿತು. ಕಲಶದಿಂದ ಹೊಗೆ ಹೊಮ್ಮುತ್ತಿದ್ದಂತೆ ಮಾನವಾಕೃತಿ ಅಸ್ಪಷ್ಟವಾಗಿ ಕಾಣಸಿಕೊಂಡಿತು. ಆದರೆ ಅಸ್ಥಿಗಳು ಈ ಬಾರಿ ಕಲಶದ ಹೊರಗೆ ಚೆಲ್ಲಾಪಿಲ್ಲಿಯಾಗಿ ಚದುರದೆ ಒಳಗೇ ಉಳಿದುಕೊಂಡವು. ಅದನ್ನು ನೋಡಿ ಮಿನ್ಸುಕಾನಕಾಳಿಗೆ ಬಹಳ ಆಶ್ಚರ್ಯವಾಯಿತು. ಖುಷಿಯೂ ಆಯಿತು.

ಈ ರಹಸ್ಯ ತಿಳಿಯಲು ಮಿನ್ಸುಕಾನಕಾ ಉತ್ಸುಕಳಾಗಿದ್ದಳು. ತನ್ನ ಮಗನ ಆತ್ಮಕ್ಕೆ ಮುಕ್ತಿ ದೊರಕಿತೇ? ಎಂದು ಕಾತರದಿಂದ ಪ್ರಶ್ನಿಸಿದಳು. ಬಾಬಾ ತುಸುಹೊತ್ತು ಧ್ಯಾನ ಸಮಾಧಿಗೆ ಇಳಿದರು. ಸುಮಾರು ಅರ್ಧತಾಸಿನ ತರುವಾಯ ಕಣ್ತೆರೆದು ನಮ್ಮತ್ತ ನೋಡಿ, ಮಿನ್ಸುಕಾನಕಾಳ ಮಗ ಜೀವಂತವಾಗಿದ್ದಾನೆ. ಈ ವರೆಗಿನ ಕ್ರಿಯಾವಿಧಿಯಲ್ಲಿ ನಕಮೋರಾ ಹೆಸರಿನ ಯುವಕನ ಅಸ್ಥಿಗಳು ಜ್ವಲಿಸುತ್ತಾ ಅದರಿಂದ ಹೊಗೆ ಹೊಮ್ಮುತ್ತಿತ್ತು. ಮಿನ್ಸುಕಾನಕಾಳ ಮಗ ಜಪಾನಿನ ಯಾವುದೋ ಪಟ್ಟಣದ ಆಸ್ಪತ್ರೆಯಲ್ಲಿ ದಾಖಲಾಗಿ ಚಿಕಿತ್ಸೆ ಪಡೆಯುತ್ತಿದ್ದಾನೆ. ಆ ಪಟ್ಟಣದ ಹೆಸರಿನ ಮೊದಲ ಅಕ್ಷರಗಳು ಯಮೊ ಇರಬೇಕು ಎಂದರು ಬಾಬಾ. ಅವರು ಆಸ್ಪತ್ರೆಯ ವಾರ್ಡ್ ನಂ., ಬೆಡ್ ನಂಬರ್ ಸಹ ಹೇಳಿದರು.

ಇವೆಲ್ಲ ವಿವರಗಳನ್ನು ಇಂಗ್ಲೀಷಿಗೆ ತರ್ಜುಮೆ ಮಾಡಿ ಹೇಳಿದಾಗ ಆಕೆ ಆ ಪಟ್ಟಣ ಯುಮೊನಿಮಾಚಿ ಇರಬಹುದು ಎಂದಳು. ತನ್ನ ಮಗ ಬದುಕಿದ್ದಾನೆ ಎಂದು ಗೊತ್ತಾದಾಗ ಆಕೆಯ ಸಂತಸಕ್ಕೆ ಪಾರವೇ ಇರಲಿಲ್ಲ. ಆ ತಕ್ಷಣ ಜಪಾನಿಗೆ ತೆರಳಿ ಬಾಬಾರ ಮಾತುಗಳ ಸತ್ಯಾಸತ್ಯತೆಯನ್ನು ಒರೆಗೆ ಹಚ್ಚಿ ನೋಡಬೇಕೆಂಬ ಕಾತರ ಆಕೆಯಲ್ಲಿ ತುಂಬಿತು.

ಮಿನ್ಸುಕಾನಕಾ ಮತ್ತು ನಾನು ನೆಮ್ಮದಿಯಿಂದ ಮತ್ತೆ ಕುಟೀರಕ್ಕೆ ಹಿಂದಿರುಗಿದೆವು. ಬಾಬಾ ರಮೇಶಚಂದ್ರಾನಂದರ ಆಶೀರ್ವಾದ ಪಡೆದು ದಿಲ್ಲಿಗೆ ಹಿಂತಿರುಗಿದೆವು.

ಮಿನ್ಸುಕಾನಕಾ ಒಂದು ತಿಂಗಳ ವೀಸಾದ ಮೇಲೆ ಭಾರತಕ್ಕೆ ಬಂದಿದ್ದಳು. ಭಾರತದಲ್ಲಿ ಹಲವು

ಪ್ರೇಕ್ಷಣೀಯ ಸ್ಥಳಗಳಿಗೆ ಭೇಟಿ ನೀಡುವ ಆಸೆಯೂ ಅವಳಿಗಿತ್ತು. ಆದರೆ ತನ್ನ ಮಗ ಬದುಕಿದ್ದಾನೆ ಎಂಬ ಸುದ್ದಿ ತಿಳಿದ ಬಳಿಕ ಆಕೆಯು ಗಡಬಡಿಸಿ ಕೊಂಡು ಜಪಾನಿಗೆ ಹಿಂತಿರುಗಿದಳು.

ಕೆಲವು ದಿನಗಳ ಬಳಿಕ ಮಿನ್ನುಕಾನಕಾ ನನಗೆ ಪತ್ರ ಬರೆದಳು. ಆ ಪ್ರಕಾರ ಬಾಬಾ ರಮೇಶಚಂದ್ರಾನಂದರು ಹೇಳಿದ್ದೆಲ್ಲವೂ ಅಕ್ಷರಶಃ ನಿಜವಾಯಿತು. ಮಗ ತನಗೆ ಮತ್ತೆ ಲಭಿಸಿದ್ದಾನೆ. ಅವನ ಚಿಕಿತ್ಸೆ ನಡೆಯುತ್ತಿದೆ. ಬೆಂಕಿ ಅನಾಹುತದಿಂದ ಉರಿದ ಬಸ್ಸಿನಲ್ಲಿ ಅವಳ ಮಗ ಆ ದಿನ ಪ್ರಯಾಣಿಸಿರಲಿಲ್ಲ. ಕೆಲವೊಂದು ವಸ್ತುಗಳ ಆಧಾರದಿಂದ ಆಕೆ ಆ ದಿನ ಬೆಂಕಿ ಅನಾಹುತದಲ್ಲಿ ಭೀಕರವಾಗಿ ಸುಟ್ಟು ಸತ್ತ ಇನ್ನೊಬ್ಬ ಹುಡುಗನ ಕಳೇಬರವನ್ನು ತನ್ನ ಮಗನದೆಂದು ಭಾವಿಸಿದ್ದಳು. ಅನಂತರವೂ ಆಕೆಯಿಂದ ಹಲವು ಪತ್ರಗಳು ಬಂದವು.ಆದರೆ ಈ ಎಲ್ಲ ಪತ್ರಗಳಲ್ಲಿಯೂ ಆಕೆ ಇಷ್ಟು ದೀರ್ಘ ಕಾಲ ತನ್ನ ಮಗ ಆಸ್ಪತ್ರೆಯಲ್ಲಿಯೇ ಏಕೆ ಇದ್ದಾನೆ; ಹಾಗೆ ಉಳಿದಿದ್ದರೆ ಯಾವ ಕಾರಣಕ್ಕಾಗಿ ಎಂಬುದನ್ನು ಮಾತ್ರ ತಿಳಿಸಲಿಲ್ಲ.

೧೯೯೧ರಲ್ಲಿ ನಾನು ಮತ್ತೊಮ್ಮೆ ಜಪಾನಿಗೆ ಭೇಟಿ ನೀಡಿದ ಸಂದರ್ಭದಲ್ಲಿ ಮಿನ್ನುಕಾನಕಾಳ ಮಗನ ಬಗ್ಗೆ ಇನ್ನಷ್ಟು ವಿವರಗಳು ತಿಳಿದು ಬಂದವು. ಅವಳ ಮಗ ಸೂಮಿಯೋ ಮಾದಕ ದ್ರವ್ಯ ಚಟಕ್ಕೆ ಅಂಟಿಕೊಂಡಿದ್ದ. ಮಗನನ್ನು ಇದರಿಂದ ದೂರವಿರಿಸಲು ಆಕೆ ಪ್ರಯತ್ನಿಸುತ್ತಿದ್ದಳು. ಈ ಸಂಬಂಧದಲ್ಲಿ ಆಗಾಗ ಅವರಲ್ಲಿ ಕಲಹವಾಗುತ್ತಿತ್ತು. ಒಂದು ದಿನ ಸುಮಿಯೊ ಸಿಟ್ಟಾಗಿ ಯೊಮೊನೋಮಚಿಗೆ ತೆರಳಿದ. ಆತ ಮನೆಬಿಟ್ಟು ಹೋದ ದಿನವೇ ಇವಾಕಿಸಿಟಿ ಸಮೀಪ ಬಸ್ಸೊಂದರಲ್ಲಿ ದುರ್ಘಟನೆ ಸಂಭವಿಸಿ ಅನೇಕ ಮಂದಿ ಜೀವಂತ ಬೆಂದು ಸತ್ತರು. ಆ ದುರಂತದಲ್ಲಿ ತನ್ನ ಮಗನೂ ಸಿಲುಕಿರಬಹುದೆಂದು ಮಿನ್ನುಕಾನಕಾ ಭಾವಿಸಿದ್ದಳು. ಬಸ್ಸಿನಲ್ಲಿ ಓರ್ವ ಹುಡುಗನ ಶವವನ್ನು ನೋಡಿ ಅದು ತನ್ನ ಮಗನ ಶವವೇ ಇರಬೇಕೆಂದು ನಂಬಿದಳು.

ಅತ್ತ ಸುಮಿಯೇ ಯುಮೊನೊ ಮಚಿಗೆ ತೆರಳಿ ಸಣ್ಣ ಪುಟ್ಟ ನೌಕರಿಯಲ್ಲಿ ಮಾಡುತ್ತಾ ಜೀವಿಸುತ್ತಿದ್ದ. ಆದರೆ ಮಾದಕ ದ್ರವ್ಯ ವ್ಯಸನವನ್ನು ಮಾತ್ರ ಬಿಟ್ಟಿರಲಿಲ್ಲ. ಒಂದು ದಿನ ಅಮಲಿನಲ್ಲಿದ್ದಾಗ ರಸ್ತೆಯಲ್ಲಿ ಪ್ರಚಂಡ ವೇಗದಿಂದ ಧಾವಿಸುತ್ತಿದ್ದ ಟ್ರಕ್ ಅವನಿಗೆ ಡಿಕ್ಕಿ ಹೊಡೆದು ತೀವ್ರವಾಗಿ ಗಾಯಗೊಂಡ. ಸುಮಿಯೇನ ತಲೆಗೆ ಆಳವಾದ ಗಾಯವಾಗಿತ್ತು. ಚಿಕಿತ್ಸೆಗಾಗಿ ಯೂಮೊನೊಮಚಿಯ ಆಸ್ಪತ್ರೆಯಲ್ಲಿ ದಾಖಲಾದ. ತಲೆಯಲ್ಲಾದ ಗಾಯ ಮಿದುಳಿನ ಮೇಲೆ ಪರಿಣಾಮ ಮಾಡಿತು. ಹೀಗಾಗಿ ದೀರ್ಘಕಾಲ ಆತ ಆಸ್ಪತ್ರೆಯಲ್ಲಿ ಚಿಕಿತ್ಸೆ ಪಡೆಯಬೇಕಾಯಿತು. ತಾನಿಲ್ಲಿದ್ದೇನೆಂದು ಆತ ತನ್ನ ವಿಳಾಸವನ್ನೂ ನೀಡಲಿಲ್ಲ.

ಮಗ ಆಸ್ಪತ್ರೆಯಲ್ಲಿ ಚಿಕಿತ್ಸೆ ಪಡೆಯುತ್ತಿದ್ದಾಗ ಅತ್ತ ತಾಯಿ ಮಗನ ಆತ್ಮಕ್ಕೆ ಮುಕ್ತಿ ಒದಗಿಸಲು ತಂತ್ರಕ್ರಿಯಾ ವಿಧಿಗಳಲ್ಲಿ ನಿರತಳಾಗಿದ್ದಳು.

ಇಂದು ಸುಮಿಯೋ ದೀರ್ಘಕಾಲದ ಚಿಕಿತ್ಸೆಯ ಬಳಿಕ ಚೇತರಿಸಿಕೊಂಡಿದ್ದಾನೆ.

●

ಇಂದಿಗೆ ೪೭,೦೦೦ ವರ್ಷಗಳಷ್ಟು ಹಳೆಯದೆಂದು ತಜ್ಞರು ತೀರ್ಮಾನಿಸಿರುವ ಚಿತ್ರಗಳು ಚೀನಾದ ಹುನಾನ್ ಪ್ರಾಂತದ ಗ್ರನೈಟ್ ಬಂಡೆಗಳ ಮೇಲೆ ಇವೆ. ಈ ಚಿತ್ರಗಳು ಇಂದಿನ 'ಹಾರುವ ತಟ್ಟೆಗಳು' ಎಂದು ಕರೆಯಲ್ಪಡುವ ಅನ್ಯಲೋಕ ಜೀವಿಗಳ ಆಕಾಶ ನೌಕೆಗಳನ್ನೇ ಹೋಲುತ್ತವೆ.

'ಹಾರುವ ತಟ್ಟೆಗಳ' ಬಗೆಗಿನ ಲಿಖಿತ ದಾಖಲೆಯೊಂದು ಈಜಿಪ್ತಿನ ಥುಟ್‌ಮಾಸ್ (ಕ್ರಿ. ಪೂ. ೧೫೪೦೧೪೫೦) ದೊರೆಯ ಕಾಲದ ಬರಹವೊಂದರಲ್ಲಿದೆ.

ಕೆ. ಗಣೇಶ

## ನಮ್ಮೂರಿನ ಪುಣ್ಯಪುರುಷರು

# ನಲವತ್ತು ವರ್ಷಗಳ ನಿಸ್ವಾರ್ಥ ಸೇವೆ

ವಿಜಾಪುರ ಜಿಲ್ಲೆಯ ಮುದ್ದೇಬಿಹಾಳದಂತಹ ಗ್ರಾಮೀಣ ಪ್ರದೇಶದಲ್ಲಿ ಕಳೆದ ೪೦ ವರ್ಷಗಳಿಂದ ವೈದ್ಯಕೀಯ ಸೇವೆ ಸಲ್ಲಿಸುತ್ತ ಅದರ ಪಾವಿತ್ರ್ಯವನ್ನು ಕಾಯ್ದುಕೊಂಡು ಅದರ ಘನತೆಯನ್ನು ಹೆಚ್ಚಿಸಿದವರು ಡಾ.ಆರ್.ಆರ್. ಪದಕಿಯವರು.

ಈ ತಾಲೂಕಿನ ನೂರಾರು ಹಳ್ಳಿಗಳ ಜನರ ಕಣ್ಮಣಿ ಅವರು. ಅವರಿಗೀಗ ೭೦ ವರ್ಷ. ಅವರ ವಯಸ್ಸಿನವರು ಅಸೂಯೆಪಡುವಂಥ ಲವಲವಿಕೆ, ಜೀವನೋತ್ಸಾಹ ಪಡೆದಿದ್ದಾರೆ. ಎತ್ತರದ ನಿಲುವು-ನಂದೀಕೋಲಿನಂತೆ. ತೆಳ್ಳಗೆ, ಬೆಳ್ಳಗೆ, ಪ್ರಜ್ವಲಿಸುವ ಕಣ್ಣುಗಳಿಗೆ ಚಾಳೀಸಿನ ಅಗತ್ಯವಿಲ್ಲ. ಇಂದಿಗೂ ರಾತ್ರಿ ಹೊತ್ತಿನಲ್ಲಿ ಟಾರ್ಚ್ ಇಲ್ಲದೆ ಅಡ್ಡಾಡುವಷ್ಟು ಕಣ್ಣು ಚುರುಕಾಗಿವೆ. ಅಚ್ಚುಕಟ್ಟಾದ ಉಡುಗೆ-ತೊಡುಗೆ. ಸ್ವತಃ ವೈದ್ಯನಲ್ಲಿರಬೇಕಾದ ಆರೋಗ್ಯ ಹಾಗೂ ನೈರ್ಮಲ್ಯ ಅವರಲ್ಲಿವೆ. ಮನೆಯಿಂದ ಆಸ್ಪತ್ರೆಗೆ, ಆಸ್ಪತ್ರೆಯಿಂದ ಮನೆಗೆ ಕಾಲ್ನಡಿಗೆಯಿಂದಲೇ ಪ್ರಯಾಣ. ಹರಟೆಮಲ್ಲರಾದರೂ ರೋಗಿಗಳೊಂದಿಗೆ ಮಾತು ಕಡಿಮೆ, ಸನ್ನೆಯ ಬಳಕೆಯೇ ಹೆಚ್ಚು. ದ ತಾಸು ದಣಿವರಿಯದ ದುಡಿಮೆ. ಜನಸೇವೆಯೇ ಜನಾರ್ದನ ಸೇವೆ ಅವರಿಗೆ. ಯಾವುದೇ ಫೀಯಿಲ್ಲದೆ ದಿನಾಲು ಎರಡೂ ಹೊತ್ತು ಬಂದು ಹೋಗುವ ನೂರಾರು ರೋಗ ಬಡವ-ಬಲ್ಲಿದರೆಂಬ ತಾರತಮ್ಯವಿಲ್ಲದೇ ಪರೀಕ್ಷಿಸುತ್ತಾರೆ, ಔಷಧಿ ತೀರ ಸಾಮಾನ್ಯನ ಕಿಸೆಗೂ ನಿಲುಕುವ ಔಷಧಗಳವು. ತಂದ ಬಳಿಕ ಅವನ್ನು ತೆಗೆದುಕೊಳ್ಳುವ ವಿಧಾನ ಹೇಳುತ್ತಾರೆ-ಅವರವರಿಗೆ "ಇಂಜಕ್ಷನ್ ಮಾಡದ ಡಾಕ್ಟರರಿವರು" ಎಂಬ ಪ್ರತೀತಿಯಿದ್ದರೂ ಅವಶ್ಯ ಮಾಡದೆ ಬಿಡುವುದಿಲ್ಲ. ನೆರೆಹಳ್ಳಿಗಳಲ್ಲಿ ಬೇರೆ ಡಾಕ್ಟರರ ಕರೆದಾಗ ಅಲ್ಲಿಗೆ, ಅವರು ತಂದ ಚಕ್ಕಡಿಯಲ್ಲಿಯೇ ಹೋಗಿ ಇದೇ ಬಗೆ ಸೇವೆಯನ್ನು ಕೊಟ್ಟಿದ್ದಾರೆ. ತಮ್ಮ ವೃತ್ತಿಯ ಎಲ್ಲ ಪಾಂಡಿತ್ಯ ಸತತ ಓದಿನಿಂದ ಅದನ್ನು ನವೀಕರಿಸುತ್ತ ಉಚಿತವಷ್ಟೇ ಅಲ್ಲ, ಉತ್ಕೃಷ್ಟವೂ ಆದ ಸೇವೆ ಸಲ್ಲಿಸುತ್ತಿರುವ ಅವರಂಥವರು ವಿರಳರಲ್ಲಿ ವಿರಳರು; ಡಾಕ್ಟರರು ಹೇಗಿರಬೇಕೆಂಬುದಕ್ಕೆ ಒಂದು ಉಜ್ವಲ ಉದಾಹರಣೆಯಾಗಿದ್ದಾರೆ. ಕರ್ಮಯೋಗಿಗಳವರು. ದುರ್ವ್ಯಸನಗಳಿಲ್ಲ. ಪಾಂಡಿತ್ಯ ಪ್ರದರ್ಶನ ಅವರಿಗೆ ಸೇರವು.

ಡಾ. ಆರ್.ಆರ್. ಪದಕಿಯವರ ಪೂರ್ಣ ಹೆಸರು ರಂಗರಾವ್ ರಾಮರಾವ್ ಪದಕಿ. ತಂದೆ ರಾಮರಾವ್, ತಾಯಿ ಜಾನಕಿಬಾಯಿ. ಜನ್ಮ ೧೯೨೬ರ ಅಗಷ್ಟ ೨೨ರಂದು. ಆರು ಜನ ಸೋದರರು,



ದೊಡ್ಡ ಕುಟುಂಬ. ಪ್ರಾಥಮಿಕ ಶಿಕ್ಷಣ, ಧಾರವಾಡ, ಗದಗ ಮತ್ತು ಬಾಗಲಕೋಟೆಗಳಲ್ಲಿ. ಮೆಟ್ರಿಕ್ ಪರೀಕ್ಷೆಯಲ್ಲಿ ಗಣಿತದಲ್ಲಿ ನೂರಕ್ಕೆ ನೂರು ಅಂಕಗಳನ್ನು ಪಡೆದು ಪಾಸಾದ ಹೆಗ್ಗಳಿಕೆ ಅವರದು. ಧಾರವಾಡದ ಕರ್ನಾಟಕ ಹೈಸ್ಕೂಲಿನಲ್ಲಿ ಓದುವಾಗಲೇ ಡಾ. ಕಬ್ಬೂರರಿಂದ ಪ್ರಭಾವಿತ; ಅವರ ಮೂಲಕ ರಾಷ್ಟ್ರೀಯತೆ ಮತ್ತು ಸೇವಾಕಾಂಕ್ಷೆಯ ಬೀಜಾಂಕುರ. ಆಗಲೇ ರಾಷ್ಟ್ರಗೀತೆಯನ್ನು ಸುಶ್ರಾವ್ಯವಾಗಿ ಹಾಡುವುದರ ಮೂಲಕ ಧಾರವಾಡದಲ್ಲಿ ಹೆಸರು ಗಳಿಸಿದ್ದರು. ಮುಂದೆ ಎಫ್.ವೈ. ಮತ್ತು

ಇಂಟರ್‌ಸೈನ್ಸ್ ಗಳನ್ನು ಕೊಲ್ಲಾಪುರದ ರಾಜಾರಾಮ ಕಾಲೇಜಿನಲ್ಲಿ ಮುಗಿಸಿದರೆ, ಪುಣೆಯ ಬಿ.ಜೆ. ಮೆಡಿಕಲ್ ಕಾಲೇಜಿನಲ್ಲಿ ಎಂ.ಬಿ.ಬಿ.ಎಸ್. ಪೂರೈಸಿದರು. ಅನಂತರ ೨-೩ ವರ್ಷಗಳಲ್ಲಿ ೩-೪ ಕಡೆ ಸರಕಾರೀ ಉದ್ಯೋಗ. ಹಿಮಾಚಲ ಪ್ರದೇಶದ ಬಿಲಾಸಪುರದಲ್ಲಿಯೂ ಸೇವೆ.

ಸ್ವತಂತ್ರ ವೃತ್ತಿಗಾಗಿ ಹಂಬಲ ಒಂದೆಡೆಗೆ, ತಮ್ಮೂರ ಜನತೆಯ ಸೇವೆ ಮಾಡುವ ಉತ್ಕಟೇಚ್ಛೆ ಇನ್ನೊಂದೆಡೆ. ತತ್ಫಲವಾಗಿ ಸರಕಾರೀ ಕೆಲಸಕ್ಕೆ ರಾಜೀನಾಮೆ; ಮುದ್ದೇಬಿಹಾಳದಲ್ಲಿ ಖಾಸಗೀ ವೃತ್ತಿ ಪ್ರಾರಂಭ (೧೯೫೭). ಅವರ ಸಹಪಾಠಿಗಳೆಲ್ಲ ಸರಕಾರೀ ನೌಕರಿಯಲ್ಲಿದ್ದು ಅತ್ಯುನ್ನತ ಹುದ್ದೆಗಳಲ್ಲಿ ಇದ್ದುದನ್ನಾಗಲಿ ದೊಡ್ಡ ದೊಡ್ಡ ನಗರಗಳಲ್ಲಿ, ವಿದೇಶಗಳಿಲ್ಲಿದ್ದುದನ್ನಾಗಲಿ ಹೇಳುವಾಗ 'ತಾನು ತಪ್ಪು ಮಾಡಿದೆ'ನೆಂಬ ಅಳುಕು ಲವಲೇಶವೂ ಕಾಣುವುದಿಲ್ಲ; ತಮ್ಮ ಆಯ್ಕೆ ಸಾರ್ಥಕವಾಗಿದೆಯೆಂಬ ಭಾವನೆಯೇ ಉದ್ದೀಪನಗೊಳ್ಳುವುದು. ಅವರಂಥವರು ಇಲ್ಲಿಗೆ ಬಂದು ನೆಲೆಸಿದುದು ಈ ಭಾಗದ ಜನತೆಯ ಪುಣ್ಯ. ಆಗಲೇ ನಿಂಬಾಳದ ಗುರುದೇವ ರಾನಡೆಯವರ ಭಕ್ತರಾದ ರಾಮರಾವ್ ದೇಸಾಯಿಯವರ ಪುತ್ರಿ ಪ್ರಮಿಳಾದೇವಿಯನ್ನು ವಿವಾಹವಾದರು. ಅವರ ಹಾಲು-ಜೇನಿನ ದಾಂಪತ್ಯಕ್ಕೆ ಐವರು ಪ್ರತಿಭಾವಂತ ಮಕ್ಕಳು. ಒಬ್ಬ ಮಗ- ಕಿಶೋರ ಪದಕಿ, ಇಂಗ್ಲಂಡಿನಲ್ಲಿ ಸರ್ಜನರಾಗಿದ್ದರೆ ಒಬ್ಬ ಮಗಳು ಪದ್ಮಜಾ ಪಿ.ಎಚ್.ಡಿ. ಮಾಡಿ ಪುಣೆಯಲ್ಲಿ ಸೀನಿಯರ್ ಸೈಂಟಿಫಿಕ್ ಆಫೀಸರ್. ಇನ್ನೊಬ್ಬ ಮಗಳು ಮಂಗಳಾ ಸ್ಥಳೀಯ ಕಾಲೇಜಿನಲ್ಲಿ ಉಪನ್ಯಾಸಕಿ. ಕಿರಿಯಮಗ ನಿಷ್ಣಾತ ತಬಲಾವಾದಕ. ಕೈಗೆ ಬಂದ ಇನ್ನೊರ್ವ ಮಗನ ಆಕಸ್ಮಿಕ ಸಾವನ್ನು ದೈವೇಚ್ಛೆಯೆಂದೇ ಸ್ವೀಕರಿಸಿದರು.

ಅರ್ಥಪೂರ್ಣ ಬಾಳನ್ನೆ ಬದುಕುತ್ತಿದ್ದರೂ ಅರ್ಥಗಳಿಕೆಗೆ ಇಳಿಯಲಿಲ್ಲ. ಅವರು ತಮ್ಮ ತ್ಯಾಗಕ್ಕೆ ಪ್ರತಿಯಾಗಿ ಸಂಪಾದಿಸಿದ್ದು ಅಸಂಖ್ಯ ಜನರ ಪ್ರೀತಿ-ವಿಶ್ವಾಸಗಳನ್ನು. ಯಾವುದೇ ರೋಗನಿದಾನದ ಆಧುನಿಕ ಯಂತ್ರೋಪಕರಣಗಳಿಲ್ಲದೆ ನಗರಗಳ ಪರಿಣತರು ಬೆರಳು ಕಚ್ಚುವಂತೆ ಸೂಕ್ಷ್ಮರೋಗಗಳನ್ನು ಗುರುತಿಸಿದ್ದಾರೆ, ಗುಣಪಡಿಸಿದ್ದಾರೆ. ೨೦೦ ವರ್ಷಗಳ ವೈದ್ಯಕೀಯ ಕೇಸುಗಳಲ್ಲಿ ಇತಿಹಾಸಗಳಲ್ಲಿ ಹತ್ತು ಮಾತ್ರ ದಾಖಲಾಗಿರುವ ಅಪರೂಪದ ಪ್ರಕರಣಗಳಲ್ಲಿ ಒಂದನ್ನು ಪಳ್ಳಿಯಲ್ಲಿದ್ದೇ ಡಾ. ಪದಕಿಯವರು ವರದಿಯೊಂದಿಗೆ ಸೊಲ್ಲಾಪುರದ ವಾಡಿಯಾ ಆಸ್ಪತ್ರೆಯ ಡಾ. ಮಹಾವೀರ ಮೆಹತಾ ಎಂಬ ವಿಖ್ಯಾತರೆಡೆ ಕಳಿಸಿಕೊಟ್ಟಾಗ ಅವರು ರೋಗಿಯನ್ನು ಪರೀಕ್ಷಿಸಿ ಆಶ್ಚರ್ಯಚಕಿತರಾಗಿ ಡಾ. ಪದಕಿಯವರನ್ನು ಕೊಂಡಾಡಿದರಲ್ಲದೆ ಅದರ ವಿವರವಾದ ವರದಿಯನ್ನು ಲಂಡನ್ನಿನ ಬ್ರಿಟಿಷ್ ಮೆಡಿಕಲ್ ಜರ್ನಲಿನಲ್ಲಿ ಪ್ರಕಟಿಸಿದರು. ಇಂಥ ಹಲಮಾರು ಘಟನೆಗಳನ್ನು ಪದಕಿಯವರು ಹೇಳುತ್ತಾರೆ-ಕೇಳಿದಾಗ ಮಾತ್ರ.

ಕಾಲೇಜಿನಲ್ಲಿದ್ದಾಗ ಹಾಕಿ, ಫುಟ್‌ಬಾಲ್, ಈಜುಗಾರಿಕೆ, ಚೆಸ್‌ಗಳಲ್ಲಿ ವಿಶೇಷ ಆಸಕ್ತಿಯಿತ್ತು. ಇಂಗ್ಲೀಷ್ ಸಾಹಿತ್ಯದಲ್ಲಿ ಸಾಕಷ್ಟು ಒಲವಿದೆ, ಚಾರ್ಲಸ್ ಡಿಕೆನ್ಸ್ ಹಾಗೂ ಆಸ್ಕರ್‌ವೈಲ್ಡ್ ಅವರ ಮೆಚ್ಚಿನ ಲೇಖಕರು. ಒಂದು ಪುಟ್ಟ ಗ್ರಂಥಾಲಯವನ್ನೇ ಅವರು ಹೊಂದಿದ್ದಾರೆ. ಸಂಗೀತ ಪ್ರೇಮಿಗಳೂ ಹೌದು.

ರೋಗಿಗೆ ಬೇಕಾಗಿರುವುದು ಔಷಧಿಯಲ್ಲ, ವಿಶ್ರಾಂತಿಯೆಂದೂ, ವಿಶ್ರಾಂತಿಯ ಅಗತ್ಯವಿದ್ದಾಗ ಜಡ್ಡು ಬರುತ್ತದೆಂದೂ ಅವರು ಹೇಳುತ್ತಾರೆ. ಜಡ್ಡು 'ಮುಸುಕಿನ ವರದಾನ' ಎಂಬುದನ್ನು ಬಿಂಬಿಸುತ್ತಾರೆ. ಅವರು ಇಂದಿನ ಬಹು ಔಷಧಿ ಉಪಚಾರ ಪದ್ಧತಿಯನ್ನು ಪುರಸ್ಕರಿಸುವುದಿಲ್ಲ. 'ಒಬ್ಬನೇ ಡಾಕ್ಟರನನ್ನು ನಂಬಿರಿ, ಅವನ ಮೇಲೆಯೇ ಎಲ್ಲ ವಿಶ್ವಾಸವನ್ನೂ ಇಡಿರಿ' ಎನ್ನುತ್ತಾರಲ್ಲದೆ ಕುಟುಂಬ ವೈದ್ಯಪದ್ಧತಿಯನ್ನು ಬೆಂಬಲಿಸುತ್ತಾರೆ. ಅಂಥ ವೈದ್ಯನು ತನ್ನ ರೋಗಿಯ ಎಲ್ಲ ಒಳ-ಹೊರಗನ್ನೂ ಬಲ್ಲವನಾಗಿರುವುದರಿಂದ ಅವನು ಮಾತ್ರ ಸೂಕ್ತ ಪರಿಹಾರ ವೀಯಬಲ್ಲನೆಂಬುದು ಅವರ ಭಾವನೆ. ನೇರವಾಗಿ ಪರಿಣತರೆಡೆಗೆ ಹೋಗುವುದಕ್ಕಿಂತ ಕುಟುಂಬ ವೈದ್ಯನ ಮೂಲಕ ಹೋಗುವುದು ರೋಗಿಗೆ ಹೆಚ್ಚು ಪ್ರಯೋಜನಕಾರಿಯೆಂಬುದು ಅವರ ಸಲಹೆ. ಡಾಕ್ಟರನು ತನ್ನ ವೃತ್ತಿಧರ್ಮವನ್ನು ಚಾರಿತ್ರ್ಯ, ಅನುಕಂಪ, ಸೇವಾಭಾವನೆ ಶ್ರದ್ಧೆಗಳನ್ನು ಮೈಗೂಡಿಸಿಕೊಳ್ಳಬೇಕೆಂಬ ಕಳಕಳಿ ಅವರದು.

ಅವರು ತಾವು ತೆಗೆದುಕೊಂಡಿದ್ದಕ್ಕಿಂತ ಹಲವು ಪಟ್ಟು ಸಮಾಜಕ್ಕೆ ಮರಳಿ ಕೊಟ್ಟಿದ್ದಾರೆ. ಸಮಾಜವೂ ಪ್ರೀತಿವಾತ್ಸಲ್ಯಗಳ ಪ್ರಶಸ್ತಿ ನೀಡಿರುವಾಗ ಇತರ ಪ್ರಶಸ್ತಿಗಳ ಗೊಡವೆಯಾದರೂ ಏಕೆ? ಅಲ್ಲವೆ?

*ಆಯ್.ಎಸ್.ಸಿಂಪಿ*

# ವಿವಾದದಲ್ಲಿ ಮರೆಯಾದ ಗೋವರ್ ಅಮೋಘ ಆಟ

ಆರು ಟೆಸ್ಟ್‌ಗಳ ಈ ಸರಣಿಯಲ್ಲಿ ಐದನೇ ಟೆಸ್ಟ್ ಪಂದ್ಯ ಆಡಲು ಇಂಗ್ಲೆಂಡ್ ಮತ್ತು ಆಸ್ಟ್ರೇಲಿಯ ಎಜ್‌ಬಾಸ್ಟನ್‌ಗೆ ಬಂದಿಳಿಯುವ ಮುನ್ನ ತಲಾ ಒಂದೊಂದು ಪಂದ್ಯ ಗೆದ್ದು ಸಮಸ್ಥಿತಿಯಲ್ಲಿದ್ದವು. ಉಳಿದ ಎರಡೂ ಪಂದ್ಯಗಳೂ ಡ್ರಾದಲ್ಲಿ ಅಂತ್ಯಗೊಂಡಿದ್ದವು.

೧೯೮೨-೮೩ರ ಆಸ್ಟ್ರೇಲಿಯ ಪ್ರವಾಸದಲ್ಲಿ ಆ್ಯಷಸ್ ಅನ್ನು ಕಾಂಗರೂಗಳಿಗೆ ಬಿಟ್ಟುಕೊಟ್ಟಿದ್ದ ಇಂಗ್ಲೆಂಡ್ ಅದನ್ನು ಮರಳಿ ಪಡೆಯಲೇಬೇಕೆಂಬ ಗುರಿಯೊಂದಿಗೆ ದಿಟ್ಟ ತಯಾರಿ ನಡೆಸಿತ್ತು. ಇದಕ್ಕೆ ಪ್ರತಿಯಾಗಿ ೧೯೭೪ರಿಂದ ಆ್ಯಷಸ್‌ಅನ್ನು ತನ್ನಲ್ಲಿಯೇ ಇಟ್ಟುಕೊಂಡಿದ್ದ ಆಸ್ಟ್ರೇಲಿಯ ಅದೇ ಛಲದೊಂದಿಗೆ ಮೈದಾನಕ್ಕಿಳಿದಿತ್ತು.

## ಮೈದಾನದಲ್ಲಿ

ಬ್ಯಾಟಿಂಗಿಗೆ ಸಹಾಯಕಾರಿಯಾಗಿದ್ದ ಎಜ್‌ಬಾಸ್ಟನ್ ಕ್ರೀಡಾಂಗಣದಲ್ಲಿ ಮೊದಲು ಆಟಕ್ಕಿಳಿದ ಆಸ್ಟ್ರೇಲಿಯಕ್ಕೆ ಹೇಳಿಕೊಳ್ಳುವಂತಹ ಆರಂಭವೇನೂ ಸಿಗಲಿಲ್ಲ. ಹಿಂದಿನ ಪಂದ್ಯಗಳಲ್ಲಿ ತಕ್ಕಮಟ್ಟಿನ ಆಟವಾಡಿದ್ದ ವುಡ್ (೧೯) ಬಾಥಮ್‌ಗೆ ಮೊದಲ ಬಲಿಪಶುವಾದ. ಈ ಹಂತದಲ್ಲಿ ಹಿಲ್ಡಿಚ್ (೩೯)ನನ್ನು ಸೇರಿಕೊಂಡ ಕೆಪ್ಲರ್ ವೆಸೆಲ್ಸ್ (೮೩) ನಿಧಾನಗತಿಯಲ್ಲಿ ರನ್‌ಗಳನ್ನು ಸೇರಿಸತೊಡಗಿದಾಗ ಮಳೆರಾಯ ಅವತರಿಸಿದ. ಹೀಗಾಗಿ ಚಹಾ ವಿರಾಮದ ನಂತರ ಆಟ ನಡೆಯಲೇ ಇಲ್ಲ.

ಪಂದ್ಯದ ಎರಡನೇ ದಿನ. ಇಂಗ್ಲೆಂಡಿನ ಪ್ರಮುಖ ಬೌಲರ್ ಮತ್ತು ಇದೇ ಪ್ರಥಮ ಬಾರಿಗೆ ಆ್ಯಷಸ್ ಸರಣಿಗೆ ಪದಾರ್ಪಣೆ ಮಾಡಿದ್ದ ರಿಚರ್ಡ್ ಎಲಿಸನ್ ತೀವ್ರ ಚಳಿಯಿಂದಾಗಿ ಅಸ್ವಸ್ಥನಾಗಿದ್ದರೂ ಬೆರುಗುಗೊಳಿಸುವಂತಹ ಬೌಲಿಂಗ್ ಮಾಡಿ ಆಸ್ಟ್ರೇಲಿಯದ ನಾಲ್ಕು ಪ್ರಮುಖ ವಿಕೆಟ್‌ಗಳನ್ನು ಉದುರಿಸಿದ.

ಒಂದು ಹಂತದಲ್ಲಿ ೧೮೯ ರನ್‌ಗಳಿಗೆ ಕೇವಲ ಮೂರು ವಿಕೆಟ್ ಕಳೆದುಕೊಂಡಿದ್ದ ಆಸ್ಟ್ರೇಲಿಯ ೨೦೮ ರನ್ ಗಳಿಸುವಷ್ಟರಲ್ಲಿ ಆರು ಮಂದಿಯನ್ನು ಪೆವಿಲಿಯನ್‌ಗೆ ಕರೆಸಿಕೊಂಡಿತ್ತು. ಮೂರನೇ ವಿಕೆಟ್‌ಗೆ



**ಕ್ರಿಕೆಟ್ ಪ್ರಿಯ**

● ಆದಿಕೇಶವ

**ಅಂದಿನ ಆಟ !**
**ಇಂದಿನ ನೋಟ !**

ವೆಸೆಲ್ಸ್ ಮತ್ತು ನಾಯಕ ಅಲನ್ ಬಾರ್ಡರ್ (೪೫) ರಿಂದ (೯೭) ರನ್ ಸೇರಿಸಿದಾಗ ಎಲಿಸನ್ ಈ ಜೋಡಿಯನ್ನು ಮುರಿದ. ಮುಂದೆ ಆಸ್ಟ್ರೇಲಿಯದ ಪ್ರಮುಖ ಬ್ಯಾಟ್ಸಮನ್‌ಗಳು ಪ್ರತಿರೋಧ ತೋರುವ ಗೋಜಿಗೆ ಹೋಗದೆ ಸಮ್ಮೋಹನಕ್ಕೊಳಗಾದವರಂತೆ ವಿಕೆಟ್ ಒಪ್ಪಿಸಿ ಪೆವಿಲಿಯನ್‌ಗೆ ತೆರಳಿದರು.

ಏಳು ವಿಕೆಟ್‌ಗಳನ್ನು ೨೧೮ ರನ್‌ಗಳಿಗೆ ಕಳೆದು ಕೊಂಡು ಶೋಚನೀಯ ಸ್ಥಿತಿಯಲ್ಲಿದ್ದ ಆಸ್ಟ್ರೇಲಿಯಾಕ್ಕೆ ಜೆಫ್ ಲಾಸನ್ (೫೩) ಕ್ರೇಗ್ ಮ್ಯಾಕ್‌ಡರ್ಮೆಟ್ (೩೫) ಮತ್ತು ಜೆಫ್ ಥಾಮ್ಸನ್ (೨೮) ಚೈತನ್ಯ ನೀಡಿದ್ದಲ್ಲದೆ ತಂಡದ ಮೊತ್ತ ೩೦೦ರ ಗಡಿ ದಾಟು ವಂತೆ ನೋಡಿಕೊಂಡರು.

ಶುರುವಿನಲ್ಲಿ ಆಸ್ಟ್ರೇಲಿಯಾಕ್ಕೆ ಮಾರಕವಾಗಿ ಕಂಡಿದ್ದ ಎಲಿಸ್‌ನನ್ನು ಆತ್ಮ ವಿಶ್ವಾಸದಿಂದ ಎದುರಿಸಿದ ಲಾಸನ್ ಮತ್ತು ಮ್ಯಾಕಡ್‌ಮ್ಯಾಟ್ ಎಂಟನೇ ವಿಕೆಟ್ ಜೊತೆಯಾಟದಲ್ಲಿ ೫೮ರನ್ ಸೇರಿಸಿದರು.

ಇಂಗ್ಲೆಂಡ್–ಆಸ್ಟ್ರೇಲಿಯ
ಐದನೆ ಟೆಸ್ಟ್

ಸ್ಥಳ: ಎಜ್‌ಬಾಸ್ಟನ್
ದಿ: ಆಗಸ್ಟ ೧೫, ೧೬, ೧೭, ೧೯, ೨೦
೧೯೮೫

ಇಂಗ್ಲೆಂಡಿನ ಪರ ಯಶಸ್ವೀ ಬೌಲರ್ ಎನಿಸಿದ ಎಲಿಸನ್ ಬಿದ್ದ ೧೦ ವಿಕೆಟ್‌ಗಳಲ್ಲಿ ಆರನ್ನು ತನ್ನ ಬುಟ್ಟಿಗೆ ಹಾಕಿಕೊಂಡಿದ್ದ.

ಆಸ್ಟ್ರೇಲಿಯದ ೩೩೫ ರನ್‌ಗಳನ್ನು ಬೆನ್ನಟ್ಟಿದ ಆತಿಥೇಯ ಇಂಗ್ಲೆಂಡ್ ಈ ದಶಕದಲ್ಲಿ ಮೊದಲ ಬಾರಿಗೆ ತನ್ನ ಉತ್ಕೃಷ್ಟ ಬ್ಯಾಟಿಂಗ್ ಪ್ರದರ್ಶನ ನೀಡಿತು. ಆರಂಭಿಕ ಬ್ಯಾಟ್ಸಮನ್ ಗ್ರಹಂ ಗೂಚ್ (೧೯) ಬೇಗನೇ ಔಟಾದ ನಂತರ ರಾಬಿನ್‌ಸನ್ ಜೊತೆಗೂಡಿದ ನಾಯಕ ಡೆವಿಡ್ ಗೋವರ್ ಎಜ್‌ಬಾಸ್ಟನ್ ಮೈದಾನ 'ಬ್ಯಾಟ್ಸಮನ್‌ಗಳ ಸ್ವರ್ಗ' ಎಂಬ ಮಾತನ್ನು ರುಜುವಾತುಪಡಿಸಿದ್ದಲ್ಲದೆ ಅಲ್ಲಿ ನೆರೆದಿದ್ದ ಪ್ರತಿಯೊಬ್ಬ ಅಭಿಮಾನಿಯ ಮನದಲ್ಲಿ ಈ ಪಂದ್ಯ ಚಿರಸ್ಥಾಯಿಯಾಗಿ ಉಳಿಯುವಂತೆ ಮಾಡಿದ.

ಆಸ್ಟ್ರೇಲಿಯಾದ ಬೌಲಿಂಗ್‌ನಲ್ಲಿ ಯಾವುದೇ ಸತ್ವ ಇಲ್ಲ ಎನ್ನುವಂತೆ ಆಡಿದ ಗೋವರ್ ಮತ್ತು ರಾಬಿನ್‌ಸನ್ (೧೪೮) ಎರಡನೇ ವಿಕೆಟ್ ಪಾಲುಗಾರಿಕೆಯಲ್ಲಿ ೩೩೧ ರನ್ ಸೇರಿಸಿ ಒಂದು ಹೊಸ ದಾಖಲೆ ಬರೆದರು. ಈ ಜೋಡಿಯನ್ನು ಮುರಿಯಲು ಬಾರ್ಡರ್ ಆಗಾಗ ಎರಡೂ ತುದಿಯಲ್ಲಿ ಬೌಲಿಂಗ್ ಬದಲಾವಣೆ ಮಾಡಿದನಾದರೂ ಪ್ರಯೋಜನವಾಗ ಲಿಲ್ಲ.

ಸ್ಕೋರು ಒಂದು ವಿಕೆಟ್‌ಗೆ ೩೮೯ ಆಗಿದ್ದಾಗ ಕಡೆಗೂ ಆಸ್ಟ್ರೇಲಿಯಾ ಈ ಜೋಡಿಯನ್ನು ಮುರಿ ಯಲು ಯಶಸ್ವಿಯಾಯಿತು. ಆದರೆ ಈ ಸಂತಸ ಬಹಳ ಹೊತ್ತು ಉಳಿಯಲಿಲ್ಲ. ರಾಬಿನ್‌ಸನ್ ಪೆವಿಲಿ ಯನ್‌ಗೆ ಮರಳಿದ ನಂತರ ನಾಯಕನನ್ನು ಸೇರಿ ಕೊಂಡ ಮೈಕ್ ಗ್ಯಾಟಿಂಗ್ ಔಟಾಗದೆ ಶತಕ ಬಾರಿಸಿದ್ದ ಲ್ಲದೆ ತಮ್ಮ ಗೋವರ್ ಜೊತೆಯಾಟದಲ್ಲಿ ೯೪ರನ್ ಸೇರಿಸಿದ.

ರಾಬಿನ್‌ಸನ್ ಮತ್ತು ಗ್ಯಾಟಿಂಗ್‌ರಿಂದ ಉತ್ತಮ ಬೆಂಬಲ ಪಡೆದ ಗೋವರ್ ತಮ್ಮ ಜೀವನದ ಅತಿ ಹೆಚ್ಚಿನ ಗಳಿಕೆ (೨೧೫) ಮತ್ತು ಟೆಸ್ಟ್ ಇತಿಹಾಸದಲ್ಲಿ ಎರಡನೇ ಬಾರಿ ದ್ವಿಶತಕ ದಾಖಲಿಸಿದಾಗ ಲಾಸನ್ ಈ ದೀರ್ಘ ಇನಿಂಗ್ಸ್‌ಗೆ ಮುಕ್ತಾಯ ಹಾಡಿದ. ಆದರೆ ಗೋವರ್‌ನ ಭರ್ಜರಿ ಆಟ ಕೊನೆಯ ದಿನ ಉಂಟಾದ ವಿವಾದದಲ್ಲಿ ಮರೆಯಾಗಿ ಹೋಯಿತು.

ನಾಲ್ಕನೆ ದಿನದ ಚಹಾ ವಿರಾಮದ ವೇಳೆಗೆ ಇಂಗ್ಲೆಂ ಡಿನ ಸ್ಕೋರು ಮೂರು ವಿಕೆಟ್‌ಗಳಿಗೆ ೫೪೫. ಇಷ್ಟಾ ದರೂ ತಂಡದ ರನ್ ಗಳಿಕೆಯ ದಾಹ ಇನ್ನೂ ಆರಿರಲಿಲ್ಲ. ಒಂದೆಡೆ ಗಟ್ಟಿಯಾಗಿ ತಳ ಊರಿದ್ದ ಗ್ಯಾಟಿಂಗಿಗೆ ಸಮರ್ಥ ಬೆಂಬಲ ನೀಡಿದ ಅಲನ್ ಲ್ಯಾಂಬ್ (೪೬) ನಾಲ್ಕನೆ ವಿಕೆಟ್ ಪಾಲುಗಾರಿಕೆಯಲ್ಲಿ ೧೦೯ ರನ್ ಕೂಡಿಹಾಕಿದ.

ನಾಲ್ಕನೇ ದಿನದ ಆಟ ಮುಗಿಯುವ ಸ್ವಲ್ಪ ಅವಧಿಯ ಮುನ್ನ ಇಂಗ್ಲೆಂಡ್ ಐದು ವಿಕೆಟ್‌ಗಳಿಗೆ ೫೯೫ ರನ್ ಗಳಿಸಿದ್ದಾಗ ನಾಯಕ ಇನಿಂಗ್ಸ್ ಡಿಕ್ಲೇರ್ ಮಾಡಿಕೊಂಡ. ಇದರಿಂದ ಆತಿಥೇಯರಿಗೆ ಒಟ್ಟು ೨೬೫ ರನ್‌ಗಳ ಲೀಡ್ ದೊರೆಯಿತು.

ಪಂದ್ಯ ಮುಗಿಯಲು ಕೇವಲ ಇನ್ನೊಂದು ದಿನ ಮಾತ್ರ ಬಾಕಿ ಇದೆ. ಯಾವುದೇ ಅನಾಹುತ ಸಂಭವಿಸದೆ ಪಂದ್ಯ 'ಡ್ರಾ'ದಲ್ಲಿ ಮುಗಿಯುವದು ಎಂಬ ಲೆಕ್ಕದಲ್ಲಿದ್ದ ಆಸ್ಟ್ರೇಲಿಯಕ್ಕೆ ಕನಸಿನಲ್ಲಿಯೂ ನಿರೀಕ್ಷಿಸಲಾರದ ಆಘಾತ ಕಾದಿತ್ತು. ಮೊದಲ ಸರದಿಯಲ್ಲಿ 'ಸಿಂಹಸ್ವಪ್ನ'ವಾಗಿದ್ದ ಎಲಿಸನ್ ಈ ಬಾರಿಯೂ ಆರಂಭದಲ್ಲೇ ಆಸ್ಟ್ರೇಲಿಯಾ ಮೇಲೆ ಅಟ್ಟಹಾಸ ಮೆರೆದ.

ಆಸ್ಟ್ರೇಲಿಯಾದ ಸ್ಕೋರ್ ಬೋರ್ಡಿನಲ್ಲಿ ಬರೀ ೩೭ ರನ್‌ಗಳಾಗಿದ್ದಾಗ ತಲಾ ೧೦ ರನ್ ಗಳಿಸಿದ್ದ ವುಡ್, ಹಿಲ್ಡಿಚ್ ಮತ್ತು ವೆಸೆಲ್ಸ್ ಪೆವಿಲಿಯನ್ ಸೇರಿಬಿಟ್ಟರು. ಇವರ ಹಿಂದೆಯೇ ನಾಯಕ ಬಾರ್ಡರ್ (೨) ವಾಪಸ್ ನಿರ್ಗಮಿಸಿದ.

ನಾಲ್ವರು ಪ್ರಮುಖ ಬ್ಯಾಟ್ಸಮನ್‌ಗಳು ಬೇಗನೇ ಪೆವಿಲಿಯನ್ ಸೇರಿದ ನಂತರ ಆಸ್ಟ್ರೇಲಿಯ ಆಕಾಶದ ಕಡೆ ನೋಡತೊಡಗಿತ್ತು. ಪಂದ್ಯದ ಆರಂಭದ ದಿನ ಮತ್ತು ಓಲ್ಡ್ ಟ್ರಾಫರ್ಡ್‌ನಲ್ಲಿ ಸೋಲಿನಿಂದ ಪಾರು ಮಾಡಿದ್ದ ಮಳೆರಾಯ ಮತ್ತೆ ನಮ್ಮ ಮಾನ ಕಾಪಾಡುವನೆ? ಎಂಬ ನಿರೀಕ್ಷೆಯಲ್ಲಿ ಆಸ್ಟ್ರೇಲಿಯ ಇತ್ತು. ಆದರೆ ಅದು ಅಂದುಕೊಂಡಂತೆ ನಡೆಯಲೇ ಇಲ್ಲ. ಇಂಗ್ಲೆಂಡಿನ ಅಟ್ಟಹಾಸಕ್ಕೆ ಸ್ವಲ್ಪ ಹೊತ್ತು ಕಡಿವಾಣ ಹಾಕಿದ್ದ ಫಿಲಿಪ್ಸ್ (೫೯) ವಿವಾದಾಸ್ಪದ ತೀರ್ಪಿಗೆ ಬಲಿಯಾದ ನಂತರ ಆಸ್ಟ್ರೇಲಿಯ ಶಿಬಿರದಲ್ಲಿ ಸೋಲಿನ ಛಾಯೆ ಸ್ಪಷ್ಟವಾಗಿ ಮೂಡಿತ್ತು.

ವೇಯ್ನ್ ಫಿಲಿಪ್ಸ್ ಸ್ಪಿನ್ನರ್ ಫಿಲ್ ಎಡ್ಮಂಡ್ಸ್ ಬೌಲಿಂಗ್‌ನಲ್ಲಿ ಹೊಡೆದಾಗ ಚೆಂಡು ಸಿಲ್ಲಿಪಾಯಿಂಟ್‌ನಲ್ಲಿ ನಿಂತಿದ್ದ ಅಲನ್ ಲ್ಯಾಂಬ್ ಎದುರು ನೆಲಕ್ಕೆ ಬಿದ್ದು ನಂತರ ಲ್ಯಾಂಬ್ ಕಾಲಿಗೆ ಬಡಿದು ಮೇಲೆದ್ದಿತು. ನೆಲಕ್ಕೆ ಬಿಡದೆ ಹೀಗೆ ಪುಟಿದೆದ್ದ ಚೆಂಡನ್ನು ಮತ್ತೊಮ್ಮೆ ಲ್ಯಾಂಬ್ ಕಾಲಿನಿಂದ ಒದ್ದ ತಕ್ಷಣ ಅಗ ಚೆಂಡನ್ನು ಪಕ್ಕದಲ್ಲೇ ನಿಂತಿದ್ದ ಗೋವರ್ ಹಿಡಿದ ಅಂಪೈರ್ ಕೈಬೆರಳು ಮೇಲೆದ್ದಿತ್ತು.

ಈ ತೀರ್ಪಿನ ವಿರುದ್ಧ ಆಸ್ಟ್ರೇಲಿಯನ್ನರು ತೀವ್ರ ಪ್ರತಿಭಟನೆ ವ್ಯಕ್ತಪಡಿಸಿದರಾದರೂ ಯಾವುದೇ ಪ್ರಯೋಜನವಾಗಲಿಲ್ಲ.

ಆಸ್ಟ್ರೇಲಿಯದ ಕೊನೆಯ ವಿಕೆಟ್‌ಗಳನ್ನು ಸುಲಭವಾಗಿ ಕಬಳಿಸಿ ಕೇವಲ ೧೪೨ ರನ್ ಗಳಿಗೆ ಆಲೌಟ್ ಮಾಡಿದ ಇಂಗ್ಲೆಂಡ್ ಇನಿಂಗ್ಸ್ ಮತ್ತು ೧೧೮ ರನ್‌ಗಳ ಭಾರೀ ವಿಜಯ ಗಿಟ್ಟಿಸಿಕೊಂಡಿತು.

ಪ್ರಥಮ ಇನಿಂಗ್ಸ್‌ನಲ್ಲಿ ಅಮೋಘ ಬೌಲಿಂಗ್ ಪ್ರದರ್ಶನ ನೀಡಿದ್ದ ಎಲಿಸನ್ ಈ ಬಾರಿಯೂ ತನ್ನ ಚಮತ್ಕಾರ ತೋರಿ ನಾಲ್ಕು ವಿಕೆಟ್‌ಗಳನ್ನು ಕಬಳಿಸಿದ. ಇನ್ನೊಂದು ತುದಿಯಲ್ಲಿ ಬಾಥಮ್ ಆಸ್ಟ್ರೇಲಿಯ ಬ್ಯಾಟ್ಸಮನ್‌ಗಳಿಗೆ ಬಹಳ ಹೊತ್ತು ಪಿಚ್‌ನಲ್ಲಿ ನಿಲ್ಲಲು ಬಿಡದೆ ಮೂವರನ್ನು ತನ್ನ ಖಾತೆಗೆ ಜಮಾ ಮಾಡಿಕೊಂಡ.

**ಅಲನ್ ಬಾರ್ಡರ್:** ಫಿಲಿಪ್ಸ್‌ರನ್ನು ಔಟ್ ಮಾಡಿದ ತೀರ್ಪು ನಮಗೆ ಬಹಳ ದುಬಾರಿಯಾಗಿ ಪರಿಣಮಿಸಿತು. ಫಿಲಿಪ್ ಹೊಡೆದ ಚೆಂಡು ನೇರವಾಗಿ ಫೀಲ್ಡರ ಕೈಗೆ ತಲುಪಿಲ್ಲ. ಮೊದಲು ನೆಲಕ್ಕೆ ಬಿದ್ದು ನಂತರ ಅಲನ್ ಲ್ಯಾಂಬ್ ಪಾದಕ್ಕೆ ಬಡಿದು ಕೊನೆಗೆ ಗೋವರ್ ಕೈ ಸೇರಿದೆ ಎಂಬುದು ಸ್ಪಷ್ಟವಾಗಿ ಕಾಣುತ್ತಿತ್ತು. ಆದರೆ ಅದೃಷ್ಟ ನಮ್ಮ ಪರವಾಗಿರಲಿಲ್ಲ. ಇದರಿಂದ ನಾವು ಸೋತೆವು.

**ಡೆವಿಡ್ ಗೋವರ್:** ಫಿಲಿಪ್ಸ್ ಔಟೆಂದು ಅಂಪೈರ್ ಡೆವಿಡ್ ನೀಡಿದ ತೀರ್ಪು ಸರಿಯಾಗಿಯೇ ಇತ್ತು. ನಾವು ಈ ಪಂದ್ಯದಲ್ಲಿ ದ್ವಿಶತಕ ಬಾರಿಸಿದರೂ ಎಲಿಸ್‌ರ ಅದ್ಭುತ ಬೌಲಿಂಗ್ ಪ್ರದರ್ಶನ ಬಹಳ ಕಾಲ ನೆನಪಿನಲ್ಲಿ ಉಳಿಯುವಂತಹುದು. ನಿಜವಾಗಿಯೂ ಅವರು ನಮ್ಮ ಭರ್ಜರಿ ಗೆಲುವಿನ ರೂವಾರಿ.

## ದಾಖಲೆಯಲ್ಲಿ

ಓವಲ್‌ನ ನಡೆದ ಆರನೇ ಟೆಸ್ಟ್‌ನಲ್ಲಿ ಇಂಗ್ಲೆಂಡ್ ಮತ್ತೆ ಇನಿಂಗ್ಸ್ ಹಾಗೂ ೯೪ ರನ್‌ಗಳ ಜಯಸಾಧಿಸಿ ಆ್ಯಷಸ್‌ಅನ್ನು ಮರಳಿ ಗಳಿಸಿತು. ಗ್ರಹಂ ಗೂಚ್ (೧೯೬) ಮತ್ತು ಡೆವಿಡ್ ಗೋವರ್ (೧೫೭) ಎರಡನೆ ವಿಕೆಟ್ ಪಾಲುಗಾರಿಕೆಯಲ್ಲಿ ೩೫೧ ರನ್‌ಗಳನ್ನು ಪೇರಿಸಿದ್ದು ಈ ಪಂದ್ಯದ ವಿಶೇಷವಾಗಿತ್ತು.

# ಒಳಗಣ್ಣು ತೆರೆಸಿದ ದಾರ್ಶನಿಕ



ಮೂವತ್ತು ಮೂವತ್ತೈದು ವರ್ಷಗಳ ಹಿಂದಿನ ಮಾತು. ನಾನಾಗ ಪುಣೆಯಲ್ಲಿ ಪೊಲೀಸ್ ಆಫೀಸರನಾಗಿದ್ದೆ. ಜೆ. ಕೃಷ್ಣಮೂರ್ತಿಯವರ ಹೆಸರನ್ನು ಕೇಳಿದ್ದೆನಷ್ಟೆ. ಆದರೆ ತತ್ವಶಾಸ್ತ್ರದ ಬಗೆಗಾಗಲಿ ಅಧ್ಯಾತ್ಮದ ಬಗೆಗಾಗಲಿ ನನ್ನ ಆಸಕ್ತಿ ಅಷ್ಟಕ್ಕಷ್ಟೆ. ಅಪರಾಧಿಗಳೊಂದಿಗಿನ ಬಿಡಲಾರದ ನಂಟು ನಮ್ಮದು. ನಮ್ಮ ವೃತ್ತಿಯೇ ಹಾಗೆ. ಹೀಗಾಗಿ ತತ್ವಜ್ಞಾನಿಗಳಿಗೂ ನಮಗೂ ಇರುವ ಸಂಬಂಧ ಮುಲ್ಲಾಸಾಬಿಗೂ ತುಳಸಿಲಗ್ನಕ್ಕೂ ಇರುವ ಸಂಬಂಧದಷ್ಟೆ ಎಂದರೆ ತಪ್ಪಾಗಲಿಕ್ಕಿಲ್ಲ. ಹೀಗಿರುವಾಗ ಒಂದು ದಿನ ಮಿತ್ರನೊಬ್ಬನ ಬಲವಂತದಿಂದಾಗಿ ಇಷ್ಟವಿರದಿದ್ದರೂ ಜಿದ್ದು ಕೃಷ್ಣಮೂರ್ತಿಗಳ ಉಪನ್ಯಾಸ ಕೇಳಲು ಹೊರಟೆ.

ಪುಣೆಯ ರಮಣಬಾಗ್ ಶಾಲೆಯ ಆಟದ ಬಯಲು ಕೃಷ್ಣಮೂರ್ತಿಗಳ ಉಪನ್ಯಾಸ ಜರುಗಲಿದ್ದ ತಾಣ. ನಾವಿಬ್ಬರೂ ಅಲ್ಲಿ ತಲುಪಿದಾಗ ಕಾರ್ಯಕ್ರಮ ಶುರುವಾಗಿರಲಿಲ್ಲ. ಬಯಲು ಶ್ರೋತೃಗಳಿಂದ ತುಂಬಿತ್ತು. ದೂರದಲ್ಲೊಂದು ಮರದ ವೇದಿಕೆ, ಅದರ ಮೇಲೆ ಮತ್ತೆ ರತ್ನಗಂಬಳಿಗಳ ಹಾಸು. ಮುಂಭಾಗದಲ್ಲಿ ಮೈಕು. ಆರು ಗಂಟೆಯ ಸುಮಾರಿಗೆ ಅಂಬಾಸೆಡರ್ ಕಾರೊಂದು ಬಂದು ಬಯಲಂಚಿಗೆ ನಿಂತಿತು. ಎತ್ತರ ಹಾಗೂ ತುಸು ಬಡಕಲು ದೇಹದ ಸರಳ ವೇಷದ ವ್ಯಕ್ತಿಯೊಬ್ಬರು ಕೆಳಗಿಳಿದು ನೆಟ್ಟಗೆ ನಿಂತುಕೊಂಡರು. ಜನರೆಲ್ಲ ನಿಂತು ಅವರನ್ನು ಅಭಿವಂದಿಸಿದರು. ಅವರೇ ಜೆ. ಕೃಷ್ಣಮೂರ್ತಿಗಳೆಂದು ಗುರುತಿಸಿದೆ. ಅವರ ಮುಖದ ಮೇಲೆ ತೇಜಸ್ಸು. ದೊಡ್ಡದಾದ ಕಣ್ಣುಗಳಲ್ಲಿ ಹೊಳಪು. ಮೆಲ್ಲಗೆ ಹೆಜ್ಜೆಯಿಡುತ್ತ ವೇದಿಕೆಯತ್ತ ನಡೆದು ಪದ್ಮಾಸನ ಹಾಕಿ, ಕಣ್ಣುಗಳನ್ನು ಮುಚ್ಚಿ ಕೆಲಕ್ಷಣ ಹಾಗೆಯೇ ಕುಳಿತರು. ಆಮೇಲೆ ಕಣ್ಣು ತೆರೆದು ಮೇಲೆಲ್ಲ ತಮ್ಮ ದೃಷ್ಟಿಯನ್ನು ಹಾಯಿಸಿದರು. ಎಲ್ಲೆಡೆ ನೀರವತೆ.

ಜೆ. ಕೃಷ್ಣಮೂರ್ತಿಗಳು ನೇರವಾಗಿ ಮಾತುಗಳನ್ನು ಆರಂಭಿಸಿದರು. ಅವರ ಮಾತುಗಳಲ್ಲಿ ಖಚಿತತೆಯಿತ್ತು. "ಮಾನ್ಯರೆ, ಇಂದು ಯಾವ ವಿಷಯ ಕುರಿತು ಮಾತನಾಡೋಣ?" ಎಂದಂದು ಶ್ರೋತೃಗಳ ಪ್ರತಿಕ್ರಿಯೆಗಾಗಿ ತುಸು ಕಾಯ್ದು ತಮ್ಮ ಮಾತನ್ನು ಮುಂದುವರೆಸಿದರು. ಧ್ಯಾನ ಎಂದರೇನು? ಎಂಬ ವಿಷಯದ ಬಗ್ಗೆ ಅವರು ಸುಮಾರು ಒಂದು ಗಂಟೆ ಮಾತನಾಡಿ

---

❀ ಮರಾಠಿ ಮೂಲ: ವ. ಕೃ. ಜೋಶಿ
ಕನ್ನಡಕ್ಕೆ: ವಿರೂಪಾಕ್ಷ ಕುಲಕರ್ಣಿ

ದರು. ಶ್ರೋತೃಗಳು ಮಂತ್ರಮುಗ್ಧರಾಗಿ ಅವರ ಮಾತನ್ನು ಆಲಿಸುತ್ತಿದ್ದರು. ಅವರ ತತ್ವವಿಚಾರಗಳ ಹಿನ್ನೆಲೆ ನನಗೆ ತಿಳಿಯದ ಕಾರಣ ಅವರು ಹೇಳಿದ್ದು ನನಗೆ ಅರ್ಥವಾಗುತ್ತಿರಲಿಲ್ಲ. ಆದರೆ ಒಂದು ಹಂತದಲ್ಲಿ ಅವರಾಡಿದ ಮಾತೊಂದು ನನ್ನನ್ನು ತತ್ತರಿಸುವಂತೆ ಮಾಡಿತು. ಅವರಂದುದು ಹೀಗೆ: "ಮಾನ್ಯರೆ, ಇಂಥ ನ್ಯಾಯವಾದಿಗಳು ಹಾಗೂ ಪೋಲೀಸರಿಗೆ ಸತ್ಯದ ಅರಿವಾಗದು. ದೈವೀ ಪ್ರಸಾದ ಎಂದರೇನೆಂಬುದು ಅಂಥವರಿಗೆಂದೂ ತಿಳಿಯದು."

ಅವರ ಈ ಮಾತುಗಳಿಂದ ಯಾರೋ ನನ್ನ ತೆರೆದ ಬೆನ್ನಿಗೆ ಚಾಟಿಯೇಟು ಕೊಡುತ್ತಿರುವಂತೆ ಅನ್ನಿಸಿತು. ಸಭೆ ಮುಗಿದು ಜನರು ಚದುರಿದರು. ಆದರೆ ನನ್ನ ಮನದಲ್ಲೆದ್ದ ಬಿರುಗಾಳಿ ಮಾತ್ರ ಇಳಿಮುಖವಾಗಲೇ ಇಲ್ಲ. ನಾನು ಪೋಲೀಸ ವೃತ್ತಿಯಲ್ಲಿದ್ದ ಮಾತ್ರಕ್ಕೆ ಸತ್ಯಕ್ಕೆ ಎರವಾಗಬೇಕೆ?

ಅವರನ್ನೇ ಕಂಡು ಆ ಕುರಿತು ಅವರ ವಿಚಾರವನ್ನು ಅರಿಯಲು ಸಾಧ್ಯವಾದರೆ ಎಷ್ಟು ಚೆನ್ನ ಎನ್ನಿಸಿತು. ಆದರೆ ಅಂತಹ ದೊಡ್ಡವರನ್ನು ತಲುಪುವುದು ಹೇಗೆಂಬ ಪ್ರಶ್ನೆ ಮುಂದೆ ಬಂದಾಗ ನನ್ನ ಬಾಲ್ಯದ ಗೆಳೆಯ ಪದ್ಮಾಕರ ನೆನಪಾದ. ಮಹಾರಾಷ್ಟ್ರದ ಹಿರಿಯ ನಾಯಕರಾದ ರಾವಸಾಹೇಬ್ ಹಾಗೂ ಅಚ್ಯುತರಾವ್ ಪಟವರ್ಧನರ ತಮ್ಮನೀತ. ಇವರೆಲ್ಲ ಕೃಷ್ಣಮೂರ್ತಿಗಳಿಗೆ ತೀರ ಹತ್ತಿರದವರಾಗಿದ್ದರು. ಪದ್ಮಾಕರನನ್ನು ಕಂಡು, "ಕೃಷ್ಣಮೂರ್ತಿಗಳನ್ನು ಒಂದು ಪ್ರಶ್ನೆ ಕೇಳಬೇಕೆಂದ್ದೇನೆ; ಆಗಬಹುದೆ?" ಎಂದೆ. ಅವನಿಗೆ ಅದರಲ್ಲೇನೂ ಕಷ್ಟ ಕಾಣಲಿಲ್ಲ. "ಕೃಷ್ಣಮೂರ್ತಿಗಳು ಉಳಿದುಕೊಂಡಿರುವುದು ಗಣೇಶಖಿಂಡ್ ಬಳಿಯ ಒಂದು ಬಂಗ್ಲೆಯಲ್ಲಿ. ನಾಳೆ ಸಂಜೆ ನಾಲ್ಕು ಗಂಟೆಗೆ ಅಲ್ಲಿಗೆ ಬಂದುಬಿಡು. ಅವರ ಸೆಕ್ರೆಟರಿ ರಾಜಗೋಪಾಲ ಅಂತ ಇದ್ದಾರೆ. ಅವನಿಗೆ ಹೇಳಿಟ್ಟರ್ರೀನಿ", ಎಂದ ಆತ. ನನ್ನ ಸಮಸ್ಯೆ ಇಷ್ಟೊಂದು ಶೀಘ್ರವಾಗಿ ಬಗೆಹರಿದಿದ್ದನ್ನು ಕಂಡು ಅಚ್ಚರಿಯೆನಿಸಿತು.

ಮಾರನೆಯ ದಿನ ಸಂಜೆ ನಾಲ್ಕು ಗಂಟೆಗೆಂದರೆ ಅಲ್ಲಿಗೆ ಹೋದೆ. ಬಂಗ್ಲೆ ಕಿರಿದಾಗಿತ್ತು. ಸುತ್ತಲೂ ಹುಲ್ಲು ಹಾಸಿಗೆ, ಹೂದೋಟಗಳಿದ್ದವು. ವಿಶಾಲವಾದ ವರಾಂಡ ಕೂಡ ಇತ್ತು. ಚಿಕ್ಕ ಗುಂಪುಗಳಲ್ಲಿ ನಿಂತು ಜನ ಏನನ್ನೋ ಚರ್ಚಿಸುತ್ತಿದ್ದರು. ನನ್ನ ಗುರುತಿನವರಾರೂ ಅಲ್ಲಿರಲಿಲ್ಲ. ಸುಮ್ಮನೆ ವರಾಂಡದಲ್ಲಿ ಸುಳಿದಾಡಹತ್ತಿದೆ. ತುಸು ಹೊತ್ತಿನಲ್ಲಿಯೇ ಬಂಗ್ಲೆಯ ಒಳಬದಿಯಿಂದ ಸುಮಾರು ಮೂವತ್ತರ ಒಬ್ಬ ವ್ಯಕ್ತಿ ನನ್ನ ಬಳಿಗೆ ಬಂದು, "ಆರ್ ಯು ಮಿಸ್ಟರ ಜೋಶಿ?" ಎಂದರು. ನಾನು 'ಹೌದು' ಎನ್ನುತ್ತಲೆ, "ನಾನು ಕೃಷ್ಣಮೂರ್ತಿಗಳ ಕಾರ್ಯದರ್ಶಿ. ಅವರು ನಿಮಗಾಗಿ ಕಾಯುತ್ತಿದ್ದಾರೆ. ದಯವಿಟ್ಟು ಒಳಗೆ ಬನ್ನಿ,"ಎಂದರು. ಅವರ ಈ ಮಾತುಗಳನ್ನು ಕೇಳಿ ನನಗೆ ಬೆಚ್ಚಿ ಬೀಳುವಂತಾಯಿತು. ಅಲ್ಲಿ ಕಲೆತವರಲ್ಲಿ ಒಬ್ಬನಾಗಿ ಪ್ರಶ್ನೆ ಕೇಳುವ ಸರದಿ ನನ್ನದಾದೀತೆಂದು ಭಾವಿಸಿದ್ದೆ. ಹೀಗೆ ಒಬ್ಬನೇ ಹೋಗಿ ಕೃಷ್ಣಮೂರ್ತಿಗಳೆದುರು ನಿಲ್ಲಬೇಕಾದೀತು ಎಂಬ ವಿಚಾರ ಕೂಡ ಸುಳಿದಿರಲಿಲ್ಲ. ಹಾಗಾಗಿದ್ದರೆ ನಾನು ಈ ಸಾಹಸಕ್ಕೆ ಇಳಿಯುತ್ತಿರಲೂ ಇಲ್ಲ. ಹಾಗೆಂದು ಹಿಂದಿರುಗುವಂತೆಯೂ ಇರಲಿಲ್ಲ. ನಿರುಪಾಯನಾಗಿ ರಾಜಗೋಪಾಲನ್ ಅವರನ್ನು ಹಿಂಬಾಲಿಸುತ್ತ, ಹುಲಿಯ ಗವಿಯಲ್ಲಿ ಹೋಗುವಂತೆ ಹೆದರುತ್ತ ಕೃಷ್ಣಮೂರ್ತಿಗಳೆದುರು ನಿಂತೆ. ಕೂಡಲೇ ರಾಜಗೋಪಾಲನ್ ಅಲ್ಲಿಂದ ಹೊರಟುಹೋದರು.

ಆ ಕೋಣೆಯಲ್ಲಿ ಒಂದು ದೊಡ್ಡದಾದ ಒರಗು ಮಂಚವಿತ್ತು. ಅದರ ಮೇಲೆ ಮೆತ್ತೆ ಹಾಗೂ ರತ್ನಗಂಬಳಿಗಳನ್ನು ಹಾಸಲಾಗಿತ್ತು. ಕೃಷ್ಣಮೂರ್ತಿಗಳು ಅದರ ಮೇಲೆ ಕುಳಿತಿದ್ದರು. ನಿನ್ನೆಯಂಥದೇ ಪೋಷಾಕು. ಕಾಂತಿಯುತವಾದ ಮೋರೆ. ಕೋಣೆಯಲ್ಲೆಲ್ಲ ಶಾಂತಿ ನೆಲೆಸಿತ್ತು. ಸ್ನೇಹಪೂರ್ಣವಾದ ಅವರ ನೋಟದಿಂದ ನಮ್ರನಾದೆ. ಅವರನ್ನು ಅಭಿವಂದಿಸಿದೆ. ಅವರು ನಸು ನಗು ಸೂಸುತ್ತ, ಏನು ವಿಷಯ? ನಿಮ್ಮದೇನೊ ಸಮಸ್ಯೆ ಇದೆ ಎಂದು ಕೇಳಿದೆ,"ಎಂದರು. ಕುಳಿತುಕೊಳ್ಳಲೆಂದು ಸುತ್ತಲೂ ಕಣ್ಣು ಹಾಯಿಸಿದೆ. ಆದರೆ ಅಲ್ಲಿ ಒಂದೂ ಕುರ್ಚಿಯಾಗಲಿ ಸ್ಟೂಲಾಗಲಿ ಇರಲಿಲ್ಲ.

"ಬಾ ಇಲ್ಲಿ, ನನ್ನ ಬಳಿ ಕುಳಿತುಕೋ. ನಿನ್ನ

ಸಮಸ್ಯೆಯೇನು ಹೇಳು," ಕೃಷ್ಣಮೂರ್ತಿ ಹಗುರಾಗಿ ಹಾಸಿಗೆಯನ್ನು ತಟ್ಟುತ್ತ ನುಡಿದರು. ಸಂಕೋಚ ದಿಂದ ಅವರ ಬಳಿ ಕುಳಿತೆ. ಅವರು ನನ್ನತ್ತ ನೋಟ ಬೀರಿದಾಗ ಅದು ನನ್ನ ಮನದಾಳವನ್ನು ತಲುಪಿ ದಂತೆನಿಸಿತು. ಇಂಥ ಮಹಾಮಹಿಮನೆದುರು ಏನನ್ನೂ ಬಚ್ಚಿಟ್ಟುಕೊಳ್ಳಲಾರೆ, ಎನ್ನಿಸಿತು. "ಸರ್, ನಾನು ನಿಮ್ಮ ತತ್ವವಿಚಾರಗಳನ್ನಾಗಲಿ ಇನ್ನಾವುದೇ ದರ್ಶನವನ್ನಾಗಲಿ ಅರಿತವನಲ್ಲ. ನನ್ನದೊಂದು ಸಂದೇಹವನ್ನು ಕುರಿತು ನಿಮ್ಮನ್ನು ಕೇಳಲೆಂದು ಬಂದೆ ಅಷ್ಟೆ," ಎಂದೆ. ಅವರು ಅದೇ ನಸುನಗೆ ಯಿಂದ, "ಪರವಾಗಿಲ್ಲ ಕೇಳು," ಎಂದರು. "ನಿನ್ನೆ ನಿಮ್ಮ ಉಪನ್ಯಾಸದಲ್ಲಿ ವಕೀಲರು ಹಾಗೂ ಪೋಲಿ ಸಿನವರಿಗೆ ಸತ್ಯದ ಅರಿವು ಮೂಡದು, ದೈವೀ ಪ್ರಸಾದ ಏನೆಂಬುದು ಅರ್ಥವಾಗಲು ಎಂದಿಗೂ ಸಾಧ್ಯವಿಲ್ಲ, ಅಂದಿರಿ. ಸರ್, ನಾನೊಬ್ಬ ಪೋಲೀಸ ಆಫಿಸರ್ ಅಂದ ಮಾತ್ರಕ್ಕೆ ಸತ್ಯ, ದೈವೀಶಕ್ತಿಗಳಿಗೆ ನಾನು ಎರವಾಗಬೇಕೆ?" ಎಂದೆ.

ಕೃಷ್ಣಮೂರ್ತಿಗಳು ನನ್ನ ಮಾತನ್ನು ಕಿವಿಗೊಟ್ಟು ಆಲಿಸುತ್ತಿದ್ದರು. ನನ್ನ ಮಾತು ಮುಗಿಯುತ್ತಲೇ ಇನ್ನೊಮ್ಮೆ ಅವರ ಮೋರೆಯ ಮೇಲೆ ನಸುನಗೆ ಮಿನುಗಿತು. ತುಂಬ ಸ್ನೇಹ ಹಾಗೂ ಭರವಸೆಯ ಧ್ವನಿಯಲ್ಲಿ ಅವರು, "ನಾನು ಹಾಗೆ ಅಂದದ್ದು ನಿಜ. ಆದರೆ ನೀನು ನನ್ನ ಮಾತುಗಳನ್ನು ಇಡಿ ಯಾಗಿ ಆಲಿಸಿ ಅರ್ಥ ಮಾಡಿಕೊಳ್ಳಲಿಲ್ಲ ಅನ್ನಿಸುತ್ತೆ. ಹಲವು ಜನ ವಕೀಲರು ಹಾಗೂ ಪೋಲೀಸ ಅಧಿಕಾರಿಗಳನ್ನು ಕಂಡಿದ್ದೇನೆ. ಅವರಲ್ಲಿ ಬಹಳಷ್ಟು ಜನ ಅಧಿಕಾರ ಹಾಗೂ ದುಡ್ಡಿನ ಆಸೆಗೆ ಬಲಿಯಾಗಿ ತಮ್ಮ ತಮ್ಮ ಸಂವೇದನೆಗಳನ್ನು ಕಳೆದುಕೊಂಡ ವರು. ಮಾನವೀಯ ಕರುಣೆ, ಪ್ರೇಮ, ಇನ್ನೊಬ್ಬರ ಬವಣೆಗಳ ಬಗೆಗೆ ಮರುಕದಂತಹ ಕೋಮಲ ಭಾವನೆಗಳಿಗೆ ಎರವಾದವರು. ಅಂದಬಳಿಕ ಇಂಥವರಿಗೆ ಸತ್ಯದ ದರ್ಶನ ಹಾಗೂ ದೈವೀ ಪ್ರಸಾದಗಳು ಒದಗಿ ಬರಲು ಹೇಗೆ ಸಾಧ್ಯ? ನಾನು ಹೇಳಿದ್ದು ಇಂಥ ಜನರನ್ನು ಕುರಿತಾಗಿಯೇ ಹೊರತು ಅವರ ವೃತ್ತಿಗಳನ್ನಲ್ಲ."

ಕೋಣೆಯ ತುಂಬ ಅನಿರ್ವಚನೀಯ ಶಾಂತಿ ನೆಲೆಸಿತ್ತು. ಆ ಶಾಂತಿ ನನ್ನಲ್ಲಿ ನಿಧಾನವಾಗಿ ತುಂಬಿಕೊಳ್ಳುತ್ತಿದೆಯೆನ್ನಿಸಿತು. ನನಗೆ ಅರ್ಥವಾಗದ ಅದಾವುದೋ ಚೈತನ್ಯ ಆ ಶಾಂತಿಯಲ್ಲಿ ತುಂಬಿದೆ ಎನ್ನಿಸಿತು. ಅವರೇ ಮತ್ತೆ, "ಒಬ್ಬ ಪೋಲೀಸ ಅಧಿಕಾರಿಯಾದ ನೀನು ಅದಾವ ಬಗೆಯ ಸತ್ಯ ವನ್ನು ಕಂಡುಕೊಳ್ಳಲು ಇಚ್ಛೆ ಪಡುವಿ? ಯತ್ನಿ ಸುವಿ?" ಎಂದು ಕೇಳಿದರು. ಅವರ ಈ ಪ್ರಶ್ನೆ ನೆಮ್ಮದಿ ತಂದಿತು. "ನನ್ನ ದೃಷ್ಟಿಯಲ್ಲಿ ಸತ್ಯಶೋ ಧನೆ ಎಂದರೆ ಅಪರಾಧ ಹಾಗೂ ಅಪರಾಧಿಗಳನ್ನು ಕಂಡುಹಿಡಿಯುವುದು," ಎಂದೆ ಹೆಮ್ಮೆಯಿಂದ. ಅದಕ್ಕೆ ಕೃಷ್ಣಮೂರ್ತಿಗಳು, "ಅದೇನೋ ಸರಿಯೇ, ಆದರೆ ಅದೇ ಕಾಲಕ್ಕೆ ಅಪರಾಧಿಗಳಲ್ಲಿರಬಹುದಾದ ಮಾನವನನ್ನು ಕಂಡುಕೊಳ್ಳಲು ಎಂದಾದರೂ ಯತ್ನಿಸಿದ್ದೀಯಾ?" ಎಂದರು. ಈಗ ನಾನು ಗೊಂದ ಲದಲ್ಲಿ ಬಿದ್ದೆ. ಅದನ್ನು ಕಂಡು ಅವರೆ ಮಾತನ್ನು ಮುಂದುವರೆಸಿದರು: "ನೋಡಪ್ಪ, ಅಪರಾಧಿಯಾ ದವನು ಕೂಡ ಒಬ್ಬ ಮನುಷ್ಯನೇ ತಾನೆ? ನಿನ್ನಲ್ಲಿರಬಹುದಾದಂತೆಯೇ ಅವನಲ್ಲೂ ಭಾವನೆ ಗಳು ಇರುತ್ತವೆ. ಅವನಂತೆಯೇ ನೀನು ಕೂಡ ಕೋಪ, ಆಸೆ, ಕಾಮ, ಹೊಟ್ಟೆಕಿಚ್ಚು, ಹಗೆತನಗ ಳಂತಹ ವಿಕಾರಗಳಿಗೆ ಹೊರತಾದವನಲ್ಲ, ಅಲ್ಲವೆ? ನೀನು ಪೋಲೀಸ ಅಧಿಕಾರಿಯ ಮೊಗವಾಡ ಹೊತ್ತ

> ಸಂಬಂಧ, ಅಧಿಕಾರ ಅಥವಾ ತತ್ವಾದರ್ಶಗಳ ಸೋಗಿನ ಹಿನ್ನೆಲೆಯಲ್ಲಿ ಯಾವುದೇ ತರಹದ ಸ್ವಹಿತಾಸಕ್ತಿ ಇದ್ದಲ್ಲಿ, ಅದು ನಿಮ್ಮ ಸಂಕುಚಿತ ಮನಸ್ಸನ್ನು ತೋರ್ಪಡಿಸುತ್ತದೆ. ನೀವು ಮಾಡುತ್ತಿ ರುವ ಕಾರ್ಯ ಒಳ್ಳೆಯದಾಗಿರಬಹುದು. ನೀವು ಉದಾರಿಗಳೂ ಆಗಿರಬಹುದು. ಪತ್ನಿ, ಪುತ್ರ, ಮಿತ್ರರ ಬಗ್ಗೆ ಅಪಾರ ಪ್ರೀತಿ ಹೊಂದಿರಬಹುದು. ಆದರೆ ಇದೆಲ್ಲದರಲ್ಲೂ ಸ್ವಹಿತಾಸಕ್ತಿಯೇ ನಿಹಿತವಾ ಗಿದ್ದರೆ ಅದೆಲ್ಲವೂ ನಿರರ್ಥಕ. ಮನುಷ್ಯ ತನ್ನ ಸುತ್ತಲೂ ತಾನೇ ನಿರ್ಮಿಸಿಕೊಂಡಿರುವ ತಡೆಗೋ ಡೆಗಳನ್ನು ದಾಟಲು ಈ ಸಂಕುಚಿತ ಮನಸ್ಸಿಗೆ ಎಂದಿಗೂ ಸಾಧ್ಯವಾಗದು.
>
> ❋ *ಜಿಡ್ಡು ಕೃಷ್ಣಮೂರ್ತಿ*

ವನು. ಆತ ಹಾಗೆ ಮಾಡಲಾರ ಅಷ್ಟೆ. ನಾವೆಲ್ಲ ಮಾನವರು ಎಂಬುದನ್ನರಿತಾಗ ನಮ್ಮಲ್ಲೂ, ಅಪರಾಧಿಗಳಲ್ಲೂ ಅಂತಹ ವ್ಯತ್ಯಾಸವೇನೂ ಇಲ್ಲ ಎಂಬುದು ಕಂಡೀತು. ಈ ಬಗೆಗೆ ಎಂದಾದರೂ ಯೋಚಿಸಿರುವೆಯಾ?" ಎಂದು ನುಡಿದು ಮತ್ತೆ ಕೆಲ ಕ್ಷಣ ಸುಮ್ಮನಾದರು. ಮತ್ತೆ ಅದೇ ಶಾಂತಿ. ಆದರೆ ಅದನ್ನು ಸಹಿಸುವುದು ಅಸಾಧ್ಯವೆನ್ನಿಸಿತು. ಅವರ ಮಾತುಗಳು ನನ್ನಲ್ಲಿ ಬಿರುಗಾಳಿಯನ್ನೆಬ್ಬಿಸಿದ್ದವು.

ಇಂದು ಮೊದಲ ಬಾರಿಗೆ ಅಪರಾಧಿಯ ಸ್ಥಾನದಲ್ಲಿ ನಿಂತು ನನ್ನನ್ನು ನಾನು ನೋಡಿಕೊಳ್ಳುತ್ತಲಿದ್ದೆ. ನಿಜವಾಗಿಯೂ ಒಬ್ಬ ಅಪರಾಧಿಯಲ್ಲೂ, ನನ್ನಲ್ಲೂ ಅದಾವ ವ್ಯತ್ಯಾಸವಿದೆ? ಆಗ, ನನ್ನ ಮನದಾಳದಲ್ಲಿ ಹಲವಾರು ನೆನಹುಗಳು ಪುಟಿದೆದ್ದು ಮೇಲಕ್ಕೆ ಬರತೊಡಗಿದವು.

ಪೊಲೀಸ ಕೋಠಡಿಯಲ್ಲಿರಿಸಲಾದ ಆರೋಪಿಗಳು, ಸಂಶಯಿತರು, ಅವರು ತಮ್ಮ ಅಪರಾಧಗಳನ್ನು ಒಪ್ಪಿಕೊಳ್ಳುವಂತೆ ಮಾಡಲೆಂದು ಎಸಗಲಾಗುವ ಹೊಡೆತ-ಬಡಿತಗಳು, ಮಾನಸಿಕ ಹಿಂಸೆಗಳು....ಪಾಪ, ಕೆಲವರಂತೂ ನಿರಪರಾಧಿಗಳಾಗಿರುತ್ತಿದ್ದರು.

ಹೊಟ್ಟೆಗಾಗಿ ಕಾಳು-ಕಡಿಗಳನ್ನು ಕೊಂಡುಕೊಳ್ಳಲೆಂದು ಉರಿಬಿಸಿಲಲ್ಲಿ ಗಂಟೆಗಟ್ಟಳೆ ಸಾಲಿನಲ್ಲಿ ನಿಂತು ಕಾಯ್ದ ಆ ಹೆಣ್ಣುಮಕ್ಕಳು, ಅಂಗಡಿಯವನು ಸ್ಟಾಕ್ ತೀರಿತೆಂದು ಸಾರುತ್ತಲೇ ಅವನ ಮೇಲೇರಿ ಹೋದವರು, ಆತ ಪೊಲೀಸರ ನೆರವು ಪಡೆದು ಅವರ ಮೇಲೆ ಲಾಠಿ ಚಾರ್ಜ ಮಾಡಿಸಿ, ಅವರನ್ನೆಲ್ಲ ಚದುರಿಸುವುದು, ಹೆಗಲ ಮೇಲೋ, ಟೊಂಕದ ಮೇಲೋ ತಮ್ಮ ಮಕ್ಕಳನ್ನು ಹೊತ್ತ ಆ ಹೆಂಗಳೆಯರು ಜನಜಂಗುಳಿಯ ಗದ್ದಲದಲ್ಲಿ ತುಳಿತಕ್ಕೆ ಸಿಕ್ಕುವುದು, ಅವರ ಅಳು-ಕೂಗಾಟ, ಅರಚಾಟಗಳು...ಎರಡು ಭಾಷೆಗಳಿಗೆ ಸಂಬಂಧಿಸಿದ ತಂಡಗಳಲ್ಲಿ ನಡೆದ ಆ ದಂಗೆ, ಆವೇಶದಿಂದ ಒಂದರ ಮೇಲೊಂದು ಹಲ್ಲೆ ಮಾಡುವುದು, ಗುಂಡು ಹಾರಿಸಲು ನೀಡಲಾದ ಪೊಲೀಸ ಆಜ್ಞೆ, ಇಬ್ಬರು ಯುವಕರ ಸಾವು, ಯಾರಿರಬಹುದು ಅವರು? ದಂಗೆಯಲ್ಲಿ ಪಾಲ್ಗೊಂಡವರೆ ಇಲ್ಲವೆ ಬರಿ ಕುತೂಹಲ ತಡೆಯದೆ ನೋಡಲು ಬಂದವರೆ, ಅವರ ಹೆತ್ತವರ ಕರುಳು ಕಿತ್ತು ಬರುವಂತಹ ಆಕ್ರಂದನ...ಆಗೆಲ್ಲ ನಾನೇನು ಒಬ್ಬ ಪೊಲೀಸ ಅಧಿಕಾರಿಯಾಗಿದ್ದನೆ ಇಲ್ಲವೆ ಒಬ್ಬ ಅಪರಾಧಿಯಾಗಿದ್ದನೆ, ಇಬ್ಬದಿಗಳಿಂದಲೂ ಒಂದೇ ಬಗೆಯ ಹಿಂಸಾಚಾರ! ಅಂದ ಬಳಿಕ ನಮ್ಮೀರ್ವರಲ್ಲೂ ಇರಬಹುದಾದ ವ್ಯತ್ಯಾಸವಾದರೂ ಯಾವುದು?

ನನ್ನ ಮನಸ್ಸಿನಲ್ಲಿ ಇದೇ ಬಗೆಯ ಕಡು ಬಣ್ಣಗಳನ್ನು ಹೊತ್ತ ಚಿತ್ರಗಳು ಒಂದೊಂದಾಗಿ ಹಾದುಹೋದವು. ನನ್ನ ಕಣ್ಣುಗಳು ತುಂಬಿ ಕೋಡಿಯಾಗಿ ಹರಿದವು. ನನಗೇ ಅಚ್ಚರಿಯಾಯಿತು. ನಾಚಿಕೆ ಹುಟ್ಟಿತು. ಆದರೆ ನನ್ನ ಮನಸ್ಸು ನನ್ನ ಹಿಡಿತದಲ್ಲಿ ಇರಲೇಯಿಲ್ಲ. ಕೃಷ್ಣಮೂರ್ತಿಗಳು ಏನೆಂದುಕೊಂಡಾರೆಂದು ಅವರತ್ತ ನೋಡಿದೆ. ಅವರು ಮಾತ್ರ ತದೇಕಚಿತ್ತರಾಗಿ ನನ್ನತ್ತಲೇ ನೋಡುತ್ತಿದ್ದರು. ಅವರು ನನ್ನ ಮನದಾಳದ ಈ ನೋವನ್ನು ಅರಿತಂತಿತ್ತು. ಆದರೆ ನೆಮ್ಮದಿಯ ಮಾತುಗಳನ್ನಾಡುವ ಗೋಜಿಗೆ ಹೋಗಲಿಲ್ಲ. ಬದಲು ಹೀಗೆಯೇ ಅದೆಷ್ಟು ಹೊತ್ತು ಕಳೆಯಿತೋ ತಿಳಿಯಲಿಲ್ಲ. ಅವರ ನೋಟದಲ್ಲಿನ ಆ ಶಾಂತಿಯು ನನ್ನ ನೋವಿನ ಮೇಲೆ ತಂಗಾಳಿಯನ್ನು ಬೀಸಿದಂತಾಗಿ ಹಾಯೆನಿಸಿತು. ನಿಧಾನವಾಗಿ ಸಾವರಿಸಿಕೊಂಡೆ. ಆಗ ಕೃಷ್ಣಮೂರ್ತಿಗಳು ಮೆಲುದನಿಯಲ್ಲಿ, "ಅದಾವ ಬಗೆಯ ದುಃಖಗಳ ಇಷ್ಟೊಂದು ಹೊರೆ ಹೊತ್ತಿರುವೆ?" ಎಂದರು.

ಈವರೆಗೆ ನನ್ನಲ್ಲಿಯ ಹೆದರಿಕೆ, ನಾಚಿಕೆಗಳನ್ನು ಕಳಚಿಕೊಂಡಿದ್ದೆ. ನಾನೆಸಗಿದ ತಪ್ಪುಗಳು, ನಾನೆಸಗಿದ ಅನ್ಯಾಯಗಳು, ಪಟ್ಟ ಪಾಡುಗಳನ್ನು ಕುರಿತು ಎದೆ ತುಂಬಿ ಬಂದು ಅವರಿಗೆ ಹೇಳಿದೆ. ಕೃಷ್ಣಮೂರ್ತಿಗಳು ನನ್ನನ್ನು ತಡೆಯಲಿಲ್ಲ. ನನ್ನ ಮಾತು ಮುಗಿದಾದ ಬಳಿಕ, "ಗೆಳೆಯಾ, ಇಷ್ಟೆಲ್ಲ ಹೊರೆಯನ್ನು ಸುಮ್ಮನೆ ನಿನ್ನ ಈ ಚಿಕ್ಕ ಹೆಗಲುಗಳ ಮೇಲೆ ಹೊತ್ತಿರುವೆಯಲ್ಲ! ಅದನ್ನತ್ತ ಎಸೆದು ಬಿಡು. ಇವೆಂದರೆ ತನ್ನ ಕರ್ತೃತ್ವಶಕ್ತಿಯ ಒಣ ಹೆಮ್ಮೆ ಮಾತ್ರ. ವಿಶ್ವ ವ್ಯಾಪಾರವೆಲ್ಲ ತನ್ನಷ್ಟಕ್ಕೆ ಸಾಗಿರುವಂ

ಥದು. ನಿನಗೆ ನೀನು ಪ್ರಾಮಾಣಿಕನಾಗಿದ್ದರೆ ಸಾಕು. ಅಂದರೆ ನಿನ್ನ ದಾರಿ ನಿನಗೆ ಕಂಡೀತು," ಎಂದಿಷ್ಟೇ ನುಡಿದರು. ನಮ್ಮ ಮಾತುಗಳು ಮುಗಿದಿದ್ದವು. ಅವರಿಗೆ ವಂದಿಸಿ ಹೊರಬಂದೆ.

ಅಂದು ನಡೆದ ಆ ಚಿಕ್ಕ ಘಟನೆಯಿಂದಾಗಿ ನಾನು ಬಾಳನ್ನು ಬೇರೆಯೇ ಆದ ದೃಷ್ಟಿಕೋ[illegible] ನೋಡಲಾರಂಭಿಸಿದೆ. ಮೊದಲಿನ ಹಾಗ[illegible] ರಾಧಿಗಳ ಜಗತ್ತಿನೊಂದಿಗೆ ಸಂಪರ್ಕ[illegible] ಹೊಂದಿಯೂ ಅಲ್ಲಿ ಸಾಗುವ ಘಟನೆಗಳತ್ತ ಹಾಗೂ ಆ ವ್ಯಕ್ತಿಗಳತ್ತ ವಿನಯ ಹಾಗೂ ಸಹಾನುಭೂತಿಗಳಿಂದ ನೋಡಲು ಸಾಧ್ಯವಾಯಿತು. ಹೀಗಾಗಿ ವಾಸ್ತವತೆಯು ಬೇರೊಂದೇ ಅರ್ಥವಂತಿಕೆಯೊಂದಿಗೆ ನನ್ನೆದುರು ಬರುವಂತಾಯಿತು.

ಒಬ್ಬ ಪೊಲೀಸ ಅಧಿಕಾರಿಯಾಗಿ ಅನಿರೀಕ್ಷಿತವಾಗಿ ಅನೇಕ ಪ್ರಕರಣಗಳ ಸತ್ಯದ ಹಲವು ಬದಿಗಳನ್ನು ಕಂಡೆ. ಇವುಗಳನ್ನು ಜನರೆದುರು ಇಡುವುದು ಅಗತ್ಯವಾಗಿ ಕಂಡಿತು. ಏಕೆಂದರೆ ಇವು ಆಘಾತಕರ, ಅನಿರೀಕ್ಷಿತ, ಹೆಚ್ಚಾಗಿ ಕಹಿಯಾದವು, ಒಮ್ಮೊಮ್ಮೆ ರೊಚ್ಚಿಗೇಳಿಸುವವು, ದಾಹಕ ಹಾಗೂ [illegible] ಎನ್ನಿಸಿದರೂ ಖಂಡಿತ ನಿಜವಾದವು [illegible]ನನ್ನಲ್ಲಿ ಬರವಣಿಗೆಗೆ ತಕ್ಕ ನುಡಿ [illegible] ಕಲೆಯಾಗಲಿ ಇರಲಿಲ್ಲ, ಆದರೆ ಹೇಳಬೇಕೆನ್ನುವ ಒತ್ತಡಕ್ಕೆ ಮಣಿದು ಬರೆಯಲಾರಂಭಿಸಿದೆ. ಅಂದು ಜೆ. ಕೃಷ್ಣಮೂರ್ತಿಗಳನ್ನು ಕಂಡು ನಾನು ಪಡೆದ ತಿರುವು ಒಂದು ಆಕಸ್ಮಿಕವೆನ್ನಿಸಿದರೆ ನಾನು ಬರೆಯಲಾರಂಭಿಸಿದುದೂ ಇನ್ನೊಂದು ಆಕಸ್ಮಿಕವೇ ಸರಿ.

## ಆದರೂ.....

- ★ ನೀವು ಕರುಣಾಶೀಲರಾಗಿದ್ದರೆ ಅದನ್ನು ನಿಮ್ಮ ಒಂದು ದೌರ್ಬಲ್ಯವೆಂದು ಗಣಿಸಬಹುದು....ಆದರೂ ಕರುಣಾಶೀಲರಾಗಿರಿ!
- ★ ನೀವು ಇತರರಿಗೆ ಮಾಡಿದ ಸಹಾಯವನ್ನು ಯಾರೂ ಗಮನಿಸದೇ, ಗುರುತಿಸದೇ ಇರಬಹುದು......ಆದರೂ ಇತರರಿಗೆ ಸಹಾಯ ಮಾಡಿ!
- ★ ನಿಮ್ಮ ಯಶಸ್ಸು, ಕಪಟಸ್ನೇಹಿತರನ್ನು, ನಿಜವಾದ ಶತ್ರುಗಳನ್ನೂ ಗಳಿಸಿ ಕೊಡುತ್ತದೆ.......ಆದರೂ ಯಶಸ್ಸು ಗಳಿಸಿ!
- ★ ಪ್ರಾಮಾಣಿಕರೂ, ನಿಷ್ಕಪಟಿಗಳೂ ಆಗಿರುವುದರಿಂದ ನೀವು ಗಾಸಿಗೊಳ್ಳಬಹುದು......ಆದರೂ ಪ್ರಾಮಾಣಿಕರೂ, ನಿಷ್ಕಪಟಿಗಳೂ ಆಗಿರಿ!
- ★ ನೀವು ಇಂದು ಉಪಕಾರ ಮಾಡಿದರೆ ಜನರು ನಾಳೆಯೇ ಮರೆತು ಬಿಡುತ್ತಾರೆ......ಆದರೂ ಉಪಕಾರ ಮಾಡಿ!
- ★ ನಿಮ್ಮ ನೇರ ನಡವಳಿಕೆಯನ್ನು ಉದ್ಧಟತನವೆಂದೋ, ಅವಿಧೇಯತೆ ಎಂದೋ ಗಣಿಸಬಹುದು....ಆದರೂ ನೇರ ನಡವಳಿಕೆಯವರೇ ಆಗಿರಿ!
- ★ ಸದ್ಗುಣ ಮತ್ತು ಜೀವನಾದರ್ಶಗಳು ಜನರಿಗೆ ಬೆಲೆ ಇಲ್ಲದವೆನಿಸಿವೆ....ಆದರೂ ಸದ್ಗುಣ ಸಂಪನ್ನರಾಗಿರಿ!
- ★ ನಿಮ್ಮ ದೇವರಲ್ಲಿಯ ನಂಬಿಕೆ ಮತ್ತು ಮಾನವ ಪ್ರೇಮವನ್ನು ದಡ್ಡತನವೆಂದು ಪರಿಗಣಿಸಬಹುದು.....ಆದರೂ ದೇವರಲ್ಲಿ ನಂಬಿಕೆ ಇಡಿ!

ಕೆ. ಗಣೇಶ
(ವ್ಯಾನ್‌ಗಾರ್ಡ್ ಥೆರಾಪಿಟಿಕ್ಸ್
ಮುದ್ರಿತ ಇಂಗ್ಲಿಷ್ ಕ್ಯಾಲೆಂಡರಿನಿಂದ ಉಧೃತ)

# ನೆನಪು ನೆರಳಿನಲ್ಲಿ

ಸ್ನಾತಕೋತ್ತರ ತರಬೇತಿಗಾಗಿ ಆರೋಗ್ಯ ಇಲಾಖೆ ನನ್ನನ್ನು ದೆಹಲಿಗೆ ಕಳಿಸಿತ್ತು. ದೇಶದ ವಿವಿಧ ರಾಜ್ಯಗಳಿಂದ ಬೇರೆ ಬೇರೆ ಭಾಷೆಗಳನ್ನಾಡುವ ಜನ ಸೇರಿದ್ದರಿಂದ ಬಲು ಮೋಜಿನಿಂದ ಕಾಲ ಕಳೆಯುತ್ತಿತ್ತು. ಪ್ರತಿ ರಜೆಯದಿನ ನಾಲ್ಕಾರು ಸಹಪಾಠಿಗಳೊಂದಿಗೆ ದೆಹಲಿಯನ್ನು ಸುತ್ತಾಡುವ ಪರಿಪಾಠವನ್ನಿಟ್ಟುಕೊಂಡಿದ್ದೆ. ಒಂದು ರವಿವಾರ ಪ್ರಾಣಿಸಂಗ್ರಹಾಲಯಕ್ಕೆ ಹೋಗುವುದೆಂದು ನಿಶ್ಚಯಿಸಿದೆವು.

ಸಿಟಿ ಬಸ್ಸು ಪ್ರಾಣಿಸಂಗ್ರಹಾಲಯದ ಎದುರೇ ಬಂದು ನಿಂತಿತ್ತು. ಮೂರು ನಾಲ್ಕು ಗುಂಪುಗಳಾಗಿ ನಾವೆಲ್ಲ ಸಾಗಿದೆವು. ಹತ್ತು ಹೆಜ್ಜೆ ಹೋಗುವುದರಲ್ಲಿ ಹದಿಹರೆಯದ ಯುವತಿಯೊಬ್ಬಳು ನಮ್ಮ ಗುಂಪಿನ ಬಳಿ ಬಂದು, "ಬಾಬೂಜಿ, ಇದೊಂದು ಅಪರೂಪದ ವಸ್ತು. ನೇಪಾಳದ ಪುನಗಿನ ಬೆಕ್ಕಿನ ಬೀಜಗಳನ್ನು ತಂದಿದ್ದೇನೆ. ಬಹಳ ಸುವಾಸನೆಯುಕ್ತವಾದದ್ದು. ಸಾಮಾನ್ಯವಾಗಿ ಎಲ್ಲಿಯೂ ದೊರೆಯುವುದಿಲ್ಲ. ತಾವು ಮೂರು ರೂಪಾಯಿ ಕೊಡಿ ಸಾಕು," ಎನ್ನುತ್ತಾ ಕೂದಲುಳ್ಳ ಎರಡು ಚೆಂಡುಗಳಂತೆ ಕಾಣಿಸುವ ಪದಾರ್ಥಗಳನ್ನು ನಮಗೆ ತೋರಿಸಿದಳು. ಅವು ಸುಗಂಧಯುಕ್ತವಾದವುಗಳೆಂಬುದನ್ನು ಮನವರಿಕೆ ಮಾಡಿಕೊಡಲು ಮುಷ್ಟಿಯಲ್ಲಿ ಅವುಗಳನ್ನು ಹಿಡಿದು ಬಟ್ಟೆಗೆ ಉಜ್ಜಿ ಸುವಾಸನೆ ಹೊಮ್ಮುವುದನ್ನು ನಮಗೆಲ್ಲ ತೋರಿಸಿದಳು.

ನಾನು ಅನುಮಾನಿಸುತ್ತ, "ಎರಡು ರೂಪಾಯಿಗೊಂದು ಕೊಡುತ್ತೀಯಾ?" ಎಂದು ಕೇಳಿದೆ. ವ್ಯಾಪಾರ ಕುದುರಿತು. ನಾಲ್ಕು ರೂಪಾಯಿ ತೆತ್ತು ಎರಡು ಚೆಂಡುಗಳನ್ನು ಕೊಂಡೆ.

ಅಷ್ಟರಲ್ಲಿ ಬೇರೆಯವರಿಂದ ನನ್ನ ಗೆಳೆಯರು ಒಂದು ರೂಪಾಯಿಗೆ ಎರಡರಂತೆ ಕೊಂಡದ್ದು ಆ ವಸ್ತುಗಳ ನೈಜತೆಯ ಬಗೆಗೆ ನಮಗೆಲ್ಲ ಸಂಶಯ ತಂದಿತು. ಹತ್ತಿರದಲ್ಲಿಯೇ ಪೊಲೀಸ ಪೇದೆಯೊಬ್ಬ ನಿಂತಿದು ಕಾಣಿಸಿತು. ಅವನನ್ನು ಕಂಡು ನಡೆದ ಸಂಗತಿಯನ್ನು ವಿವರಿಸಿದೆವು.

"ಅವರೆಲ್ಲ ಬದ್ಮಾಷ್ ಜನ ಸರ್, ಪುನಗಿನ ಬೆಕ್ಕುಗಳ ಬೀಜಗಳೆಂದು ಸುಳ್ಳು ಹೇಳಿ ಪ್ರವಾಸಿಗರನ್ನು ಲೂಟಿಮಾಡುತ್ತಾರೆ. ಅತ್ತರಿನ ಎಣ್ಣೆಯನ್ನು ಸವರಿ ಪುನಗಿನ ಬೆಕ್ಕಿನ ಅಂಡುಗಳ ವಾಸನೆಯೆಂದು ಹೇಳಿ ನಂಬಿಸಿ ಜನರನ್ನು ಸುಲಿಯುತ್ತಾರೆ. ಸ್ವಲ್ಪ ಹೊತ್ತಿನ ಮುಂಚೆಯಷ್ಟೇ ಅವರನ್ನೆಲ್ಲ ದೂರ ಅಟ್ಟಿ ಬಂದಿದ್ದೆ. ಮತ್ತೆ ಬಂದಿದ್ದಾರೆ ನೋಡಿ. ಬನ್ನಿ, ನನ್ನ ಜೊತೆ; ತಮ್ಮ ಹಣವನ್ನು ವಾಪಸ್ಸು ಕೊಡಿಸುತ್ತೇನೆ," ಎಂದ ಪೇದೆ. ನಾನು ಮತ್ತು ನನ್ನಿಬ್ಬರು ಗೆಳೆಯರು ಆತನ ಬೆನ್ನುಹತ್ತಿದೆವು. ಪೇದೆಯನ್ನು ಕಂಡು ಅವರೆಲ್ಲ ಪಲಾಯನ ಮಾಡಿದರು. ಅವರನ್ನು ಬೆನ್ನಟ್ಟಿ ಸ್ವಲ್ಪ ದೂರ ಹೋದ ಪೇದೆ, ಕೊನೆಗೆ ಆಟೋದವನೊಬ್ಬನ ಸಹಾಯದಿಂದ ಅವರಲ್ಲಿಯ ಒಬ್ಬಾಕೆಯನ್ನು ಹಿಡಿದು ತಂದ. ಕೈಯಲ್ಲಿಯ ಬೆತ್ತದಿಂದ ನಾಲ್ಕಾರು ಏಟುಗಳನ್ನು ಕೈಗೆ ಕೊಟ್ಟು ನಮ್ಮ ಬಳಿ ಎಳೆತಂದು ನಿಲ್ಲಿಸಿದ. ನೋಡು ನೋಡುವಷ್ಟರಲ್ಲಿ ಜನ ಸೇರಿದರು. ಅವರಲ್ಲಿಯ ಒಬ್ಬಾತ, "ಪಾಪ, ಅವಳನ್ನೇಕೆ ಹೊಡೆಯುತ್ತೀರಿ.? ಇಂದಿನ ದಿನಗಳಲ್ಲಿ ಒಬ್ಬ ಇನ್ನೊಬ್ಬನನ್ನು ಲೂಟಿ ಮಾಡುವುದು ನಡೆದೇ ಇದೆ. ಅದು ಅವಳ ಉಪಜೀವನದ ದಾರಿ. ಬಿಟ್ಟು ಬಿಡಿ ಪಾಪ," ಎಂದು ಪೇದೆಗೆ ಸಮಜಾಯಿಸಿ ಹೇಳಿದ.

ನನ್ನನ್ನು ಕಂಡ ಕೂಡಲೆ ಆ ಹುಡುಗಿ ಕಣ್ಣು ತುಂಬಾ ನೀರು ತಂದುಕೊಂಡು, "ತೆಗೆದುಕೊಳ್ಳಿ ಬಾಬೂಜಿ, ತಮ್ಮ ನಾಲ್ಕು ರೂಪಾಯಿ," ಎಂದೆನ್ನುತ್ತ ನನ್ನ ಕೈಯಲ್ಲಿ ಹಣವನ್ನಿಡುವಾಗ, ಅವಳ ಮುಂಗೈಯ ಮೇಲೆ ಪೇದೆ ಕೊಟ್ಟ ಬೆತ್ತದ ಏಟಿನ ಗುರುತು ಸ್ಪಷ್ಟವಾಗಿ ಕಾಣಿಸುತ್ತಿತ್ತು. ಅದನ್ನು ನೋಡಿ ನಮ್ಮೆಲ್ಲರ ಕಣ್ಣುಗಳೂ ತೇವಗೊಂಡವು.

❖ ಎಂ.ಸಿ. ಅಂಟಿನ

ಆಗ ನನ್ನ ಮಗ ಶಾಲೆಯಲ್ಲಿ ಕಲಿಯುತ್ತಿದ್ದ. ಅಲ್ಲಿಯ ದೈಹಿಕ ಶಿಕ್ಷಣದ ಉಪಾಧ್ಯಾಯರಿಗೆ ಪದವೀಧರ ಶಿಕ್ಷಕರಿಗಿಂತ ತಾವು ಕೀಳೆಂಬ ಭಾವನೆ. ಆಟದ ಮೈದಾನದಲ್ಲಿ, ಪ್ರಕೃತಿಯ ವಾತಾವರಣದಲ್ಲಿ ಮಕ್ಕಳ ಭಾವನೆಗಳು ಗರಿಗೆದರುತ್ತವೆ. ಅವರಲ್ಲಿ ಅಡಗಿರುವ ಸಾಮರ್ಥ್ಯಗಳನ್ನು ಬೆಳಕಿಗೆ ತರಲು ಆಟದ ಬಯಲಿಗಿಂತ ಉತ್ತಮವಾದದ್ದು ಬೇರೆ ಇಲ್ಲ ಎಂಬ ತಿಳುವಳಿಕೆ ಅವರಿಗೆ ಇರಲಿಲ್ಲ. ಹುಡುಗರನ್ನು ಬೆತ್ತದ ಬೆದರಿಕೆಯಿಂದ ಶಿಸ್ತಿಗೆ ಒಳಪಡಿಸಬೇಕೆಂದೇ ಅವರ ಧೋರಣೆ. ಹೊತ್ತು ಮೀರಿ ಬಂದ ವಿದ್ಯಾರ್ಥಿಗಳನ್ನು ಆಟದ ಮೈದಾನದ ತುಂಬಾ ಓಡಿಸುವುದು, ಸಮವಸ್ತ್ರ ಧರಿಸದೆ ಬಂದವರ ಪಾದರಕ್ಷೆಯೊಳಗೆ ಕಲ್ಲುಹರಳುಗಳನ್ನು ಹಾಕಿ ಓಡಲು ಹೇಳುವುದು ಇಂತಹ ಕ್ರೂರ ಶಿಕ್ಷೆಗಳನ್ನು ಕೊಡುತ್ತಿದ್ದ ಅವರನ್ನು ನೋಡಿದರೇ ವಿದ್ಯಾರ್ಥಿಗಳು ಹೆದರುತ್ತಿದ್ದರು. ಒಮ್ಮೆ ತಪ್ಪು ಮಾಡಿದ ನನ್ನ ಮಗನನ್ನು ಅವರು ಬೆತ್ತದಿಂದ ಹೊಡೆದುದರ ಪರಿಣಾಮವಾಗಿ ಆಳ ಗಾಯವಾಗಿ ವೈದ್ಯರಿಂದ ಹೊಲಿಗೆ ಹಾಕಿಸಬೇಕಾಯಿತು. ನಾನು ಶಾಲೆಗೆ ಹೋಗಿ, ಮುಖ್ಯೋಪಾಧ್ಯಾಯರನ್ನು ಕಂಡು, ವಿಷಯ ತಿಳಿಸಿದಾಗ ಅವರು ದೈಹಿಕ ಶಿಕ್ಷಣ ಉಪಾಧ್ಯಾಯರನ್ನು ಕರೆಸಿ ಹುಡುಗನಿಗೆ ಆಗಿರುವ ಗಾಯದ ಬಗ್ಗೆ ಹೇಳಿಕೆ ಕೊಡಲು ಹೇಳಿದಾಗ ಆತ ಅತ್ಯಂತ ನಮ್ರತೆಯಿಂದ ಗೊಣಗರೆಯುತ್ತಾ ತನ್ನ ತಪ್ಪನ್ನು ಕ್ಷಮಿಸಬೇಕೆಂದು ಕೇಳಿಕೊಂಡ.

ಕೆಲವು ತಿಂಗಳುಗಳ ನಂತರ ನನ್ನ ಮಗನ ಸ್ನೇಹಿತನ ತಂದೆ ನಮ್ಮ ಮನೆಗೆ ಬಂದರು. ಅವರ ಮಗನಿಗೆ ದೈಹಿಕ ಶಿಕ್ಷಣ ಉಪಾಧ್ಯಾಯರು ಹೊಡೆದದ್ದರಿಂದ ಹಣೆಗೆ, ಮಂಡಿಗೆ ಬಹಳ ಗಾಯಗಳಾಗಿ, ವಿಪರೀತ ರಕ್ತಸ್ರಾವದಿಂದ ಹುಡುಗನಿಗೆ ಜ್ವರ ಬಂದಿತ್ತೆಂದೂ, ರಾತ್ರಿಯೆಲ್ಲಾ ಹೆದರಿಕೆಯಿಂದ ಏನೇನೋ ಬಡಬಡಿಸುತ್ತಿದ್ದನೆಂದೂ ಹೇಳಿ, ಇನ್ನು ಮುಂದೆ ಆ ಶಿಕ್ಷಕರನ್ನು ಹಾಗೇ ಬಿಡಬಾರದೆಂದೂ, ತಾವು ತಮ್ಮ ಪ್ರಭಾವದಿಂದ ಆತನನ್ನು ಬೇರೆಡೆಗೆ ವರ್ಗ ಮಾಡಿಸುವುದಾಗಿಯೂ, ಮುಂದಿನ ಸಲ ಪೋಷಕ-ಬೋಧಕರ ಸಭೆ ಸೇರಿದಾಗ ಶಿಕ್ಷಕರು ಮಕ್ಕಳನ್ನು ಅಮಾನುಷವಾಗಿ ದಂಡಿಸಬಾರದೆಂದೂ ತಪ್ಪಿದರೆ ಮೇಲಿನ ಅಧಿಕಾರಿಗಳಿಗೆ ದೂರು ಕೊಡಬೇಕಾಗುತ್ತದೆಂದು ಹೇಳುವುದಾಗಿಯೂ ಅಲ್ಲಿ ತಮ್ಮನ್ನು ಬೆಂಬಲಿಸಬೇಕೆಂದೂ ನನ್ನನ್ನು ಕೇಳಿಕೊಂಡು ಹೊರಟುಹೋದರು.

ಮತ್ತೆ ಅವರನ್ನು ರಸ್ತೆಯಲ್ಲೊಮ್ಮೆ ಭೇಟಿಯಾದಾಗ ನಾನಾಗಿಯೇ ಅವರ ಹುಡುಗನ ಬಗ್ಗೆ ವಿಚಾರಿಸಿದೆ. ಅವರು, "ನೋಡಿ ಮೇಡಂ, ನಮ್ಮ ಮನೆಯಲ್ಲಿ ಇರುವವರು ಇಬ್ಬರು ಮಕ್ಕಳು. ಅವರನ್ನು ಹದ್ದುಬಸ್ತಿನಲ್ಲಿಡುವುದೇ ಕಷ್ಟ. ರಜಾ ದಿನಗಳಲ್ಲಂತೂ ಅವರ ಕಾಟ ಹೇಳತೀರದು. ಹೀಗಿರುವಾಗ ಶಾಲೆಯಲ್ಲಿರುವ ಆರುನೂರು, ಏಳುನೂರು ಹುಡುಗರನ್ನು- ಅದೂ ಬೇರೆ ಬೇರೆ ಮನೆಗಳಿಂದ ಬಂದವರನ್ನು ಶಿಸ್ತಿನಲ್ಲಿಟ್ಟುಕೊಳ್ಳುವುದು ಸುಲಭವೇ? ಶಿಕ್ಷಿಸದೆ ಹೇಗೆ ಶಿಸ್ತು ಮೂಡಿಸಲು ಸಾಧ್ಯ ಹೇಳಿ. ಎಂದು ನನ್ನನ್ನೇ ಪ್ರಶ್ನಿಸಿದರು. ಹಿಂದಿನ ಅವರ ಮಾತಿಗೂ, ಇಂದಿನ ಅವರ ಧೋರಣೆಗೂ ನನಗೆ ಏನೋ ವ್ಯತ್ಯಾಸ ಕಂಡು ಬಂದು ಯಾವುದೋ ದಿಕ್ಕಿನಲ್ಲಿ ಗಾಳಿ ಬೀಸುತ್ತಿದೆ ಎನ್ನಿಸಿತು. ಏಕೆ ಹೀಗೆ? ಎಂಬ ಕುತೂಹಲ ಮೂಡಿತು.

ಆದರೆ ಇದರ ಬಗ್ಗೆ ನಾನು ಹೆಚ್ಚು ಯೋಚಿಸುವುದು ಉಳಿಯಲಿಲ್ಲ. ಒಂದೆರಡು ದಿನಗಳಲ್ಲಿ ಬೇರೊಬ್ಬರು ನನ್ನೊಡನೆ ಮಾತನಾಡುತ್ತಾ, ಅಂದು ಏಟು ತಿಂದ ಹುಡುಗನ ತಂದೆ ಶಾಲೆಗೆ ಹೋದಾಗ ದೈಹಿಕ ಶಿಕ್ಷಣ ಉಪಾಧ್ಯಾಯರು ಅವರನ್ನು 'ಮಾಮಾ' ಎಂದು ಸಂಬೋಧಿಸಿ, ಅವರ ಮನೆ ಮಾತಿನಲ್ಲೇ ಮಾತನಾಡಿಸಿ, ಅವರ ಮನೆಯವರೆಲ್ಲರ ಬಗ್ಗೆ ವಿಚಾರಿಸಿ ತಾವು ಅವರಿಗೆ ಮನೆಯಲ್ಲಿ ಸೋದರಳಿಯನಾಗಬೇಕೆಂದು ಹೇಳಿದ್ದಲ್ಲದೆ, ಖುದ್ದಾಗಿ ಮುಖ್ಯೋಪಾಧ್ಯಾಯರಿಗೆ ಪರಿಚಯವನ್ನೂ ಮಾಡಿಕೊಟ್ಟು ಕಾಫಿ ತರಿಸಿ ಕೊಟ್ಟು ಕಳಿಸಿದರಂತೆ. ಸ್ವಜಾತಿ ನೆಂಟಸ್ತಿಕೆಯ ಮುಂದೆ ಹುಡುಗನಿಗೆ ಎಂತಹ ಶಿಕ್ಷೆ ಕೊಟ್ಟರೂ ಅದು ಅವನ ಏಳಿಗೆಗೆ ಎಂದು ತೀರ್ಮಾನಿಸಿದ್ದು ನನಗೆ ಬಹಳ ಖೇದವೆನ್ನಿಸಿತು.

• **ಎಚ್.ಆರ್. ವಿಮಲಮ್ಮ**

# ಅಭಿನಿವೇಶ

✿ ಎಚ್. ಪಾಂಡುರಂಗ ವಿಠಲ

ಸಂಕಟಪುರವೆಂಬ ಗ್ರಾಮ ಎರಡು ವಿಷಯಗಳಿಗೆ ಪ್ರಸಿದ್ಧ. ಒಂದು ಪುರಾಣ ಪ್ರಸಿದ್ಧಿಯ ಹುಚ್ಚೂರಾಯನ ದೇವಸ್ಥಾನ, ಮತ್ತೊಂದು ಅತಿ ಶ್ರೀಮಂತನಾದ ಗ್ರಾಮಾಧಿಕಾರಿ.

ಗ್ರಾಮಾಧಿಕಾರಿಗೆ ಸುಖ ಹೆಚ್ಚಾಗಿ ಜೀವನ ಬೇಸರವಾಯಿತು. ಮಾಡಬೇಕಾದ ಕೆಲಸಗಳು ಯಾವವೂ ಇಲ್ಲ ಎನ್ನುವಾಗ ಗ್ರಹಚಾರ ತಿರುಗಿತು. ಕಷ್ಟಪರಂಪರೆ ಆವನನ್ನು ಮುತ್ತಿತು. ಹೆಂಡತಿ ಸತ್ತಳು, ಮಕ್ಕಳು ಇದಿರುಬಿದ್ದರು.

ಆಗ ಗ್ರಾಮಾಧಿಕಾರಿಯು ಕುಲಪುರೋಹಿತನಾದ ಪೂಜಾರಿಯ ಬಳಿ ಬಂದು ತನ್ನ ಮನಸ್ಸು ಶಾಂತವಾಗಲು ಏನು ಮಾಡಬೇಕೆಂದು ಕೇಳಿದ. ಪೂಜಾರಿಯು ಮಂತ್ರೋಪದೇಶ ಮಾಡಿ, ಹುಚ್ಚೂರಾಯನನ್ನು ಧ್ಯಾನಿಸಲು ಹೇಳಿ, ಸ್ವಾಮಿಯ ಅನುಗ್ರಹದಿಂದ ನಿನ್ನ ಕಷ್ಟ ದೂರಾಗುವುದು ಎಂದು ಭರವಸೆ ಕೊಟ್ಟ.

ಗ್ರಾಮಾಧಿಕಾರಿಗೆ ತನ್ನ ಮನೆಯಲ್ಲಿ ಶಾಂತವಾದ ಜಾಗ ಸಿಕ್ಕಲಿಲ್ಲ. ದೇವಸ್ಥಾನಕ್ಕೆ ಬಂದು ಧ್ಯಾನಿಸಲು ಪೂಜಾರಿಯು ಸಲಹೆಯಿತ್ತ. ಗ್ರಾಮಾಧಿಕಾರಿಯು ಸಂಜೆ ತನ್ನ ಕರ್ತವ್ಯಗಳನ್ನೆಲ್ಲ ಪೂರೈಸಿದ ಬಳಿಕ ದೇವಸ್ಥಾನಕ್ಕೆ ಬಂದು ಧ್ಯಾನಿಸತೊಡಗಿದ.

ಅವನ ಧ್ಯಾನಯೋಗವು ಬಲಿತಂತೆಲ್ಲ ಪೂಜಾರಿಗೇ ಕಷ್ಟಪರಂಪರೆ ಶುರುವಾಯಿತು. ಏಕೆಂದರೆ ರಾತ್ರಿ ಬಹು ಹೊತ್ತಿನವರೆಗೂ ಗ್ರಾಮಾಧಿಕಾರಿ ಧ್ಯಾನದಿಂದ ಏಳದೆ ದೇವಸ್ಥಾನದ ಬಾಗಿಲನ್ನು ಹಾಕಲು ತಡವಾಗುತ್ತಿತ್ತು. ಪೂಜಾರಿಯ ಮನದಲ್ಲೂ ಮನೆಯಲ್ಲೂ ವಿರಸ ಭಾವನೆ ತಲೆ ಹಾಕಿತು. ಆತನ ವೃದ್ಧತಾಯಿಯು ಅನೇಕ ಹುಟ್ಟುಸಾವುಗಳನ್ನು ಕಂಡು ಅರಿತವಳು ಅವಳು ಒಂದು ಉಪಾಯ ಹೇಳಿಕೊಟ್ಟಳು.

ಅದರಂತೆ ಒಂದು ದಿನ ಪೂಜಾರಿಯು ದೇವಸ್ಥಾನದ ಬಾಗಿಲೆಳೆದು ಹೊರಗೆ ಹೋದಂತೆ ನಟಿಸಿದ. ಕೆಲ ಹೊತ್ತಿನ ಬಳಿಕ ನಸುಗತ್ತಲಲ್ಲಿ ಸದ್ದಾಗದಂತೆ ದೇವರ ವಿಗ್ರಹದ ಮರೆಯಲ್ಲಿ ಸೇರಿದ. ಗ್ರಾಮಾಧಿಕಾರಿಯ ಧ್ಯಾನ ಮುಗಿದು ನಮಸ್ಕರಿಸುವಾಗ ದೇವರಂತೆ ಗಂಭೀರ ಧ್ವನಿಯಲ್ಲಿ, "ಭಕ್ತಾ! ನಿನ್ನ ಭಕ್ತಿಗೆ ಮೆಚ್ಚಿದೆ. ಇಲ್ಲಿ ಬಾ. ನನ್ನಲ್ಲಿ ನಿನ್ನನ್ನು ಐಕ್ಯಗೊಳಿಸುತ್ತೇನೆ," ಎಂದು ಗುಡುಗಿದ.

ತಡಬಡಾಯಿಸಿ ಮೇಲೆದ್ದು ಹೊರಟ ಗ್ರಾಮಾಧಿಕಾರಿಯು ಮತ್ತೆಂದೂ ದೇವಸ್ಥಾನದತ್ತ ಮುಖ ಹಾಕಲಿಲ್ಲ.

** *** **

ತನ್ನನ್ನು ತಾನು ಕಳೆದುಕೊಂಡೇನೆಂಬ ಈ ಭಯವನ್ನು ಪತಂಜಲಿ ಅಭಿನಿವೇಶ ಎಂದು ಕರೆದಿದ್ದಾನೆ (ಅವಿದೆ, ಅಸ್ಮಿತೆ, ರಾಗ, ದ್ವೇಷಗಳ

ಜತೆ). ಪಂಚ ಕ್ಲೇಶಗಳಲ್ಲಿ ಇದು ಮುಖ್ಯವಾದದ್ದು. ಈಗ ಹುಟ್ಟಿದ ಕ್ರಿಮಿಗೂ ಜ್ಞಾನಿಗೂ ಸಮಾನವಾಗಿರುವ ಕ್ಲೇಶ. ''ನಾನು ಇಲ್ಲ ಎಂದಾಗದಿರಲಿ, ನಾನು ಇರುವಂತಾಗಲಿ'' ಎಂಬ ಆಶೆ. ಭಾಷ್ಯ ಬರೆದ ವ್ಯಾಸರು ಈ ಜನ್ಮದ ಪ್ರತ್ಯಕ್ಷ, ಆಗಮ, ಅನುಮಾನಾದಿ ಕಾರಣಗಳಿಂದಾಗಿ ಈ ಭಯವು ಉಂಟಾಗದಿದ್ದುದರಿಂದ, '' ಈ ಪ್ರಾಣಿಯು ಪೂರ್ವಜನ್ಮದಲ್ಲಿ ಮರಣ ದುಃಖವನ್ನು ಅನುಭವಿಸಿರಬೇಕು,'' ಎಂದು ಪೂರ್ವಜನ್ಮದ ಕಲ್ಪನೆಗೆ ಒತ್ತು ನೀಡುತ್ತಾರೆ.

ಸದಾ ಎಚ್ಚರದಿಂದ ಕಾಯ್ದುಕೊಳ್ಳುವ ಈ ನಾನು ಎಂಬ ವ್ಯಕ್ತಿಭಾವ ಹೇಗೆ ಬಂತು? ಭೌತ ವಸ್ತುಗಳಲ್ಲಿ ಇದು ಇಲ್ಲ, ಸಸ್ಯಪ್ರಪಂಚದಲ್ಲಿ ಅಸ್ಪಷ್ಟ, ಪ್ರಾಣಿಗಳಲ್ಲಿ ಸ್ವಲ್ಪ ಹೆಚ್ಚಿನ ಮಟ್ಟದಲ್ಲಿ ಬೆಳೆದಿದೆ, ಆದರೆ ಆತ್ಮಪ್ರಜ್ಞೆ ಇಲ್ಲ. ಮಾನವನಲ್ಲಿ ಅಹಂಭಾವ (ಇದು ಅಹಂಕಾರ- ನನ್ನದು ಎಂಬ ಸಂಗ್ರಹ ಬುದ್ಧಿಯಿಂದ ಬೇರೆಯಾದದ್ದು) ಇದ್ದು ಆತ ತನ್ನ ವ್ಯಕ್ತಿತ್ವವನ್ನು ರೂಪಿಸಬಲ್ಲ, ಬದಲಾಯಿಸಬಲ್ಲ.

ಮಕ್ಕಳಲ್ಲಿ ಹತ್ತು ಹನ್ನೆರಡು ವರ್ಷವಾಗುವವರೆಗೆ ಇದು ಇರುವುದಿಲ್ಲ. ಮಗು ಹೊರಗಿನ ವಸ್ತುಗಳ ಜತೆ, ತಾಯಿಯ ಜತೆ ತನ್ನನ್ನು ಒಂದಾಗಿ ಭಾವಿಸಿರುತ್ತದೆ. ಹೀಗಾಗಿ ತತ್ವಜ್ಞಾನಿಯೊಬ್ಬ ತನ್ನ ಮಗು ಸ್ವತಂತ್ರವಾಗಿ 'ನಾನು' ಎಂದ ದಿನ ಅದರ ಹುಟ್ಟಿದ ಹಬ್ಬ ಆಚರಿಸಿದನಂತೆ! ಸಹಜವಾದ ಈ ಅಹಂ ದೈವಿಕವಾದದ್ದು. ಪ್ರತಿ ಆತ್ಮವೂ ಅಮೃತದ ಬಿಂದು (ಅಮೃತಸ್ಯ ಪುತ್ರಾಃ).

ಆದರೆ ನಾವು ಹೊರಗಿನ ಏನನ್ನೋ ಹೊಂದಿರುವುದರಿಂದ 'ನಾವಾ'ಗಿರುವೆವು ಎಂದು ಭಾವಿಸುತ್ತೇವೆ. ಓದಿನಿಂದ, ಅಧಿಕಾರ ಸ್ಥಾನದಿಂದ, ಸಿರಿವಂತಿಕೆಯಿಂದ ಬರುವ ಈ 'ನಾನು' ಪರಕೀಯವಾದದ್ದು, ಇದು ಯಾಂತ್ರಿಕ ನಾನುತನವಾದ್ದರಿಂದ, ದುಃಖಕ್ಕೆ ಕಾರಣವಾಗುತ್ತದೆ. ಬೇರೆಯವರು ಗುರುತಿಸುವುದರ ಮೇಲೆ ಅವಲಂಬಿತವಾದ ಈ ಕಾಲ್ಪನಿಕ ನಾನುತನಕ್ಕೆ ಹಾಗೆ ಗುರುತಿಸದೆ ಹೋಗುವುದರಿಂದ ಸುಲಭವಾಗಿ ಕಳೆದು ಹೋಗುವ ಭಯ. (ನವ ವಧು, ಅಪರಿಚಿತ ಗಂಡನ ಮನೆಯಲ್ಲಿ ಕಳೆಯುವ ಮೊದಲ ದಿನಗಳನ್ನು ಈ ಭಯದಿಂದ ಉಸಿರುಗಟ್ಟಿ ಕಳೆಯುತ್ತಾಳೆ. ಭಯ ತೀರ ಹೆಚ್ಚಾದರೆ ಓಡಿಬಿಡುತ್ತಾಳೆ! ಆದರೆ ಸಾಮಾನ್ಯವಾಗಿ ಹೊಸ ವ್ಯಕ್ತಿತ್ವವನ್ನೇ ರೂಪಿಸಿಕೊಂಡು ಹೆಂಡತಿ ಹಾಗೂ ತಾಯಿಯಾಗುತ್ತಾಳೆ.) ಕಾಲ್ಪನಿಕ ಭಯಕ್ಕೆ ನೈಜವಾದ ಕಾರಣಗಳೇ ಇಲ್ಲವಾದುದರಿಂದ ಅದು ಚಿಂತೆಯ ಕ್ಯಾನ್ಸರ್ ಆಗುತ್ತದೆ. ಚಿಕ್ಕ ಮಕ್ಕಳಿಗೆ ಹೇಳುವ ರಾಕ್ಷಸನ ಕತೆಯಲ್ಲಿ ಅವನ ಪ್ರಾಣ ಸಪ್ತಸಾಗರಗಳಾಚೆ ಸಪ್ತಪಂಜರದೊಳಗಿನ ಗಿಳಿಯ ಮೊಟ್ಟೆಯಲ್ಲಿ ಇರುತ್ತದೆ. ಹೀಗೆಯೇ ನಮ್ಮ ಅಹಂ ತಪ್ಪುಗ್ರಹಿಕೆಯಿಂದಾಗಿ ಅಹಂಕಾರವಾಗಿ ನಾವು ಸಂಗ್ರಹಿಸಿದ ಹೊರಗಣ ವಸ್ತುಗಳ ಜತೆಗಿನ ತಾದಾತ್ಮ್ಯಭಾವವಾಗಿದೆ. ಈ ನಮ್ಮ ಪ್ರಪಂಚದಿಂದ ಮೃತ್ಯು ನಮ್ಮನ್ನೇ ಕದ್ದೊಯ್ದರೆ? ಆಗ ನಮ್ಮ ಗತಿಯೇನು!

ನಾವು ನಿಜವಾಗಿ ಏನಾಗಿರುವೆವೆಂಬುದನ್ನು ನಮ್ಮೊಳಗೇ ಶೋಧಿಸುತ್ತ ನೈಜ ಅಹಂಅನ್ನು ಬೆಳೆಸಿ, ತಿಳಿಯುವುದೇ ಅಭಿನಿವೇಶವನ್ನು ಗೆಲ್ಲುವ ಅಧ್ಯಾತ್ಮ ಮಾರ್ಗ-ವೆಂದು ರಮಣರು ಬೋಧಿಸುತ್ತಾರೆ. ಇದು ಸಹಜವಾದ ಮಾರ್ಗವೇ ಆಗಿದೆ.

** *** **

⁜ ಸ್ವಾಮಿ ನಿತ್ಯಾನಂದರು ಹೇಳಿದ ಕಥೆ

ಫ್ರಾನ್ಸಿನಲ್ಲಿ- ಅದರಲ್ಲೂ ವಿಶೇಷವಾಗಿ ಪ್ಯಾರಿಸ್ಸಿನಲ್ಲಿ- ಕ್ರಿಸ್ಮಸ್ ಹಿಂದಿನ ರಾತ್ರಿಗೆ ವಿಶೇಷ ಮಹತ್ವವಿದೆ. ಜನರು ರಾತ್ರಿಯ ಭೋಜನಕ್ಕೆ ಯಾರನ್ನಾದರೂ ಕರೆಯುತ್ತಾರೆ. ಅಂದು ಒಬ್ಬರೇ ಇರುವವರು ಸಹ ಒಂಟಿಯಾಗಿ ಭೋಜನ ಮಾಡುವುದಿಲ್ಲ. ಕರಿ ಪುಡ್ಡಿಂಗ್ ಎಂಬ ಸಿಹಿ ಭಕ್ಷ್ಯ ಡಿಸೆಂಬರ್ ೨೪ರ ರಾತ್ರಿಯ ಊಟದ ಒಂದು ನಿಗದಿತ ತಿನಿಸು. ಪ್ಯಾರಿಸ್ ನಗರವಾಸಿಗಳು ಬಹಳ ಅದ್ದೂರಿಯಿಂದ ಈ ಹಬ್ಬವನ್ನು ಆಚರಿಸುತ್ತಾರೆ.

ಗೆಳೆಯರು ಹೆನ್ರಿ ತಾಂಪ್ಲಿಯನ್ನು ಈ ಹಬ್ಬದ ಬಗ್ಗೆ ವಿಚಾರಿಸಿದರು. ಅವನು ಈ ಹಬ್ಬವನ್ನು ಆಚರಿಸದಿರುವುದಕ್ಕೆ ಕಾರಣ ಕೇಳಿದರು. ತಾಂಪ್ಲಿಯು ತಾನು ಹಬ್ಬ ಆಚರಿಸುವುದನ್ನು ನಿಲ್ಲಿಸಿರುವುದಾಗಿ ತಿಳಿಸಿದ. "ನೀನೇಕೆ ಇಷ್ಟು ಕೋಪದಿಂದ ಹಾರಾಡುತ್ತೀಯೆ?"-ಗೆಳೆಯರು ಕೇಳಿದರು.

"ಹಾರಾಡದೆ ಮತ್ತೇನು ಮಾಡುವುದು? ಕೆಲವು ವರ್ಷಗಳ ಹಿಂದೆ ಇದೇ ಹಬ್ಬದ ದಿವಸ ನನ್ನ ಜೀವನದಲ್ಲಿ ನಡೆಯಬಾರದ ಘಟನೆ ನಡೆಯಿತು. ಈ ಪ್ರಪಂಚದಲ್ಲಿ ನನ್ನಂತೆ ವಿಷಮ ಪರಿಸ್ಥಿತಿಯಲ್ಲಿ ಸಿಲುಕಿ ತೊಳಲಾಡುತ್ತಿರುವವರು ಯಾರೂ ಇರಲಾರರು. ಹಿಂದಿನ ಘಟನೆಯನ್ನು ನೆನೆದರೆ ಈಗಲೂ ಮನ ಮುದುಡುವುದು," ತಾಂಪ್ಲಿ ಉತ್ತರಿಸಿದ.

"ಅದೇನೆಂಬುದನ್ನು ನಮಗೆ ತಿಳಿಸಬಹುದಲ್ಲ," ಗೆಳೆಯರು ಹೇಳಿದರು.

"ಹಿಂದೆ ಏನು ನಡೆಯಿತೆಂಬುದನ್ನು ತಿಳಿಯಬೇಕೆಂಬ ಕುತೂಹಲ ನಿಮಗಿದೆ. ಸರಿ, ಹಾಗಾದರೆ ನನ್ನ ಕಥೆ ಕೇಳಿ-

ಎರಡು ವರ್ಷಗಳ ಹಿಂದೆ ಕ್ರಿಸ್ಮಸ್ ಸಮಯದಲ್ಲಿ ಎಷ್ಟು ಚಳಿ ಇತ್ತೆಂಬುದು ನಿಮಗೆಲ್ಲಾ ನೆನಪಿರಬಹುದು. ರಸ್ತೆಯ ಬದಿಯಲ್ಲಿ ವಾಸಿಸುತ್ತಿದ್ದ ಭಿಕ್ಷುಕರು ಚಳಿಯಿಂದ ಮರಗಟ್ಟಿ ಸಾಯುವಂತಾಗಿದ್ದರು. ಶಾನ್ ನದಿಯ ನೀರು ಹೆಪ್ಪುಗಟ್ಟಿತ್ತು. ಕಾಲು ಚೀಲ ಹಾಗೂ ಪಾದರಕ್ಷೆ ಧರಿಸಿದ್ದರೂ ಹೊರಗೆ ಕಾಲಿಟ್ಟರೆ ಪಾದಗಳು ಮರದ ತುಂಡಿನಂತಾಗುತ್ತಿದ್ದವು.

ಅಂದು ನನಗೆ ಬಹಳ ಕೆಲಸವಿದ್ದುದರಿಂದ ಯಾರ ಮನೆಗೂ ರಾತ್ರಿಯ ಊಟಕ್ಕೆ ಹೋಗಲಿಲ್ಲ. ಅನೇಕರು ರಾತ್ರಿಯ ಭೋಜನಕ್ಕೆ ಬರಬೇಕೆಂದು ಕರೆದಿದ್ದರು. ನಾನು ಮನೆಯಲ್ಲೇ ಇದ್ದು ಬರವಣಿಗೆಯಲ್ಲಿ ತೊಡಗಿದ್ದೆ. ಸಂಜೆ ಹೊತ್ತು ಸ್ವಲ್ಪ ತಿಂಡಿ ತಿಂದು ಪುನಃ ಬರೆಯಲು ಕುಳಿತೆ. ನಗರವಾಸಿಗಳೆಲ್ಲರೂ ಹಬ್ಬದ ಊಟ-ಕುಡಿತ-ಕುಣಿತದಲ್ಲಿ ಮುಳುಗಿರುವಾಗ ನಾನು ಎಲ್ಲರಿಗಿಂತಲೂ ಬೇರೆಯಾಗಿ ಕೆಲಸ ಮಾಡುತ್ತಿರುವುದು ಸರಿಯೆಂದು ನನಗನಿಸಲಿಲ್ಲ. ಹೀಗಾಗಿ ನಾನು ರಾತ್ರಿ ಹತ್ತು ಗಂಟೆಯ ಸಮಯದಲ್ಲಿ ಬರೆಯುವುದನ್ನು ನಿಲ್ಲಿಸಿದೆ. ಅಕ್ಕಪಕ್ಕದ ಮನೆಗಳಿಂದ ವಿವಿಧ ಭಕ್ಷ್ಯಗಳ ಪರಿಮಳ ಬರುತ್ತಿತ್ತು. ಬರೆಯಲು ಮನಸ್ಸು ಒಪ್ಪದಿದ್ದುದರಿಂದ ಕೋಣೆಯಲ್ಲಿ ಸ್ವಲ್ಪ ಸಮಯ ಅಡ್ಡಾಡಿದೆ. ಅನಂತರ ಕೆಲಸದವಳನ್ನು ಕರೆದು ಅವಳಿಗೆ, "ಹೊರಗೆ ಹೋಗಿ ಎರಡು ಒಳ್ಳೆಯ ಊಟ ತೆಗೆದುಕೊಂಡು ಬಾ. ಸಿಂಪಿ (ಆಯ್‌ಸ್ಟರ್), ತಿತ್ತಿರಿಹಕ್ಕಿ (ಪಾಟ್ರಿಡ್ಜ್), ಮುಳ್ಳುವಳ್ಳಿ ಮತ್ತು ಹಂದಿ ಮಾಂಸಗಳು ಇರಲಿ. ಎರಡು ಶ್ಯಾಂಪೇನ್ ಸೀಸೆಗಳೂ ಬೇಕು," ಎಂದು ಹೇಳಿದೆ.

**✤ ಮೂಲ: ಮೊಪಾಸಾ**

**✤ ಅನುವಾದ: ಡಾ. ಪಿ.ವಿ. ರಾಮಚಂದ್ರ**

ಅವಳು ಹೊರಗಿನಿಂದ ಊಟ ತಂದಳು. ಮೇಜನ್ನು ಸಿದ್ಧಗೊಳಿಸಿ, ಊಟಕ್ಕೆ ತಟ್ಟೆ-ಲೋಟ, ಚಮಚ ಮುಂತಾದವುಗಳನ್ನು ಜೋಡಿಸಿ ಹೊರಟು ಹೋದಳು.

ನಾನು ಉದ್ದದ ಕೋಟು ಧರಿಸಿ ಮನೆಯಿಂದ ಹೊರಗೆ ಕಾಲಿರಿಸಿದೆ. ಊಟಕ್ಕೆ ಯಾರನ್ನಾದರೂ ಕರೆಯಬೇಕೆಂದು ತೀರ್ಮಾನಿಸಿದೆ. ಆದರೆ ಯಾರನ್ನು ಕರೆದುಕೊಂಡು ಬರುವುದು? ನನ್ನ ಗೆಳತಿಯರೆಲ್ಲಾ ಬೇರೆ ಬೇರೆ ಕಡೆ ಒಪ್ಪಿಕೊಂಡಿದ್ದರು. ನಾನು ಮೊದಲೇ ಯಾರನ್ನಾದರೂ ಕರೆದಿದ್ದರೆ

ಖಂಡಿತ ಬರುತ್ತಿದ್ದರು. ಆದರೆ ನಾನು ಯಾರನ್ನೂ ಕರೆದಿರಲಿಲ್ಲ. ಈಗ ಒಬ್ಬನೇ ಕುಳಿತು ಊಟ ಮಾಡಲು ಮನಸ್ಸಾಗುತ್ತಿರಲಿಲ್ಲ. ಪ್ಯಾರಿಸ್ ನಗರದಲ್ಲಿ ಬಡ ಹುಡುಗಿಯರು ಬಹಳ ಮಂದಿ ಇದ್ದಾರೆ. ಅವರಲ್ಲಿ ಕೆಲವರಿಗಂತೂ ಹಬ್ಬದ ದಿನವೂ ಉಪವಾಸವೇ ಗತಿ. ಯಾರಾದರೂ ಶ್ರೀಮಂತರು ಮನೆಗೆ ಕರೆದುಕೊಂಡು ಹೋಗಿ ಒಂದು ಊಟ ಹಾಕಿಸುವಂತಾಗಲೆಂದು ದೇವರನ್ನು ಪ್ರಾರ್ಥಿಸುತ್ತಿರಬಹುದು. ಹಸಿದವಳಿಗೆ ಹಬ್ಬದಂದು ಒಂದು ಊಟ ಹಾಕಿದರೆ ಪುಣ್ಯ ಬರುವುದು. ಈ ವಿಚಾರ ಮನದಲ್ಲಿ ಮೂಡಿದೊಡನೆಯೇ ರಸ್ತೆಯ ಅಕ್ಕಪಕ್ಕಗಳಲ್ಲಿ ನಿಂತಿದ್ದ ಹುಡುಗಿಯರನ್ನು ನೋಡುತ್ತಾ ನಡೆದೆ. ನನಗೆ ಯಾರೂ ಇಷ್ಟವಾಗಲಿಲ್ಲ. ನಾನು ಕೃಶಾಂಗಿಯರನ್ನು ಇಷ್ಟಪಡುವುದಿಲ್ಲ. ಅಂದು ಕಾಣಿಸಿದವರೆಲ್ಲಾ ಸಣಕಲಿಯರು. ಮುಂದೆ ನಡೆದು ವೆರೈಟಿ ನಾಟಕ ಮಂದಿರದ ಬಳಿ ಒಬ್ಬಳು ಸ್ವಲ್ಪ ಸ್ಥೂಲ ಶರೀರದವಳು ಕಂಡುಬಂದಳು. ನಾನು ಅವಳನ್ನು ದಾಟಿ ಮುಂದೆ ಹೋಗಿ, ಅನಂತರ ಹಿಂದಿರುಗಿ ಬಂದೆ. ಹುಡುಗಿ ಲಕ್ಷಣವಾಗಿದ್ದಳು. ಅವಳ ಕಾಂತಿಯುತ ಕಣ್ಣುಗಳು, ದೇಹ ಕಾಂತಿ ಹಾಗೂ ಯೌವನ ನನ್ನನ್ನು ಆಕರ್ಷಿಸಿದವು. ನಾನು ಅವಳನ್ನು ರಾತ್ರಿಯ ಭೋಜನಕ್ಕೆ ಬರಲು ಕರೆದೆ. ಅವಳು ಕೂಡಲೇ ಸಮ್ಮತಿಸಿ, ನನ್ನೊಡನೆ ನಡೆಯಲಾರಂಭಿಸಿದಳು. ಕಾಲು ಗಂಟೆಯಲ್ಲಿ ನಾವು ಮನೆ ತಲುಪಿದೆವು. ಒಳಗೆ ಕಾಲಿಟ್ಟಕೂಡಲೇ, "ಇಲ್ಲಿ ಎಷ್ಟು ಚೆನ್ನಾಗಿದೆ!"ಎಂದು ಉದ್ಗರಿಸಿದಳು. ಹೊಟ್ಟೆಗೆ ಏನೂ ಇಲ್ಲದೆ, ಬೀದಿಯಲ್ಲಿ ನಿಂತು, ಚಳಿಯಲ್ಲಿ ಗಡಗಡ ನಡುಗುತ್ತಿದ್ದವಳಿಗೆ ನನ್ನ ಮನೆಯೊಳಗಿನ ಬೆಚ್ಚನೆಯ ವಾತಾವರಣ ಸುಖಕರವಾಗಿತ್ತು. ಆ ರಾತ್ರಿ ಆ ನಿರ್ಗತಿಕಳಿಗೆ ಒಳ್ಳೆಯ ಊಟ ಮತ್ತು ಮಲಗಲು ಬೆಚ್ಚನೆಯ ಕೋಣೆ ಸಿಕ್ಕಿದ್ದರಿಂದ ಬಹಳ ಸಂತೋಷವಾಗಿತ್ತು. ನನಗೂ ಅವಳ ರೂಪ-ಸೌಂದರ್ಯ, ಮೈಮಾಟ ಮೆಚ್ಚುಗೆಯಾಯಿತು.

ಅವಳು ತನ್ನ ನಿಲುವಂಗಿ, ತಲೆಯ ಟೋಪಿ ಮುಂತಾದವುಗಳನ್ನು ತೆಗೆದಿರಿಸಿ ಊಟಕ್ಕೆ ಕುಳಿತಿದ್ದಳು. ಅವಳನ್ನು ಯಾವುದೋ ಗಾಢವಾದ ಚಿಂತೆ ಕಾಡುತ್ತಿರುವಂತೆ ಕಾಣುತ್ತಿತ್ತು. "ಏನೋ ಯೋಚಿಸುತ್ತಿರುವಂತಿದೆ-"ಎಂದುದಕ್ಕೆ 'ಈಗ ಅದರ ಬಗ್ಗೆ ಚಿಂತಿಸುವುದು ಬೇಡ'ಎಂದದ್ದರಿಂದ ನಾನು ಸುಮ್ಮನಾದೆ. ಶಾಂಪೇನ್ ಸೀಸೆಯ ಮುಚ್ಚಳ ತೆಗೆದು ಲೋಟಗಳಿಗೆ ಬಗ್ಗಿಸಿ, ಒಂದನ್ನು ಅವಳಿಗೆ ಕೊಟ್ಟೆ. ಅವಳು ಒಂದೇ ಗುಟುಕಿಗೆ ಅದನ್ನು ಖಾಲಿ ಮಾಡಿ, ಮತ್ತೊಮ್ಮೆ ಬಗ್ಗಿಸಿಕೊಂಡು ಕುಡಿದಳು. ಅವಳ ಕಪೋಲಗಳು ಕೆಂಪೇರಿದವು. ಈಗವಳು ಸುರಸುಂದರಿಯಂತೆ ಕಂಡುಬಂದಳು. ನಾನವಳಿಗೆ ಮುತ್ತೊಂದನ್ನು ಕೊಟ್ಟೆ. ಅವಳು ಮೊದಲು ಕಂಡುಬಂದಷ್ಟು ಪೆದ್ದಿಯಲ್ಲವೆಂದು ತಿಳಿಯಲು ಬಹಳ ಸಮಯ ಬೇಕಾಗಲಿಲ್ಲ. ಆಕೆ ಒರಟು ಸ್ವಭಾವದವಳಾಗಿರಲಿಲ್ಲ. ಅವಳ ಸ್ವಂತ ವಿಚಾರ ಕೇಳಿದಾಗ ಮಾತು ಹಾರಿಸುತ್ತಿದ್ದರಿಂದ ನನಗೆ ಅವಳ ಬಗ್ಗೆ ಏನೂ ತಿಳಿಯಲಿಲ್ಲ. ಕೆಲಸದವಳು ತಂದಿಟ್ಟಿದ್ದ ಭೋಜನದ ಹೆಚ್ಚುಪಾಲನ್ನು ತಿಂದು ಮುಗಿಸಿದೆವು. ಶಾಂಪೇನ್ ಮತ್ತು ಕೆಲವು ಮೀನಿನ ತುಂಡುಗಳು ಉಳಿದವು. ಸುಮಾರು ಒಂದು ಗಂಟೆಯ ನಂತರ ನಾವು ಊಟದ ಮೇಜನ್ನು ಬಿಟ್ಟೆದ್ದೆವು. ನಾನು ಊಟದ ಮೇಜನ್ನು ಸ್ವಚ್ಛಗೊಳಿಸಲಾರಂಭಿಸಿದೆ. ಅವಳು ನನ್ನ ಕೋಣೆಯೊಳಗೆ ಹೋಗಿ, ತನ್ನ ಉಡುಪುಗಳನ್ನು ಕಳಚಿ ಹಾಸಿಗೆಯ ಮೇಲೆ ಮಲಗಿಕೊಂಡಳು. ನೆರೆಹೊರೆಯವರು ತಮ್ಮ ಮನೆಗಳಲ್ಲಿ ಹಾಡುತ್ತಾ, ಕುಣಿಯುತ್ತಾ ಗಲಾಟೆ ಮಾಡುತ್ತಿದ್ದರು. ನಾನು ಮನದಲ್ಲೇ, ಹೊರಗೆ ಹೋಗಿ ಈ ಹುಡುಗಿಯನ್ನು ಕರೆದುಕೊಂಡು ಬಂದ ನನ್ನ ಜಾಣ್ಮೆಯನ್ನು ಪ್ರಶಂಸಿಸತೊಡಗಿದೆ. ಇದ್ದಕ್ಕಿದ್ದ ಹಾಗೆ ಕೋಣೆಯಿಂದ ವಿಚಿತ್ರವಾಗಿ ನರಳಿದ ಶಬ್ದ ಕೇಳಿ ಬಂದಿತು. "ಏನಾಗುತ್ತಿದೆ?"ಎಂದು ಕೂಗಿಕೊಂಡೆ. ಆದರೆ ಅವಳಿಂದ ಯಾವ ಉತ್ತರವೂ ಬರಲಿಲ್ಲ. ನರಳುವಿಕೆಯೂ ನಿಲ್ಲಲಿಲ್ಲ. "ನಿನಗೆ ಹುಷಾರಿಲ್ಲವೇ?" ಎಂದು ಮತ್ತೊಮ್ಮೆ ಕೇಳಿದೆ. ಅವಳ ಅರಚಾಟವೇ ಉತ್ತರವಾಗಿತ್ತು. ನಾನು ಮೊಂಬತ್ತಿ ಹಿಡಿದುಕೊಂಡು ಕೋಣೆಯನ್ನು ಪ್ರವೇಶಿಸಿದೆ. ಅವಳ ಮುಖ ವಿವ

ರ್ಣವಾಗಿತ್ತು. ಕೈಗಳನ್ನು ಹಿಸುಕಿಕೊಳ್ಳುತ್ತಿದ್ದಳು. "ನಿನಗೇನಾಗುತ್ತಿದೆ ಹೇಳು," ಎಂದು ಇನ್ನೊಮ್ಮೆ ಕೇಳಿದೆ.

"ಅಯ್ಯೋ, ಅಮ್ಮಾ ನೋವು, ತಡೆಯಲಾರೆ," ಎಂದು ಹೇಳಿ ಅಳಲಾರಂಭಿಸಿದಳು. ಅವಳು ಹೊದ್ದ ಬೆಡ್‌ಶೀಟನ್ನು ತೆಗೆದು ನೋಡಿದೆ. ಅವಳು ಗರ್ಭಿಣಿ, ಹೆರಿಗೆಯ ನೋವನ್ನು ಅನುಭವಿಸುತ್ತಿದ್ದಳು!!

ಏನು ಮಾಡಬೇಕೆಂದು ತೋಚಲಿಲ್ಲ. ಮನೆಯ ಗೋಡೆಗಳನ್ನು ಗುದ್ದುತ್ತಾ, 'ಸಹಾಯಕ್ಕೆ ಬನ್ನಿ, ಸಹಾಯ ಬೇಕು ಸಹಾಯ' ಎಂದು ಕೂಗಿಕೊಂಡೆ. ಕೆಲವೇ ಕ್ಷಣಗಳಲ್ಲಿ ಮನೆಯ ಬಾಗಿಲು ತೆಗೆದುಕೊಂಡಿತು. ಅನೇಕರು ಮನೆಯೊಳಗೆ ಬಂದರು. ಬಂದವರು ವಿವಿಧ ಉಡುಪುಗಳಲ್ಲಿದ್ದರು. ಮನೆಯೊಳಗೆ ಕೊಲೆಯೋ ಕಳ್ಳತನವೋ ಅಥವಾ ಯಾವುದೋ ಅನಾಹುತವೋ ಸಂಭವಿಸಿದೆಯೆಂದು ಬಂದ ಅಕ್ಕಪಕ್ಕದ ಗಂಡಸರು, ಹೆಂಗಸರು ಭಾವಿಸಿದ್ದರು. ನಾನು ಕೋಣೆಯಲ್ಲಿರುವ ಹೆಂಗಸಿಗೆ ಪ್ರಸವ ವೇದನೆ ಉಂಟಾಗಿರುವ ವಿಚಾರ ತಿಳಿಸಿದೆ. ಬಂದವರೆಲ್ಲಾ ಅವಳನ್ನೊಮ್ಮೆ ನೋಡಿದರು. ಆ ಗುಂಪಿನಲ್ಲಿ ಒಬ್ಬ ಕಿರಿಯ ಪಾದರಿ ಇದ್ದ. ಆತ ತನಗೆ ಪ್ರಸೂತಿ ತಂತ್ರ ಗೊತ್ತು ಎಂದ. ಆದರೆ ಅಂದು ಅವರೆಲ್ಲಾ ಅತಿಯಾಗಿ ಕುಡಿದು ಅಮಲಿನಲ್ಲಿದ್ದುದರಿಂದ, ಆ ಅನಾಥಳನ್ನು ಅವರ ಅಧೀನಕ್ಕೊಪ್ಪಿಸಲು ಮನಸಾಕ್ಷಿ ಒಪ್ಪಲಿಲ್ಲ. ಮುಂದಿನ ಬೀದಿಯಲ್ಲಿ ಒಬ್ಬ ವೃದ್ಧ ವೈದ್ಯ ವಾಸವಾಗಿರುವ ವಿಚಾರ ನನಗೆ ತಿಳಿದಿತ್ತು. ನಾನು ಆ ಡಾಕ್ಟರರನ್ನು ಕರೆದುಕೊಂಡು ಬರಲೆಂದು ಓಡಿದೆ. ಡಾಕ್ಟರರನ್ನು



ಕರೆದುಕೊಂಡು ಬರುವಷ್ಟರಲ್ಲಿ ಮನೆಯ ದೀಪಗಳೆಲ್ಲಾ ಉರಿಯುತ್ತಿದ್ದವು. ಆ ಕಟ್ಟಡದ ನಿವಾಸಿಗಳೆಲ್ಲಾ ನನ್ನ ಕೋಣೆಯಲ್ಲಿ ಸೇರಿದ್ದರು. ನಾಲ್ವರು ನಾವಿಕರು ನಾವು ಉಳಿಸಿದ್ದ ಶಾಂಪೇನ್ ಕುಡಿದು ಮುಗಿಸಿದ್ದರು. ತಟ್ಟೆಯಲ್ಲಿ ಉಳಿದಿದ್ದ ತಿತ್ತಿರಿ ಮತ್ತು ಮುಳ್ಳುವಳ್ಳಿಗಳು ಅವರ ಹೊಟ್ಟೆಯನ್ನು ಸೇರಿದ್ದವು. ನನ್ನನ್ನು ನೋಡಿದೊಡನೆಯೇ ನೆರೆಕರೆಯವರೆಲ್ಲಾ ನಗುನಗುತ್ತ ಕೇಕೇ ಹಾಕಿದರು. ಒಬ್ಬಳು ಬೆಕ್ಕಿನಂತೆ ಮುದುಡಿಕೊಂಡಿದ್ದ ಒಂದು ಜೀವಂತ ಪ್ರಾಣಿಯನ್ನು ನನ್ನ ಮುಂದೆ ತಂದು, "ಹೆಣ್ಣು ಮಗು," ಎಂದಳು. ಡಾಕ್ಟರ್ ಮಗುವನ್ನು ಪರೀಕ್ಷಿಸಿ, ಅದು ಆರೋಗ್ಯದಿಂದಿರುವುದೆಂದು ತಿಳಿಸಿದ. ಬಾಣಂತಿಯನ್ನು ಪರೀಕ್ಷಿಸಿ, ಅವಳ ಸ್ಥಿತಿ ನಾಜೂಕಾಗಿದೆಯೆಂದು ಹೇಳಿದ. ಔಷಧಿ ಮತ್ತು ನರ್ಸುಗಳನ್ನು ಕಳುಹಿಸುವುದಾಗಿ ಹೇಳಿ ನನ್ನಿಂದ ಬೀಳ್ಕೊಂಡ. ಒಂದು ಗಂಟೆಯ ನಂತರ ಇಬ್ಬರು ಶುಶ್ರೂಷಕಿಯರು ಔಷಧಿ ಮತ್ತು ಮಗು-ಬಾಣಂತಿಯರ ಆರೈಕೆಗೆ ಬೇಕಾದ ಸಾಮಾನುಗಳನ್ನು ತೆಗೆದುಕೊಂಡು ಬಂದರು. ನಾನು ಆ ರಾತ್ರಿಯನ್ನು ಆರಾಮಕುರ್ಚಿಯಲ್ಲಿ ಕುಳಿತೇ ಕಳೆಯಬೇಕಾಯಿತು.

ಬೆಳಗ್ಗೆ ಡಾಕ್ಟರ್ ಬಾಣಂತಿಯನ್ನು ನೋಡಲು ಬಂದ. ಅವಳನ್ನು ಪರೀಕ್ಷಿಸಿ ಅವಳ ಆರೋಗ್ಯ ಚೆನ್ನಾಗಿಲ್ಲವೆಂದರಿತ.

"ಮಿಸ್ಟರ್, ನಿಮ್ಮ ಹೆಂಡತಿ...."ಎಂದು ಮಾತು ಪ್ರಾರಂಭಿಸಿದ. ನಾನು ಕೂಡಲೇ, "ಡಾಕ್ಟರ್, ಅವಳು ನನ್ನ ಹೆಂಡತಿಯಲ್ಲ," ಅಂದೆ.

"ನಿನ್ನ ಪತ್ನಿಯಲ್ಲದಿದ್ದರೆ, ನಿನ್ನ ಉಪಪತ್ನಿ. ಯಾರಾದರೇನು? ನಿನ್ನವಳ ಆರೋಗ್ಯ ಚೆನ್ನಾಗಿಲ್ಲ. ಅವಳಿಗೆ ಈ ಚೀಟಿಯಲ್ಲಿರುವ ಔಷಧಿಗಳನ್ನು ತರಿಸಿಕೊಡು," ಎಂದು ಔಷಧಿಗಳ ಪಟ್ಟಿಯನ್ನು ಕೊಟ್ಟು ಹೊರಟು ಹೋದ.

ನಾನೇನು ಮಾಡಬೇಕೆಂದು ತೋಚದೆ ಬಹಳ ಹೊತ್ತು ಕುಳಿತಿದ್ದೆ. ಆ ಬಡ ಹೆಂಗಸನ್ನು ಆಸ್ಪತ್ರೆಗೆ ಕಳುಹಿಸುವುದು ಹೇಗೆ? ವಠಾರದವರು ಅವಳನ್ನು ನನ್ನ ಪತ್ನಿ ಅಥವಾ ಉಪಪತ್ನಿಯೆಂದು ತಿಳಿದಿರುವುದರಿಂದ ವಿಧಿಯಿಲ್ಲದೆ ಅವಳನ್ನು ನನ್ನ ಕೋಣೆಯಲ್ಲೇ ಉಳಿಸಿಕೊಳ್ಳಬೇಕಾಯಿತು. ಅವಳು ಆರು ವಾರಗಳವರೆಗೆ ನನ್ನ ರೂಮಿನಲ್ಲಿ, ನನ್ನ ಮಂಚದ ಮೇಲೆ ಮಲಗಿದ್ದಳು. ನಾನು ಆರಾಮ ಕುರ್ಚಿಯಲ್ಲಿ ಮಲಗಿ ರಾತ್ರಿ ಕಳೆಯುತ್ತಿದ್ದೆ.

ಮಗುವಿನ ತಾಯಿಯ ಆರೋಗ್ಯ ಸರಿಯಾಗಿರದ್ದರಿಂದ ಆ ಮಗುವನ್ನು ಒಂದು ಹಳ್ಳಿಯ ರೈತ ದಂಪತಿಗಳಿಗೆ ಒಪ್ಪಿಸಿದೆ. ಮಗುವನ್ನು ಸಾಕಲು ತಗಲುವ ಖರ್ಚನ್ನು ಕೊಡುವುದಾಗಿ ಒಪ್ಪಿಕೊಂಡದ್ದರಿಂದ ರೈತ ದಂಪತಿಗಳು ತಕರಾರು ಮಾಡಲಿಲ್ಲ. ಮೊದಲ ತಿಂಗಳು ಹಣ ಕೊಟ್ಟ ಮೇಲೆ ಎರಡನೆಯ ತಿಂಗಳು ಕೊಡಲೇಬೇಕಾಯಿತು. ಅನಂತರ ಮೂರನೆಯ ತಿಂಗಳು ಕೊಟ್ಟೆ. ಎರಡು ವರ್ಷ ಕಳೆದರೂ ಪ್ರತಿ ತಿಂಗಳೂ ಹಣ ಕೊಡುತ್ತಿದ್ದೇನೆ. ನಾನು ಬದುಕಿರುವವರೆಗೂ ಹಣಕೊಡಬೇಕು. ಇದು ನನ್ನ ದುರ್ದೈವ. ಮುಂದೆ ಆ ಮಗು ನನ್ನನ್ನೇ ತನ್ನ ತಂದೆಯೆಂದು ತಿಳಿದುಕೊಳ್ಳಬಹುದು. ಇವೆಲ್ಲಾ ನನ್ನ ದುರದೃಷ್ಟದ ಫಲ. ಆ ಹೆಂಗಸು ಕೊನೆಗೆ ನನ್ನನ್ನೇ ಪ್ರೀತಿಸಲಾರಂಭಿಸಿದಳು.

"ಅದು ಸರಿ, ಆಮೇಲೇನಾಯಿತು?" ಗೆಳೆಯರು ಕೇಳಿದರು.

"ಆಗುವುದೇನು? ದಪ್ಪಗಾಗಿ ಚೆನ್ನಾಗಿದ್ದವಳು ಸಣಕಲಿಯಾದಳು. ಮೊದಲೆ ನನಗೆ ಕೃಶಾಂಗಿಯರನ್ನು ಕಂಡರೆ ಆಗುವುದಿಲ್ಲ. ಆರು ವಾರಗಳ ಅನಂತರ ಅವಳ ಆರೋಗ್ಯ ಸುಧಾರಿಸಿತು. ನಾನು ಅವಳನ್ನು ಮನೆಯಿಂದ ಹೊರಕ್ಕೆ ಅಟ್ಟಿದೆ. ಅವಳು ಈಗ ಬೀದಿಯ ಸಂದಿಗೊಂದಿಗಳಲ್ಲಿ ಅವಿತಿರುತ್ತಾಳೆ, ನನ್ನ ಪ್ರತೀಕ್ಷೆಯಲ್ಲಿ ಇರುತ್ತಾಳೆ. ನನ್ನನ್ನು ಕಂಡರೆ ಓಡಿ ಬಂದು ನನ್ನ ಕೈಗಳಿಗೆ ಮುತ್ತಿಡುತ್ತಾಳೆ. ಅವಳನ್ನು ಕಂಡರೆ ನನಗೆ ಹುಚ್ಚು ಹಿಡಿದಂತಾಗುತ್ತದೆ.

ಈ ಕಟು ಅನುಭವದಿಂದಾಗಿ ನಾನೀಗ ಕ್ರಿಸ್ಮಸ್ ಹಿಂದಿನ ರಾತ್ರಿಯ ಹಬ್ಬವನ್ನು ಆಚರಿಸುತ್ತಿಲ್ಲ. ಎಲ್ಲಾ ನನ್ನ ದುರ್ದೈವ."

# ಮುಲ್ಲಾ ನಾಸೀರುದ್ದೀನರ ಎರಡು ವಿನೋದ ಕಥೆಗಳು

✷ -ಪ್ರಿಯತಮ

## ದೇವರ ಪ್ರಸಾದ

ಒಂದು ದಿನ ಮುಲ್ಲಾ ನಾಸೀರುದ್ದೀನ್ ತನ್ನ ಮನೆಯ ಚಪ್ಪರದ ಸೂರಿನಡಿ ಕುಳಿತು ಹೊರಗೆ ಬೀಳುತ್ತಿದ್ದ ಮಳೆಯ ಮೋಜನ್ನು ನೋಡುತ್ತಿದ್ದ. ಅಷ್ಟರಲ್ಲಿ ಆತನ ಪರಿಚಯದ ಒಬ್ಬ ಮನುಷ್ಯ ರಸ್ತೆಯಲ್ಲಿ ಓಡೋಡುತ್ತಾ ಮನೆಗೆ ಧಾವಿಸುತ್ತಿರುವುದನ್ನು ಕಂಡ. ಮುಲ್ಲಾ ಓಡುತ್ತಿರುವ ಆ ಮನುಷ್ಯನನ್ನು ತಡೆದು ನಿಲ್ಲಿಸಿ, "ಗಫೂರ್, ನೀನೇಕೆ



ಮನೆಯ ಕಡೆ ಹೀಗೆ ಓಡುತ್ತಾ ಹೋಗುತ್ತಿದ್ದೀ?" ಎಂದು ಕೇಳಿದ.

ಅದಕ್ಕೆ ಗಫೂರನೆಂದ- "ಮುಲ್ಲಾ ಸಾಹೇಬರೇ, ಮನೆಯ ಕಡೆ ಹೋಗಬೇಕೆನ್ನುವಷ್ಟರಲ್ಲಿ ಒಮ್ಮಿಂದೊಮ್ಮೆ ಮಳೆ ಜೋರಾಗಿ ಬೀಳತೊಡಗಿತು. ಹೀಗಿರುವಾಗ ನೆನೆದು ಹೆಚ್ಚು ಒದ್ದೆಯಾಗಬಾರದೆಂದು ಓಡುತ್ತೋಡುತ್ತಾ ಹೋಗುತ್ತಿದ್ದೇನೆ."

ಅದಕ್ಕೆ ನಾಸಿರುದ್ದೀನ ಹೇಳಿದ- "ಗಫೂರ್, ನಿನ್ನ ವಿಚಾರವೇ ಬಲು ವಿಚಿತ್ರ. ಮಳೆ ಎಂದರೆ ದೇವರ ಪ್ರಸಾದ ನೋಡು. ಇಂತಹ ಪ್ರಸಾದವನ್ನು ದೇವರು ಮುಕ್ತ ಹಸ್ತದಿಂದ ಮಳೆಗರೆಯುತ್ತಿರುವಾಗ ಅದನ್ನು ಎಷ್ಟು ಮೈಮೇಲೆ ಬೀಳಿಸಿಕೊಳ್ಳಲು ಸಾಧ್ಯವೋ ಅಷ್ಟನ್ನೂ ತೆಗೆದುಕೊಳ್ಳಬೇಕು. ಅದನ್ನು ಬಿಟ್ಟು ಅದರಿಂದ ತಪ್ಪಿಸಿಕೊಳ್ಳಲು ನೀನು ಹೀಗೆ ಮನೆಯ ಕಡೆ ಓಡುವುದೇ?"

ಮುಲ್ಲಾ ನಾಸೀರುದ್ದೀನನ ಮಾತು ಒಪ್ಪಿಗೆಯಾದುದರಿಂದ ಗಫೂರ ಮಂದಗತಿಯಿಂದ ನಡೆದು ಮನೆ ಸೇರಿದ.

ಅನಂತರ ಒಂದು ವಾರವೂ ಕಳೆದಿರಲಿಲ್ಲ. ನಾಸೀರುದ್ದೀನ್ ಆ ಗಫೂರನ ಮನೆಯ ಕಡೆಯಿಂದ ತನ್ನ ಮನೆಯ ಕಡೆ ಬರುತ್ತಿರುವಾಗ ಕಿಂಚಿತ್ ಮಳೆ ಹನಿಯತೊಡಗಿತು. ಅದನ್ನು ಕಂಡ ನಾಸಿರುದ್ದೀನ್ ತನ್ನ ಮನೆಯ ಕಡೆ ಓಡತೊಡಗಿದ. ಅದನ್ನು ಮನೆಯ ಪಡಸಾಲೆಯಲ್ಲಿ ಕುಳಿತು ನೋಡಿದ ಗಫೂರ ಆತನನ್ನು ಕರೆದು ಕೇಳಿದ- "ಮಳೆ ಅಂದರೆ ದೇವರ ಪ್ರಸಾದ. ಆದರೆ ನೀವು ಅದನ್ನು ಮೈಮೇಲೆ ಬೀಳಿಸಿಕೊಳ್ಳುವುದನ್ನು ಬಿಟ್ಟು ಹೀಗೇಕೆ ಮನೆಯ ಕಡೆ ಓಡತೊಡಗಿರುವಿರಿ?"

ಅದಕ್ಕೆ ನಾಸಿರುದ್ದೀನ ಉತ್ತರಿಸಿದ-"ಮಳೆಯೆಂಬ ಪರೆ ದೇವರ ಪ್ರಸಾದ ಎನ್ನುವುದು ಸುಳ್ಳಲ್ಲ. ಆದರೆ ಹೀಗೆ ರಸ್ತೆಯ ಮೇಲೆ ಬೀಳುವ ಅದನ್ನು ಕಾಲಿನಡಿಯಲ್ಲಿ ತುಳಿದು ಮನೆಗೆ ಹೋಗುವುದೆಂದರೆ ದೇವರಿಗೆ ಅವಮಾನ ಮಾಡಿದಂತಾಗುವುದಿಲ್ಲವೆ? ಹಾಗಾಗಬಾರದೆಂದೇ ನಾನು ಆದಷ್ಟು ಬೇಗ ಮನೆ ಸೇರಲು ಪ್ರಯತ್ನಿಸುತ್ತಿದ್ದೇನೆ."

## ನೀವು ನನ್ನ ಕಾರಣ ಮತ್ತು ನಾನು ನಿಮ್ಮ ಕಾರಣ

ಸಂಜೆಯ ಸಮಯ ಮುಲ್ಲಾ ನಾಸೀರುದ್ದೀನ್ ದಾರಿಗುಂಟ ಸಾಗುತ್ತಿದ್ದ. ಕತ್ತಲಾವರಿಸತೊಡಗಿತ್ತು. ಒಮ್ಮೆಗೇ ರಸ್ತೆ ನಿರ್ಜನವಾಗಿದೆ ಎಂದು ಆತನಿಗನ್ನಿಸಿತು. ನೋಡಿದರೆ ಸುತ್ತಮುತ್ತ ಯಾರೂ ಇಲ್ಲ. ಆತನಿಗೆ ಭಯವಾಗತೊಡಗಿತು. ಅಷ್ಟರಲ್ಲಿ ಎದುರಿಗೆ ಜನರ ಗುಂಪೊಂದು ನಡೆದು ಬರುತ್ತಿರುವುದು ಆತನಿಗೆ ಕಾಣಿಸಿತು. ಕಳ್ಳರು, ದರೋಡೆಖೋರರು, ಕೊಲೆಗಡುಕರು ಇಂಥವರ ಬಗ್ಗೆ ಆತ ಓದಿ ತಿಳಿದಿದ್ದ. ಅದು ನೆನಪಿಗೆ ಬಂದು ಭಯದಿಂದ ಅವನು ಕಂಪಿಸತೊಡಗಿದ. ಬರುತ್ತಿರುವ ಇವರೀಗ



ತನ್ನನ್ನು ಕೊಂದೇಬಿಡುತ್ತಾರೆ ಎಂದುಕೊಂಡ ಆತ ಇದರಿಂದ ತಾನು ಹೇಗೆ ತಪ್ಪಿಸಿಕೊಳ್ಳುವುದು? ಎಂದು ಸುತ್ತಮುತ್ತ ನೋಡಿದ.

ಸಮೀಪವೇ ಒಂದು ಸ್ಮಶಾನ ಇತ್ತು. ತಡಮಾಡದೇ ನಾಸೀರುದ್ದೀನ್ ಅದರ ಗೋಡೆಯನ್ನು ಹಾರಿ ಒಳಗೆ ಧುಮುಕಿದ. ಅಲ್ಲಿ ಹೂಳಲು ಹೊಸದಾಗಿ ತೋಡಿದ ಹೊಂಡ ಕಾಣಿಸಿತು. ಅದು ಯಾರಿಗಾಗಿಯೋ ಅಂದು ಹೂಳಲು ಅಗೆದು ತಯಾರಿಸಿದುದಾಗಿತ್ತು. ಇದರಲ್ಲಿ ತಾನು ಹೆಣದಂತೆ ಬಿದ್ದುಕೊಳ್ಳುವುದು ಒಳ್ಳೆಯದು. ಒಂದು ವೇಳೆ ಅಲ್ಲಿಗೆ ಯಾರಾದರೂ ಬಂದರೂ ಅವರಿಗೆ ನಾನು ಹೆಣವಾಗಿ ಕಂಡೇನು. ಹೀಗಾಗಿ ಅವರೇನೂ ನನ್ನ ಗೋಜಿಗೆ ಬರಲಾರರು ಎಂದುಕೊಂಡು ಆ ಹೊಂಡದಲ್ಲಿ ಮಲಗಿಕೊಂಡ.

ಬರುತ್ತಿದ್ದ ಗುಂಪು ಕಳ್ಳ ಅಥವಾ ದರೋಡೆಖೋರರ ಗುಂಪಾಗಿರದೇ ಮದುವೆಯ ಒಂದು ದಿಬ್ಬಣವಾಗಿತ್ತು. ದಿಬ್ಬಣದ ಅನೇಕರು ಮುಲ್ಲಾ ಕಂಪಿಸುತ್ತಾ ಗೋಡೆ ಹಾರಿದುದನ್ನು ಕಂಡಿದ್ದರು. ಏನು ಅಪಾಯವೋ ಎಂದು ಅವರೂ ಹೆದರಿದರು. ಈತ ಯಾರು? ಏನು ವಿಷಯ? ಈತ ತಮಗೆ ಏನಾದರೂ ತೊಂದರೆ ಕೊಟ್ಟಾನು. ಆದುದರಿಂದಲೇ ಆತ ಅಲ್ಲಿ ಅಡಗಿದ್ದಾನೆ ಎಂದು ಅವರಿಗನ್ನಿಸಿತು. ಇಡೀ ದಿಬ್ಬಣ ಅಲ್ಲೆ ನಿಂತಿತು. ಮತ್ತು ದಿಬ್ಬಣದ ಅನೇಕ ಜನರು ಗೋಡೆ ಹಾರಿ ಒಳಹೋದರು.

ಮುಲ್ಲಾ ನಾಸೀರುದ್ದೀನ್ ತುಂಬಾ ಹೆದರಿದ. ದಿಬ್ಬಣದ ಜನರು ಆತನ ನಾಲ್ಕೂ ಕಡೆ ಗುಂಪುಗಟ್ಟಿ ನಿಂತಿದ್ದರು. ಮುಲ್ಲಾನನ್ನು ಉದ್ದೇಶಿಸಿ ಅವರು, "ನೀವು ಇಲ್ಲಿ ಏನು ಮಾಡುತ್ತಿದ್ದೀರಿ? ಹೆಣ ಹೂಳಲು ಅಗೆದಿರುವ ಈ ಹೊಂಡದಲ್ಲಿ ನೀವೇಕೆ ಬಿದ್ದುಕೊಂಡಿರುವಿರಿ?" ಎಂದು ಕೇಳಿದಾಗ ನಾಸೀರುದ್ದೀನ್ ಉತ್ತರಿಸಿದ- "ನೀವು ತುಂಬಾ ಕಠಿಣ ಪ್ರಶ್ನೆಯನ್ನು ಕೇಳುತ್ತಿದ್ದೀರಿ. ನಾನು ನಿಮ್ಮ ಕಾರಣವಾಗಿ ಇಲ್ಲಿದ್ದೇನೆ ಮತ್ತು ನೀವು ನನ್ನ ಕಾರಣವಾಗಿ ಇಲ್ಲಿದ್ದೀರಿ.




ವಿಶೇಷ ಅಂಕಣ

# ಆರೋಗ್ಯ ವರ್ಧಕವಾದ ಬಾಳೆಹಣ್ಣು

ಬಾಳೆಹಣ್ಣಿಗೆ ತನ್ನದೇ ಆದ ಐತಿಹ್ಯವಿದೆ. ಗ್ರೀಕ್, ಚೀನಿ, ರೋಮನ್ ಮತ್ತು ಭಾರತೀಯ ಸಾಹಿತ್ಯದಲ್ಲಿ ಇದರ ಪ್ರಸ್ತಾಪ ಸಾಕಷ್ಟು ಸಲ ಬರುತ್ತದೆ. ಬಾಳೆಹಣ್ಣಿನ ಕೃಷಿ ಮೊಟ್ಟಮೊದಲು ಭಾರತದಲ್ಲಿ ಪ್ರಾರಂಭವಾಯಿತೆಂದು ಭಾವಿಸಲಾಗಿದೆ. ನಂತರ ಇದನ್ನು ಪಶ್ಚಿಮ ಏಶಿಯ ಮತ್ತು ಇಜಿಪ್ತಿನ ಉತ್ತರಭಾಗದ ಜನರಿಗೆ ಪರಿಚಯಿಸಲಾಯಿತು. ಹಿಂದೂ ಮಹಾಸಾಗರದ ಮುಖಾಂತರ ದೇಶದ ವ್ಯಾಪಾರ ಅಧಿಕಗೊಂಡಾಗ ಬಾಳೆ ಹಣ್ಣು ಆಫ್ರಿಕದ ಪೂರ್ವ ತೀರ ಪ್ರದೇಶವನ್ನು ಸೇರಿತು. ದೇಶದಿಂದ ದೇಶಕ್ಕೆ ಬಾಳೆಹಣ್ಣು ಪರಿಚಯವಾಗಲು ಹೆಚ್ಚುಮಟ್ಟಿಗೆ ಅರಬರೆ ಮುಖ್ಯ ಕಾರಣ. ಪೋರ್ಚುಗೀಸರು ಇದನ್ನು ಕ್ಯಾನರಿ ದ್ವೀಪಕ್ಕೆ ತೆಗೆದುಕೊಂಡು ಹೋಗಿ ಕೃಷಿ ಮಾಡಲಾರಂಭಿಸಿದರು. ಹೊಸ ಜಗತ್ತಿಗೆ ಎಂದರೆ, ಅಮೆರಿಕಕ್ಕೆ ಬಾಳೆಹಣ್ಣನ್ನು ಪರಿಚಯಿಸಿದವನು ಥಾಮಸ್-ಡಿ-ಬರ್ಲಾಂಗ್ ಎನ್ನುವವ. ಈತ ೧೫೧೬ರಲ್ಲಿ 'ಸಾಂಟೋ ಡೋಮಿಂಗೋ' ದ್ವೀಪಕ್ಕೆ ಮಿಷನರಿಯಾಗಿ ಬಂದಿದ್ದಾಗ ಇದರ ಮಾಧುರ್ಯಕ್ಕೆ ಮನಸೋತು ಅಮೆರಿಕಕ್ಕೆ ಅದರ ಗಡ್ಡೆಯನ್ನು ತೆಗೆದುಕೊಂಡು ಹೋದ. ಅನಂತರ ಹೊಸ ಜಗತ್ತಿನ ಇತರ ಮಿಷನರಿಗಳಲ್ಲೂ ಬಾಳೆಹಣ್ಣಿನ ಕೃಷಿಯ ಬಗೆಗೆ ಆಸಕ್ತಿ ಕುದುರಿತು. ಸುಮಾರು ೧೯೦ ವರ್ಷಗಳಷ್ಟು ಹಿಂದೆಯೆ 'ವಿಲಿಯಂ ರೈಟ್' ಎಂಬಾತ ವೈದ್ಯಕೀಯ ಪತ್ರಿಕೆಯೊಂದರಲ್ಲಿ ಬಾಳೆಹಣ್ಣಿನ ಔಷಧೀಯ ಗುಣಗಳ ಬಗ್ಗೆ ಬರೆದಿದ್ದ.

ಜಮೈಕಾದ ಜನರು ಆರೋಗ್ಯವಂತರಾಗಿರಲು ಬಾಳೆಹಣ್ಣೇ ಕಾರಣವೆಂದು ಆತ ಹೇಳಿದ್ದಾನೆ. ಆಫ್ರಿ

# ಜ್ಞಾನನಿಧಿ

ಕದಲ್ಲಿನ ಕೆಲವು ಬುಡಕಟ್ಟಿನ ಜನರು ವರ್ಷದ ಕೆಲವು ದಿನಗಳಲ್ಲಿ ಬರಿ ಬಾಳೆಹಣ್ಣನ್ನು ಮಾತ್ರ ಸೇವಿಸಿ ಜೀವಿಸುತ್ತಾರೆಂದು ತಿಳಿದುಬಂದಿದೆ. ಬಾಳೆ ಹಣ್ಣನ್ನು ಒಣಗಿಸಿ, ಪುಡಿಮಾಡಿ ಅದನ್ನು ಬ್ರೆಡ್‌ನಂತೆ ಬೇಯಿಸಿ ತಿನ್ನುವುದೂ ಉಂಟು. ಅದರ ಹಿಟ್ಟನಿಂದ ಆಫ್ರಿಕದಲ್ಲಿನ ಕೆಲವು ಬುಡಕಟ್ಟುಗಳ ಜನರು ಖಾದ್ಯಪದಾರ್ಥಗಳನ್ನು ತಯಾರಿಸುತ್ತಾರೆ. ಹಿಂದಿನಕಾಲದಲ್ಲಿ ಅಲ್ಲಿಗೆ ಹೋಗುತ್ತಿದ್ದ ಬ್ರಿಟಿಷ್ ಸಂಶೋಧಕರು ಸಹ ತಮ್ಮ ಆಹಾರದಲ್ಲಿ ಬಾಳೆಹಣ್ಣಿನ ಪುಡಿಯನ್ನು ಉಪಯೋಗಿಸುತ್ತಿದ್ದರಂತೆ.

ಬಾಳೆಹಣ್ಣಿನಲ್ಲಿ ನೂರಕ್ಕೂ ಹೆಚ್ಚು ವಿಧಗಳಿವೆ. ಇದನ್ನು ಉಷ್ಣ ಪ್ರದೇಶದಲ್ಲಿ ಬೆಳೆಯುವುದೇ ಹೆಚ್ಚು. ಬಾಳೆಕಾಯಿಯಲ್ಲಿ ಶರ್ಕರಪಿಷ್ಟವು ಬಹುವಾಗಿದ್ದು ಅದನ್ನು ತರಕಾರಿಯನ್ನಾಗಿ ಬಳಸಬಹುದು. ಬಾಳೆ ಕಾಯಿ ಮಾಗಿದಾಗ ಅದರಲ್ಲಿನ ಸ್ಟಾರ್ಚ್ ಅಂಶ ಸಕ್ಕರೆಯಾಗಿ ರೂಪುಗೊಳ್ಳುತ್ತದೆ. ಬಾಳೆಹಣ್ಣಿನಲ್ಲಿ ಅನೇಕ ಪೌಷ್ಟಿಕಾಂಶಗಳಿವೆ. ಅದರಲ್ಲಿ ಪೊಟ್ಯಾಶಿಯಂ ಲವಣಗಳು ಮುಖ್ಯವಾಗಿವೆ. ಈ ಲವಣವು ದೇಹದಲ್ಲಿ ಕೆಲವು ದ್ರವಗಳ ಸಮತೋಲನವನ್ನು ಕಾಪಾಡಲು ಸಹಾಯ ಮಾಡುತ್ತದೆ. ಒಂದು ಸಾಮಾನ್ಯ ಗಾತ್ರದ ಬಾಳೆಹಣ್ಣು ನೂರು ಕ್ಯಾಲೊರಿಯಷ್ಟು ಶಕ್ತಿ ನೀಡುತ್ತದೆ. ಇದು ಅವಶ್ಯಕ ಗ್ಲೂಕೋಸನ್ನು ನೀಡುವುದರಲ್ಲಿ ಹೆಚ್ಚು ಪರಿಣಾಮಕಾರಿಯಾಗಿರುತ್ತದೆ. ಬಾಳೆಹಣ್ಣಿನಲ್ಲಿ ಎ.ಬಿ.ಸಿ.ಡಿ. ಮತ್ತು ಇ. ಅನ್ನಾಂಗಗಳು ಸಾಕಷ್ಟು ಪ್ರಮಾಣದಲ್ಲಿವೆ. ಇದರಲ್ಲಿ



ಪ್ರೋಟೀನ್ ಮತ್ತು ಕೊಬ್ಬಿನ ಅಂಶ ಇರುವುದಿಲ್ಲ. ಹೃದಯ ಸಂಬಂಧ ರೋಗ ಇರುವ ವ್ಯಕ್ತಿಗಳಿಗೆ ಬಾಳೆಹಣ್ಣು ಉತ್ತಮ ಆಹಾರ ಮತ್ತು ಔಷಧವೆಂದು ಬಲ್ಲವರು ಹೇಳುತ್ತಾರೆ. ಮಲಬದ್ಧತೆಯನ್ನು ಹೋಗಲಾಡಿಸುವುದರಲ್ಲಿ ಇದು ಬಹಳ ಪರಿಣಾಮಕರ.

✷ ಜಿ. ಅನಂತನಾರಾಯಣಸ್ವಾಮಿ

# ಜೀವನ ಸಂಗಾತಿಯ ಆಯ್ಕೆ

ಜಪಾನಿನ ಯುವತಿಯರು ಜೀವನ ಸಂಗಾತಿಯನ್ನು ಆಯ್ದುಕೊಳ್ಳಲು ಇಷ್ಟಪಟ್ಟರೆ ಅವರು ಮಾಡಬೇಕಾದುದಿಷ್ಟೆ:

ಅಲ್ಲಿ 'ಲವ್ ವೆಂಡಿಂಗ್' ಮೆಷೀನ್ ಇರುತ್ತದೆ. ಅದರಲ್ಲಿ ೩೦೦ ಯೆನ್ ನೋಟನ್ನು ಸಿಕ್ಕಿಸಿದರೆ ಮುಗಿಯಿತು. ಆಗಿಂದಾಗ ಒಂದು ಪಾಕೀಟು ಹೊರಬೀಳುತ್ತದೆ. ಅದರಲ್ಲಿ ಹಲವು ಮಂದಿ ತರುಣರ ಭಾವಚಿತ್ರಗಳು, ಅವುಗಳಲ್ಲಿ ಅವರ ಹೆಸರು, ಟೆಲಿಫೋನ್ ನಂಬರ್, ಅವರ ಬಳಿ ಇರುವ ಕಾರಿನ ಮಾಡೆಲ್ ಮೊದಲಾದ ವಿವರಗಳಿರುತ್ತವೆ. ಬಿಡಿ ಬಿಡಿ ಕಾಗದಗಳಲ್ಲಿ ಅವರ ಜಾತಕವೇ ಇರುತ್ತದೆ. ಆಯ್ಕೆ ಮಾಡಿದ ಸಂಗಾತಿಯನ್ನು ಸಂಪರ್ಕಿಸಿ ವಿವಾಹವಾಗಲು ಏರ್ಪಾಡು ಮಾಡಿಕೊಳ್ಳಬಹುದು. ನಮ್ಮಲ್ಲೂ ಇಂತಹ ಮಷೀನಿದ್ದರೆ ಎಷ್ಟು ಚೆನ್ನಾಗಿತ್ತು!

✷ ಕುಕನೂರ ಬಿ. ಹನುಮಂತ ಭಟ್

# ಜ್ಞಾನನಿಧಿ

## ಕ್ವಿಜ್ ಶಬ್ದ ಹೇಗೆ ಬಂತು?

ಇಂದು ಎಲ್ಲೆಡೆ ಪ್ರಚಾರದಲ್ಲಿರುವ 'ರಸ ಪ್ರಶ್ನೆ'ಎಂಬ ಸೀಮಿತ ಅರ್ಥವುಳ್ಳ ಪದ 'ಕ್ವಿಜ್' ನಿಜವಾದ ಅರ್ಥದಲ್ಲಿ ಬೇರೆಯೇ ಆಗಿದೆ.

ಆ ಶಬ್ದ ಹುಟ್ಟಿಕೊಳ್ಳಲು ಕಾರಣವಾದದ್ದು ಒಂದು ಚಿಕ್ಕ ಘಟನೆ. ಐರ್ಲೆಂಡಿನ ಜಿಮ್ ಡ್ಯಾಲಿ ಎಂಬ ಒಬ್ಬ ಮದ್ಯ ತಯಾರಕ ತನ್ನ ಸ್ನೇಹಿತರೊಂದಿಗೆ ಒಂದು ಪಣ ಕಟ್ಟಿದ. ಇಡೀ ಐರ್ಲೆಂಡಿನ ಜನ ಅದುವರೆಗೆ ಕೇಳರದಿದ್ದ ಹೊಸ ಪದವೊಂದನ್ನು ಮರುದಿನ ಬೆಳಗಾಗುವ ವೇಳೆಗೆ ತಾನು ಎಲ್ಲರ ಬಾಯಲ್ಲೂ ಆಡುವಂತೆ ಮಾಡುವೆ ಅನ್ನುವುದೇ ಆ ಪಣ. ಸಂಜೆ ಆತ ಪುಟ್ಟ ಮಕ್ಕಳನ್ನು ಕರೆದು, ಅವರಿಗೆ ತಿಂಡಿ ಕೊಟ್ಟು, ರಾತ್ರಿ ಪಟ್ಟಣದ ಎಲ್ಲ ಮನೆಗಳ ಬಾಗಿಲಿನ ಮೇಲೆ QUIZ ಎಂದು ಬರೆಯಲು ಹೇಳಿದ. ತಿಂಡಿಯ ಆಸೆಯಿಂದ ಮಕ್ಕಳು ಆ ರಾತ್ರಿ ಪ್ರತಿಯೊಬ್ಬರ ಮನೆಯ ಮೇಲೆ ಹಾಗೆ ಬರೆದರು. ಬೆಳಗ್ಗೆ ಎದ್ದಾಗ ಪ್ರತಿಯೊಬ್ಬರ ಬಾಯಿಯಲ್ಲಿಯೂ ಅದೇ ಪದ. ಆದರೆ ಅದರ ಅರ್ಥ ಮಾತ್ರ ಯಾರಿಗೂ ತಿಳಿಯದು. ಕೊನೆಗೆ ಆ ಪದವನ್ನು ಆವಿಷ್ಕರಿಸಿದ ಜಿಮ್ ಡ್ಯಾಲಿ ಎಲ್ಲರನ್ನು ಚಕಿತಗೊಳಿಸುವುದು ಅಥವಾ ಗೋಳು ಹುಯ್ದುಕೊಳ್ಳುವುದು ಎಂದು ಅದರ ಅರ್ಥವನ್ನು ವಿವರಿಸಿದ. ಹೀಗೆ ಆ ಶಬ್ದ ನಿಧಾನವಾಗಿ ಬಳಕೆಗೆ ಬಂತು.

ಈ ಪದವನ್ನು ಮೊದಲ ಬಾರಿಗೆ ಇಂಗ್ಲೆಂಡಿನ ಪ್ರಸಿದ್ಧ ಕಾದಂಬರಿಗಾರ್ತಿ ಜೇನ್ ಆಸ್ಟಿನ್ ತನ್ನ ಕಾದಂಬರಿಗಳಲ್ಲಿ ವಿಚಿತ್ರ ವ್ಯಕ್ತಿ ಎಂಬ ಅರ್ಥದಲ್ಲಿ ಬಳಸಿದಳು. ಅಲ್ಲಿಂದ ಮುಂದೆ ವಿಕ್ಟೋರಿಯ ರಾಣಿಯ ಕಾಲದ ಕಾದಂಬರಿಗಳಲ್ಲಿ ಕ್ವಿಜ್ ಶಬ್ದ ಕ್ವಿಜಿಂಗ್ ಎಂದು ರೂಪಾಂತರಗೊಂಡು ತಮಾಷೆ ಮಾಡುವುದು, ಕೀಟಲೆ ಮಾಡುವುದು, ತೊಂದರೆ ಕೊಟ್ಟು ಅಥವಾ ಅರ್ಥವಾಗದ ಪ್ರಶ್ನೆಗಳನ್ನು ಕೇಳಿ ಗೋಳು ಹುಯ್ದುಕೊಳ್ಳುವುದು ಎಂಬ ಅರ್ಥ ಗಳಿಸಿಕೊಂಡಿತು.

ಶಬ್ದಗಳ ಜನನದಹಾಗೆ ಅವುಗಳ ವರ್ತನೆಯೂ ವಿಚಿತ್ರ ಅಲ್ಲವೆ?

✷ ಸಂಗ್ರಹ:ಕುಕನೂರ ಹನುಮಂತ ಭಟ್ ಬಿ



ಜ್ಞಾನನಿಧಿ

# ಶ್ರೀರಾಮನ ಪೂರ್ವಜರ ವೃತ್ತಾಂತ

ಭೌರತದ ಎಲ್ಲಾ ಜನರಿಗೂ ಶ್ರೀರಾಮಚಂದ್ರನ ಕಥೆ ಅರ್ಥಾತ್ ರಾಮಾಯಣ ಗೊತ್ತಿದ್ದು, ಶ್ರೀರಾಮನ ತಂದೆ ಯಾರು? ಅಂದರೆ ದಶರಥ ಮಹಾರಾಜ ಎನ್ನುವುದುಂಟು. ದಶರಥನ ತಂದೆ ಯಾರು ಎಂದು ಕೇಳಿದರೆ ಬಹುಜನರಿಗೆ ಉತ್ತರ ಹೇಳಲು ಸಾಧ್ಯವಾಗುವುದೇ ಇಲ್ಲ. ಶ್ರೀರಾಮನ ಪೂರ್ವಜರ ಬಗ್ಗೆ ಅಷ್ಟಾಗಿ ಮಾಹಿತಿ ಇಲ್ಲದಿರುವುದರಿಂದ, ಇಕ್ಷ್ವಾಕು ವಂಶದ ವೃತ್ತಾಂತವನ್ನು ಇಲ್ಲಿ ಕೊಡಲಾಗಿದೆ.

✢ ವಿಷ್ಣುವಿನ ನಾಭಿಕಮಲದಿಂದ ಬ್ರಹ್ಮ ಹುಟ್ಟಿದ
✢ ಬ್ರಹ್ಮನಿಂದ ಮರೀಚಿಯ ಜನನ
✢ ಮರೀಚಿಯ ಮಗ ಕಾಶ್ಯಪ
✢ ಸೂರ್ಯ, ಕಾಶ್ಯಪನ ಮಗ
✢ ಮನು, ಸೂರ್ಯನ ಮಗ
✢ ಮನುವಿನ ಮಗ, ಇಕ್ಷ್ವಾಕು
✢ ಇಕ್ಷ್ವಾಕುವಿಗೆ ಕುಕ್ಷಿ ಎಂಬ ಮಗ
✢ ಕುಕ್ಷಿಯ ಮಗ ವಿಕುಕ್ಷಿ
✢ ವಿಕುಕ್ಷಿಯಿಂದ ಬಾಣನ ಜನನ
✢ ಬಾಣನ ಮಗ ಅನರಣ್ಯನೆಂಬುವನು
✢ ಅನರಣ್ಯನ ಮಗ ಪೃಥು
✢ ತ್ರಿಶಂಕು, ಪೃಥುವಿನ ಮಗ
✢ ತ್ರಿಶಂಕುವಿನ ಮಗ ಧಂಧುಮಾರ (ಯವನಾಶ್ವನೆಂಬ ಹೆಸರಿನಿಂದ ಈತ ಪ್ರಸಿದ್ಧ)
✢ ಯವನಾಶ್ವನ ಮಗ ಮಾಂಧಾತೃ
✢ ಮಾಂಧಾತೃವಿನ ಮಗ ಸುಸಂಧಿ ಎಂಬುವನು
✢ ಸುಸಂಧಿಯ ಮಗ ಧ್ರುವಸಂಧಿ (ಪ್ರಸೇನಜಿತ್ತು 2ನೇ ಮಗ)
✢ ಧ್ರುವಸಂಧಿಯ ಮಗ ಭರತ
✢ ಭರತನ ಮಗ ಅಸೀತ
✢ ಸಗರ ಅಸೀತನ ಮಗ
✢ ಅಸಮಂಜ ಎಂಬುವನು ಸಗರನ ಮಗ
✢ ಅಸಮಂಜನ ಮಗ ಅಂಶುಮಂತ
✢ ಅಂಶುಮಂತನ ಮಗ ದಿಲೀಪ
✢ ದಿಲೀಪನ ಮಗ ಭಗೀರಥ
✢ ಭಗೀರಥನ ಮಗ ಕಾಕುತ್ಸ
✢ ಕಾಕುತ್ಸನ ಮಗ ರಘು
✢ ರಘುವಿನ ಮಗ ಪ್ರವೃದ್ಧ (ಕಲ್ಮಷಪಾದನೆಂದು ಈತ ಪ್ರಸಿದ್ಧ)
✢ ಪ್ರವೃದ್ಧನ ಮಗ ಶಂಬಣ
✢ ಶಂಬಣನ ಮಗ ಸುದರ್ಶನ
✢ ಅಗ್ನಿವರ್ಣ ಸುದರ್ಶನನ ಮಗ
✢ ಅಗ್ನಿವರ್ಣನ ಮಗ ಶೀಘ್ರ
✢ ಶೀಘ್ರನ ಮಗ ಮರು

+ ಮರುವಿನ ಮಗ ಪ್ರಶುಶ್ರಕ
+ ಪ್ರಶುಶ್ರಕನ ಮಗ ಅಂಬರೀಶ
+ ಅಂಬರೀಶನ ಮಗ ನಹುಷ
+ ನಹುಷನ ಮಗ ಯಯಾತಿ
+ ಯಯಾತಿಯ ಮಗ ನಾಭಾಗ
+ ನಾಭಾಗನ ಮಗ ಅಜ
+ ಅಜನ ಮಗ ದಶರಥ
+ ದಶರಥನ ಮಕ್ಕಳು, ರಾಮ, ಲಕ್ಷ್ಮಣ, ಭರತ, ಶತ್ರುಘ್ನ

ಸಂಗ್ರಹ: ವಿಜಯ ಹೆಮ್ಮಿಗೆ

# ಧೂಳಿನ ಪ್ರಯೋಜನ

ಧೂಳು ಹಾನಿಕರ; ಅದರಿಂದ ನಮಗೆ ಉಪಯೋಗವಿಲ್ಲ ಎಂದು ಹೆಚ್ಚು ಜನ ಭಾವಿಸಿದ್ದಾರೆ. ಆದರೆ ಈ ಅಭಿಪ್ರಾಯ ಸರಿಯಲ್ಲ.

ಪ್ರತಿಯೊಂದು ಘನ ಪದಾರ್ಥದಲ್ಲೂ ಸಣ್ಣ ಸಣ್ಣ ಕಣಗಳಿವೆ. ಈ ಕಣಗಳು ಚದುರಿದಾಗ ಅವು ಧೂಳಿನ ಕಣಗಳಾಗುತ್ತವೆ. ಉದಾಹರಣೆಗೆ ನಾವು ಒಂದು ಇಟ್ಟಿಗೆ ಅಥವಾ ಕಲ್ಲನ್ನು ಒಡೆದಾಗ ಅವು ಚಿಕ್ಕ ಕಣಗಳಾಗಿ ಮಾರ್ಪಡುತ್ತವೆ. ಈ ಕಣಗಳನ್ನು ಗಾಳಿ ಒಯ್ಯುತ್ತದೆ. ಇವನ್ನು ಸಾಮಾನ್ಯವಾಗಿ ನಾವು ಧೂಳಿನ ಕಣಗಳೆನ್ನುತ್ತೇವೆ. ಧೂಳಿನ ಉತ್ಪತ್ತಿಗೆ ಇನ್ನೂ ಕಾರಣಗಳಿವೆ. ಕಲ್ಲಿದ್ದಲು, ಕಟ್ಟಿಗೆ, ಪೆಟ್ರೋಲ್ ಇತ್ಯಾದಿಗಳು ಉರಿದಾಗಲೂ ಧೂಳು ಉಂಟಾಗುತ್ತದೆ. ಒಣಗಿಡಗಳು, ಸತ್ತ ಪ್ರಾಣಿಗಳ ಅವಶೇಷಗಳು, ಸಮುದ್ರದ ಉಪ್ಪು, ಮರುಭೂಮಿ, ಜ್ವಾಲಾಮುಖಿ ಇತ್ಯಾದಿಗಳಿಂದಲೂ ಧೂಳು ಬರುತ್ತದೆ.

ಆದರೆ ಧೂಳಿನ ಕಣಗಳಿಂದಾಗುವ ದೊಡ್ಡ ಪ್ರಯೋಜನಗಳು ಗೊತ್ತೆ?

ಮೋಡದ ನೀರಾವಿ ಧೂಳಿನ ಕಣಗಳೊಂದಿಗೆ ಸೇರಿ ಮಳೆ ಹನಿ ರೂಪದಲ್ಲಿ ಬೀಳುತ್ತದೆ. ಈ ಕಣಗಳಿಲ್ಲದೆ ಆವಿ ಹನಿಗಳಾಗಿ ಮಾರ್ಪಡುವುದು ಕಷ್ಟ. ನಮ್ಮ ವಾತಾವರಣದಲ್ಲಿರುವ ಧೂಳಿನ ಕಣಗಳು ಸೂರ್ಯನ ಕಿರಣಗಳನ್ನು ಎಲ್ಲಾ ದಿಕ್ಕಿಗೂ ಪಸರಿಸುವುದರಿಂದ ಸೂರ್ಯ ಅಸ್ತಮಿಸಿದ ಒಂದೆರಡು ಗಂಟೆಗಳವರೆಗೆ ಪೂರ್ಣ ಕತ್ತಲಾಗುವುದಿಲ್ಲ. ಮಂಜು, ಹಿಮಗಳೂ ಧೂಳಿನ ಕಣಗಳಿಂದುಂಟಾಗುತ್ತವೆ.

(ಆಧಾರ)

● ಚಂದ್ರು, ಹೊಳಲ್ಕೆರೆ

# ಸುಪ್ರಸಿದ್ಧವಾದ ಭೂಗೋಳ ಪತ್ರಿಕೆ

ಅಮೆರಿಕದ ನ್ಯಾಷನಲ್ ಜಿಯಾಗ್ರಾಫಿಕಲ್ ಸೊಸೈಟಿಯವರು ಮಾನವಾಭ್ಯುದಯವನ್ನು ಗಮನದಲ್ಲಿರಿಸಿಕೊಂಡು ನೆಲದ ಮೇಲೆ, ನೀರಿನ ಒಳಗೆ ವಾಸಿಸುವ ಲಕ್ಷಾಂತರ ಜೀವಿಗಳ ಬಗ್ಗೆ ಅನೇಕ




ಸಂಶೋಧನೆಗಳನ್ನು ನಡೆಸಿ ಅದರಿಂದ ಹೊರಹೊಮ್ಮಿದ ಅನೇಕ ವಿಷಯಗಳನ್ನು ಜಗತ್ತಿಗೆ ತಿಳಿಸಿದ್ದಾರೆ.

೧೮೮೮ರಲ್ಲಿ ಈ ಸೊಸೈಟಿಯು "ದಿ ನ್ಯಾಷನಲ್ ಜಿಯಾಗ್ರಾಫಿಕ್ ಡಿಪೋಟ್" ಎನ್ನುವ ಪತ್ರಿಕೆಯನ್ನು ಪ್ರಾರಂಭಿಸಿ, ಮಾನವನ ಪುರೋಭಿವೃದ್ಧಿಗಾಗಿ ಬಹಳಷ್ಟು ಲೇಖನಗಳನ್ನು ಸುಂದರವಾದ ಚಿತ್ರಗಳೊಡನೆ ಪ್ರಕಟಿಸಲು ಪ್ರಾರಂಭಿಸಿತು. ಮೊದಮೊದಲು ಯಾವ ಜಾಹೀರಾತನ್ನೂ ಪ್ರಕಟಿಸಲೊಪ್ಪದ ಪತ್ರಿಕೆ ಈಗ ಒಂದೆರಡು ಪ್ರಕಟಣೆಗಳನ್ನು- ಅದರಲ್ಲೂ ಜನರಿಗೆ ಉಪಯುಕ್ತವಾದ ವಸ್ತುಗಳಿಗೆ ಸಂಬಂಧಿಸಿದ ಜಾಹೀರಾತುಗಳನ್ನು- ಮಾತ್ರ ಸ್ವೀಕರಿಸುತ್ತದೆ.

ವಿವಿಧ ವಿಷಯಗಳಲ್ಲಿ ಪಾಂಡಿತ್ಯ ಗಳಿಸಿದ ಮೂವತ್ತೆದು ಮಂದಿ ವಿದ್ವಾಂಸರು ಈ ಪತ್ರಿಕೆಯನ್ನು ಪ್ರಾರಂಭಿಸಿದರು. ಮೊದಲ ಹತ್ತು ವರ್ಷಗಳಲ್ಲಿ ಪತ್ರಿಕೆಯ ಮಾರಾಟ ಒಂದು ಸಾವಿರವನ್ನೂ ಮೀರಿರಲಿಲ್ಲ. ಟೆಲಿಫೋನನ್ನು ಕಂಡುಹಿಡಿದ ಗ್ರಹಾಂ ಬೆಲ್ ಈ ಪತ್ರಿಕೆಯ ಅಧ್ಯಕ್ಷರಾಗಿದ್ದರು. ಗಿಲ್ಬರ್ಟ್ ಗ್ರೂಸ್ ಎಂಬಾತ ಈ ಪತ್ರಿಕೆಯ ಮೊದಲ ಸಂಪಾದಕನಾಗಿ ಕೆಲಸ ಮಾಡಿದ. ಅದಕ್ಕಿಂತ ಮೊದಲು ಆತ ಉಪಾಧ್ಯಾಯನಾಗಿದ್ದ. ಗ್ರಹಾಂ ಹಾಗೂ ಗ್ರೂಸರ ನೇತೃತ್ವದಲ್ಲಿ ಪತ್ರಿಕೆ ಬಹಳಷ್ಟು ಬದಲಾವಣೆಗಳನ್ನು ಕಂಡಿತು. ಮುಖ್ಯ

ವಾಗಿ ಅವರು ಪತ್ರಿಕೆಯನ್ನು ಬಣ್ಣ ಬಣ್ಣದ ಸಚಿತ್ರ ಪತ್ರಿಕೆಯನ್ನಾಗಿ ಮಾರ್ಪಡಿಸಿದರು. ಪ್ರಪಂಚದಲ್ಲಿನ ಪ್ರೇಕ್ಷಣೀಯ ಸ್ಥಳಗಳ ಬಗೆಗೆ ವಿವರಣೆ ಸಹಿತ ಚಿತ್ರಗಳೊಂದಿಗೆ ಪತ್ರಿಕೆ ಪ್ರಕಟವಾಗತೊಡಗಿದ ನಂತರ ಜಗತ್ತಿನ ತುಂಬಾ ಜನಪ್ರಿಯತೆ ಗಳಿಸಿತು.

ಈಗ ಪತ್ರಿಕೆಯ ಚಂದಾದಾರರ ಸಂಖ್ಯೆ ಒಂದು ಕೋಟಿ ನಲವತ್ತು ಲಕ್ಷಗಳನ್ನು ಮುಟ್ಟಿದೆ. ಈ ಪತ್ರಿಕೆಯಲ್ಲಿ ಸಾವಿರಾರು ಮಂದಿ ಕೆಲಸ ಮಾಡುತ್ತಿದ್ದಾರೆ. ಪತ್ರಿಕೆಯ ವಾರ್ಷಿಕ ಆದಾಯ ೪೨೫ ಕೋಟಿ ಡಾಲರುಗಳಷ್ಟು. ಪ್ರಾರಂಭದಲ್ಲಿ ಎರಡು ಕೊಠಡಿಗಳಿಗೆ ಸೀಮಿತವಾಗಿದ್ದ ಪತ್ರಿಕೆಯ ಕಾರ್ಯ ಈಗ ಅನೇಕ ಬೃಹತ್ ಕಟ್ಟಡಗಳಿಗೆ ವಿಸ್ತರಿಸಿದೆ.

ಗ್ರೂಸ್‌ನ ಮೊಮ್ಮಗ ಕಾರಟ್. ಈಗ ಪತ್ರಿಕೆಯ ಪ್ರಧಾನ ಸಂಪಾದಕ. ಈ ಪತ್ರಿಕೆಯ ಸಂಪಾದಕರು ಹಾಗೂ ಛಾಯಾಚಿತ್ರಗಾರರು ಪ್ರಪಂಚದ ಮೂಲೆ ಮೂಲೆಗಳನ್ನು ಸುತ್ತಿ ಅಲ್ಲಿ ತಾವು ಕಂಡ ಜನ, ಅವರ ಜೀವನ ವಿಧಾನ, ಅಲ್ಲಿನ ವಾತಾವರಣ, ಪ್ರಕೃತಿ ವೈಶಿಷ್ಟ್ಯ ಮೊದಲಾದವುಗಳನ್ನು ಸಂಗ್ರಹಿಸಿ, ಸುಂದರವಾದ ಫೋಟೋಗಳ ಸಮೇತ ಪ್ರಕಟಿಸುತ್ತಾರೆ.

ಈ ಪತ್ರಿಕೆಯ ಛಾಯಾಚಿತ್ರ ಗ್ರಾಹಕರು ಜಗತ್ತಿನ ವಿವಿಧ ಪ್ರದೇಶಗಳಿಂದ ಅಲ್ಲಿನ ವೈಶಿಷ್ಟ್ಯಪೂರ್ಣವಾದ ವಿಷಯಗಳಿಗೆ ಸಂಬಂಧಿಸಿದಂತೆ ಛಾಯಾಚಿತ್ರಗಳನ್ನು ತೆಗೆದು ಕಾಲ ಕಾಲಕ್ಕೆ ಪತ್ರಿಕಾಲಯಕ್ಕೆ ಕಳುಹಿಸುತ್ತಿರುತ್ತಾರೆ. 'ದಿ ನ್ಯಾಷನಲ್ ಜಿಯಾಗ್ರಾಫಿಕ್' ಪತ್ರಿಕೆ ಪ್ರತಿವರ್ಷ ಅರವತ್ತು ಸಾವಿರ ವರ್ಣ ಪಾರದರ್ಶಿಕೆಗಳ ರೋಲ್‌ಗಳನ್ನು ಅವರಿಂದ

(ಆಂಧ್ರಜ್ಯೋತಿ ವಾರಪತ್ರಿಕೆಯ ೨೪-೫-೯೬ರ ಸಂಚಿಕೆಯಲ್ಲಿ ಪ್ರಕಟವಾದ ತೆಲುಗು ಲೇಖನದ ಕನ್ನಡ ಅನುವಾದ.)

## ಲಕ್ಷದ್ವೀಪದ ಹೆಸರು ಹೇಗೆ ಬಂತು?

ಇಪ್ಪತ್ತೇಳು ದ್ವೀಪಗಳನ್ನೊಳಗೊಂಡಿರುವ ದ್ವೀಪ ಸಮೂಹವನ್ನು ಲಕ್ಷ ದ್ವೀಪ ಎಂದು ಕರೆಯುವುದರ ಕಾರಣವೇನು ಗೊತ್ತೆ?

೧೬ನೇ ಶತಮಾನದಲ್ಲಿ ಇದು ಪೋರ್ಚುಗೀಸರ ಹಿಡಿತದಲ್ಲಿತ್ತು. ಬಳಿಕ ಅದನ್ನು ಮಾಪಿಳ್ಳೆ ಅಲಿರಾಜಾರವರು ವಶಪಡಿಸಿಕೊಂಡರು. ೧೮ನೇ ಶತಕದಲ್ಲಿ ಈಸ್ಟ್ ಇಂಡಿಯಾ ಕಂಪೆನಿ ತನ್ನ ತೆಕ್ಕೆಗೆ ಅದನ್ನು ತೆಗೆದುಕೊಂಡಿತು. ಬಳಿಕ ಕಂಪೆನಿ ಅಲಿರಾಜಾಗೆ ಒಂದು ಲಕ್ಷ ರೂಪಾಯಿಗೆ ಮಾರಿತು. ಈ ಕಾರಣದಿಂದಲೇ ಜನ ಆ ದ್ವೀಪ ಸಮೂಹವನ್ನು ಲಕ್ಷ ದ್ವೀಪವೆಂದು ಕರೆದರು.

❀ ಕುಕನೂರ ಹನುಮಂತಭಟ್ ಬಿ.



ಕೊಳ್ಳುತ್ತದೆ.

೧೯೭೭ರಲ್ಲಿ ಜಂಬೋಜೆಟ್ ವಿಮಾನದ ಬಾಲದ ಭಾಗಕ್ಕೆ ಒಂದು ಕ್ಯಾಮರಾ ಜೋಡಿಸಿ, ಅದರ ಸಹಾಯದಿಂದ ಅಂತರಿಕ್ಷಕ್ಕೆ ಸಂಬಂಧಿಸಿದ ಅನೇಕ ಮಾಹಿತಿಯುಕ್ತ ಫೋಟೋಗಳನ್ನು ಪತ್ರಿಕೆಯಲ್ಲಿ ಪ್ರಕಟಿಸಿತು.

ಮುಖ್ಯ ಸಂಪಾದಕರ ಕೋಣೆಯಲ್ಲಿ ೨ ಮೀಟರುಗಳಷ್ಟು ಉದ್ದವಾದ ಒಂದು ಬೋರ್ಡಿದೆ. ಆ ಬೋರ್ಡ್ ಮೇಲೆ ಮುಂದಿನ ಸಂಚಿಕೆಗಳಲ್ಲಿ ಪ್ರಕಟವಾಗುವ ಇನ್ನೂರು ಲೇಖನಗಳ ವಿಷಯಗಳನ್ನು ಬರೆಯಲಾಗಿರುತ್ತದೆ. ಆ ಲೇಖನಗಳನ್ನು ಕುರಿತು ಆಡಳಿತ ಮಂಡಳಿಯ ಸದಸ್ಯರು, ಸಂಪಾದಕರು, ಉಪಸಂಪಾದಕರು ಹಾಗೂ ಸಲಹೆಗಾರರು ಕೂಲಂಕೂಷವಾಗಿ ಚರ್ಚಿಸಿ ಪ್ರಕಟಣೆ ಬಗ್ಗೆ ತೀರ್ಮಾನ ಕೈಗೊಳ್ಳುತ್ತಾರೆ.

ಇಷ್ಟಾದರೂ ಅಂತಿಮ ತೀರ್ಮಾನ ನ್ಯಾಷನಲ್ ಜಿಯಾಗ್ರಾಫಿಕ್ ಮ್ಯಾಗಜೈನಿನ ಪ್ರಧಾನ ಸಂಪಾದಕರದ್ದು.

✷ ಶಾರದಾತನಯ

## ಅತಿ ದೊಡ್ಡ ಲಾಡು

**ಮ**ದ್ರಾಸಿನಲ್ಲಿಯ ವಿ.ಜಿ.ಪಿ. ಗ್ರೂಪ್‌ನ ಛೇರ್ಮನ್, ದೀಪಾವಳಿಗಾಗಿ ಬೃಹತ್ ಗಾತ್ರದ ಲಾಡು ತಯಾರಿಸಲು ಆದೇಶ ನೀಡಿದರು. ಅದರ ವ್ಯಾಸ ೧.೮೯ ಮೀ. (೬ ಅಡಿ) ಮತ್ತು ತೂಕ ೩.೫ ಟನ್ ಇತ್ತು. ಅದನ್ನು ತಯಾರಿಸಲು ೩೫ ಜನ ಅಡಿಗೆಯವರು ದುಡಿದರು. ಅದಕ್ಕೆ ಖರ್ಚಾದ ಸರಕು ೩,೦೦೦ ಕೆ.ಜಿ. ಸಕ್ಕರೆ, ೮೦೦ ಕೆ.ಜಿ. ಹಿಟ್ಟು, ೩೦೦ ಕೆಜಿ ಎಣ್ಣೆ, ತಲಾ ೫೦ ಗ್ರಾಂನಂತೆ ೫೦,೦೦೦ ಜನರಿಗೆ ಹಂಚಲು ಬರುವಷ್ಟು ದೊಡ್ಡದಾಗಿತ್ತು ಆ ಲಾಡು!

✷ ವಿಜಯ ಎಸ್. ಅಂಟಿನ

## ಫೋಟೋ ಕಾಪಿಯರ್

ಒಂದು ಕಾಲದಲ್ಲಿ ಫೋಟೋ ಕಾಪಿಯರ್ ಅಪರೂಪದ ವಸ್ತುವಾಗಿತ್ತು. ಈಗ ಸಣ್ಣಸಣ್ಣ ಗ್ರಾಮಗಳಿಗೂ ಕೂಡ ಜೆರಾಕ್ಸ್ ಯಂತ್ರಗಳು ಬಂದುಬಿಟ್ಟವೆ. ಮೊದಲು ಇದ್ದುದಿದ್ದಂತೆ ಕಾಪಿ ಮಾಡುವ ಯಂತ್ರಗಳು ಬಂದವು. ಆ ಮೇಲೆ ನಮಗೆ ಎಷ್ಟು ದೊಡ್ಡದು ಬೇಕೋ ಅಷ್ಟು ದೊಡ್ಡದು ಇಲ್ಲವೆ ಸಣ್ಣದಾಗಿ ಮಾಡಲು ಕೂಡ ಸಾಧ್ಯವಾಗುವ ಹಾಗೆ ವ್ಯವಸ್ಥೆ ಇರುವ ಜೆರಾಕ್ಸ್ ಯಂತ್ರಗಳು ಬಂದವು.

ಈ ಮಧ್ಯೆ ಕಲರ್ ಫೋಟೋ ಕಾಗದವನ್ನು ಕೂಡ ಇದ್ದ ಹಾಗೇ ಜೆರಾಕ್ಸ್ ಮಾಡುವ ಯಂತ್ರಗಳೂ ಪೇಟೆಗೆ ಬಂದಿವೆ. ಹೊಸದಾಗಿ ಬಂದ ಕಾಪಿಯರ್, ಪುಸ್ತಕದ ಪುಟಗಳನ್ನು ಕೂಡ ತನ್ನಷ್ಟಕ್ಕೆ ತಾನೆ ಯಾಂತ್ರಿಕವಾಗಿ ತಿರುಗಿಸಿಕೊಳ್ಳುತ್ತದೆ.

'ರಿಕೊ' ಎಂಬ ಅಮೆರಿಕದ ಸಂಸ್ಥೆ ಇದನ್ನು ರೂಪಿಸಿದೆ. ಈ ಜೆರಾಕ್ಸ್ ಯಂತ್ರದಲ್ಲಿ ಸ್ಕ್ಯಾನರ್ ಕೆಳಗೆ ಪುಸ್ತಕವನ್ನಿಟ್ಟರೆ ಎರಡನೇ ಪುಟದ ಕೊನೆಗೆ ಸ್ಥಿರ ವಿದ್ಯುತ್ ಸೂತ್ರದ ಅನುಗುಣವಾಗಿ ಕೆಲಸ ಮಾಡುವ ಒಂದು ಸಣ್ಣ ಬೆಲ್ಟು ತಿರುಗಲಾರಂಭಿಸುತ್ತದೆ. ಮೊದಲ ಎರಡು ಪುಟಗಳು ಸ್ಕ್ಯಾನಿಂಗ್ ಆದ ಕೂಡಲೆ ಈ ಬೆಲ್ಟು ಯಾಂತ್ರಿಕವಾಗಿ ಪುಟಗಳನ್ನು ತಿರುವುತ್ತದೆ. ಹೀಗೆ ಒಂದು ಪುಸ್ತಕವನ್ನು ಈ ಯಂತ್ರದಲ್ಲಿ ಸರಿಯಾಗಿ ಮೊದಲು ಹೊಂದಿಸಿಬಿಟ್ಟರೆ, ಸ್ವಲ್ಪ ಹೊತ್ತಿಗೆಲ್ಲ ನಮ್ಮ ಪ್ರಯತ್ನದ ಅವಶ್ಯಕತೆ ಇಲ್ಲದೆ ಇಡಿ ಪುಸ್ತಕವನ್ನು ಜೆರಾಕ್ಸ್ ಮಾಡಿ ಬಿಡುತ್ತದೆ. ಆದರೆ ಈ ಯಂತ್ರದ ಬೆಲೆ ಒಂಭತ್ತು ಸಾವಿರ ಡಾಲರಿಗಿಂತ ಹೆಚ್ಚೇ ಇರುವುದರಿಂದ ಇದರ ಬೆಲೆ ತಗ್ಗಿಸಲು ಇನ್ನೂ ಕೆಲವು ಪರಿಶೋಧನೆಗಳನ್ನು ನಡೆಸುತ್ತಿದೆ ಈ ಸಂಸ್ಥೆ.

✷ ಸಂಗ್ರಹ: ಕೆ.ಬಿ. ಬೊಮ್ಮನಾಳ

# ನಿಮ್ಮ ಶಬ್ದಭಾಂಡಾರ ಬೆಳೆಯಲಿ

ಶಬ್ದಭಾಂಡಾರವು ಹಣದ ಭಾಂಡಾರಕ್ಕಿಂತಲೂ ಅಮೂಲ್ಯವಾಗಿದೆ. ಇಲ್ಲಿ ಪ್ರತಿ ತಿಂಗಳು ಕೆಲವು ಶಬ್ದಗಳನ್ನು ಪರಿಚಯ ಮಾಡಿಕೊಡಲಾಗುವುದು. ಆಯಾ ಶಬ್ದದ ಮುಂದೆ ನಾಲ್ಕು ಅರ್ಥಗಳನ್ನು ಕೊಟ್ಟದ್ದು, ಅವುಗಳಲ್ಲಿ ಒಂದು ಮಾತ್ರ ಸರಿಯಾಗಿರುತ್ತದೆ. ನಿಮಗೆ ಸರಿಯೆನಿಸಿದ ಅರ್ಥವನ್ನು ಮೊದಲು ಆರಿಸಿಕೊಳ್ಳಿರಿ. ಆ ಮೇಲೆ ಇದರ ಬೆನ್ನಿನ ಪುಟ ನೋಡಿರಿ. ಅಲ್ಲಿ ಸರಿಯಾಗಿ ಅರ್ಥಗಳನ್ನು ವಿವರಿಸಿದೆ.

೧) ಸೂತ್ರಪಾತ
- (ಅ) ಉಪನಯನ
- (ಆ) ಪರದೆ ಎಳೆಯುವವ
- (ಇ) ಪ್ರಾರಂಭ
- (ಈ) ದರ್ಜಿ

೨) ಏಕಸೂತ್ರತೆ
- (ಅ) ಒಂದು ಮಂತ್ರ
- (ಆ) ಬ್ರಹ್ಮಚಾರಿ
- (ಇ) ಮಾಡಿದ್ದನ್ನೇ ಮಾಡುವುದು
- (ಈ) ವ್ಯವಸ್ಥಿತವಾದ ಜೋಡಣೆ

೩) ಮಹಾಪೂರ
- (ಅ) ಭಾರಿ ನೆರೆ
- (ಆ) ಬಿಟ್ಟೂ ಬಿಡದೆ
- (ಇ) ದೊಡ್ಡ ಊರು
- (ಈ) ಭೂರಿ ಭೋಜನ

೪) ಪುಂಜೀಭೂತ
- (ಅ) ಹುಂಜಗಳ ಕೂಟ
- (ಆ) ರಾಶಿ ಕೂಡಿದ
- (ಇ) ಒಂದು ದೆವ್ವ
- (ಈ) ಲೂಟಿಗಾರ

೫) ಅನಾಹೂತ
- (ಅ) ಕರೆಯದೆ ಬಂದ
- (ಆ) ಅಪಘಾತ
- (ಇ) ನಿಶಬ್ದ
- (ಈ) ಪ್ರತಿಬಂಧವಿಲ್ಲದ

೬) ಸಂಭೂತ
- (ಅ) ಧರಿಸಲ್ಪಟ್ಟ
- (ಆ) ಜರಗಿದ
- (ಇ) ಉಂಟಾದ
- (ಈ) ಭ್ರಾಂತನಾದವ

೭) ತರಾತುರಿ
- (ಅ) ಬಗೆಬಗೆಯ
- (ಆ) ಪುಡಿಪುಡಿ ಮಾಡು
- (ಇ) ಕಜ್ಜಿ
- (ಈ) ಅವಸರ

೮) ಆಪಾದಮಸ್ತಕ
- (ಅ) ಪಾದದಿಂದ ತಲೆಯತನಕ
- (ಆ) ರುಂಡಮುಂಡ ಬೇರೆಯಾದ
- (ಇ) ಬೀಳು ಬಿಟ್ಟ ಮರ
- (ಈ) ಹಳೇ ಗ್ರಂಥ

೯) ಆಚಂದ್ರಾರ್ಕ
- (ಅ) ಚಂದ್ರನ ಮೇಲಿನ ಕಲೆ
- (ಆ) ಇಂದುಮುಖಿ
- (ಇ) ಸೃಷ್ಟಿಯ ಮೊದಲು
- (ಈ) ಸೂರ್ಯ-ಚಂದ್ರರಿರುವ ತನಕ

೧೦) ಪ್ರೇಮ ಭಾಜನ
- (ಅ) ಹೃದಯ
- (ಆ) ಮಂಗಳವಾದ್ಯ
- (ಇ) ಉಡುಗೊರೆ
- (ಈ) ಪ್ರೇಮಪಾತ್ರ

೧೧) ಸಿಂಹಸ್ವಪ್ನ
- (ಅ) ಧೀರ ಧೋರಣೆ
- (ಆ) ಗಂಭೀರ ಹಿನ್ನೋಟ
- (ಇ) ಭಯಜನಕ
- (ಈ) ಹಗಲುಗನಸು

೧೨) ನಿರಾಕುಲ
- (ಅ) ಕೀಳು ಕುಲದವ
- (ಆ) ನೀರು ನಿಂತ
- (ಇ) ತಿರಸ್ಕೃತ
- (ಈ) ತೊಂದರೆಯಿಲ್ಲದ

ಹಲವಾರು ವರ್ಷಗಳಿಂದ ಇಂಜನಿಯರರು ಅದಕ್ಕೆ ಕಾರಣಗಳನ್ನು ಅರಿಯಲು ಪ್ರಯತ್ನಪಡುತ್ತಾ, ನಾನಾ ಪರಿಹಾರಗಳನ್ನು ಕಂಡುಕೊಂಡು ಸಮಸ್ಯೆಯನ್ನು ಎದುರಿಸುತ್ತಲೇ ಬಂದಿದ್ದಾರೆ. ಈ ಕ್ಷಯಕ್ಕೆ ಒಳಗಾದ ಕಟ್ಟಡಗಳು- ಅದರಲ್ಲೂ ಮುಖ್ಯವಾಗಿ ಸೇತುವೆಗಳ ಹಾಗೂ ಕಾರ್ಖಾನೆಗಳ-ದುರಸ್ತಿಗಾಗಿ ಪ್ರತಿವರ್ಷವೂ ಅಪಾರ ಹಣ ವ್ಯಯವಾಗುತ್ತಿದೆ. ಆದರೂ ಈ ಅಪಾಯದಿಂದ ಪೂರ್ಣವಾಗಿ ಮುಕ್ತವಾಗಲು ಸಾಧ್ಯವಾಗಿಲ್ಲ.

ಹಾಗಾದರೆ ಕಾಂಕ್ರೀಟಿನ ಕ್ಷಯ ಎಂದರೇನು?

## ಕ್ಷಯ

ನಮ್ಮ ಸುತ್ತಮುತ್ತಲಿರುವ ಕಾಂಕ್ರೀಟಿನ ಕಟ್ಟಡಗಳನ್ನು ಸೂಕ್ಷ್ಮವಾಗಿ ಗಮನಿಸಿದರೆ, ಕೆಳಕಂಡವು ಕಾಣಸಿಗುವವು.

* ಕೆಲವು ಕಂಬಗಳ ತೊಲೆಗಳ ಮೂಲೆಗಳಲ್ಲಿ ಬಿರುಕು.
* ಕೆಲವು ಕಂಬಗಳ, ತೊಲೆಗಳ ಮೂಲೆಗಳು ಬಿರಿದು, ಬಿದ್ದುಹೋಗಿ, ತುಕ್ಕು ಹಿಡಿದು ಕ್ಷಯಿಸಿದ ಸರಳು ಕಾಣುವುದು.
* ಚಜ್ಜಾಗಳ ತಳಭಾಗದಲ್ಲಿ ಸರಳುಗಳಿಗೆ ನೇರವಾಗಿ ಕಾಂಕ್ರೀಟು ಬಿರಿದು, ತುಕ್ಕುಹಿಡಿದು ಕ್ಷಯಿಸಿದ ಸರಳುಗಳು ಕಾಣಸಿಗುವುದು.
* ಚಪ್ಪಡಿ (ಸ್ಲಾಬ್)ಗಳ ತಳಭಾಗದಲ್ಲಿ ಸರಳುಗಳಿಗೆ ನೇರವಾಗಿ ಕಾಂಕ್ರೀಟು ಬಿರಿದು ತುಕ್ಕು ಹಿಡಿದು ಕ್ಷಯಿಸಿದ ಸರಳುಗಳು ಕಾಣುವುದು.
* ಕಾಂಕ್ರೀಟಿನ ಕಂಬ, ತೊಲೆಗಳ ಮೇಲ್ಮೈಗಳಲ್ಲಿ ಅಲ್ಲಲ್ಲಿ ತುಕ್ಕಿನ ಕಲೆಗಳು ಕಾಣುವುದು.

ಪ್ರಬಲನಗಳು ಕ್ಷಯಿಸುತ್ತಿರುವುದಕ್ಕೆ ಸೂಚನೆಗಳು ಇವು. ವಾಸಿಸಲು ಕಟ್ಟಿಕೊಂಡ ಕಟ್ಟಡಗಳಲ್ಲಿ ಇದರಿಂದ ತತ್‌ಕ್ಷಣದಲ್ಲಿ ಆತಂಕದ ಪರಿಸ್ಥಿತಿಯೇನೂ ಉಂಟಾಗುವುದಿಲ್ಲ. ಆದರೆ ಹೆಚ್ಚು ಜನರಿಂದ ಉಪಯೋಗಿಸಲ್ಪಡುವ ಬಹುಮಹಡಿ ಸೌಧಗಳು, ಸಾರ್ವಜನಿಕ ಕಟ್ಟಡಗಳಾದ ಶಾಲೆ, ಕಾಲೇಜುಗಳು, ಕಾರ್ಖಾನೆ, ಸೇತುವೆ ಕ್ರೀಡಾಂಗಣ ಮುಂತಾದವುಗಳಲ್ಲಿ, ಸಾಗರ, ರಾಸಾಯನಿಕ ಕಾರ್ಖಾನೆಗಳ ಪರಿಸರವಿರುವಲ್ಲಿ, ಸಕಾಲದಲ್ಲಿ ದುರಸ್ತಿಯ ಕ್ರಮಗಳನ್ನು ಕೈಗೊಳ್ಳದಿದ್ದರೆ, ಮುಂದೆ ಒದಗಬಹುದಾದ ಅನಾಹುತ ಬಹು ಭೀಕರ.

ಹೀಗಾಗದಿರಲು ನಿರ್ಮಾಣದ ಹಂತದಲ್ಲೇ ಮುಂಜಾಗ್ರತೆಯ ಕ್ರಮಗಳನ್ನು ಕೈಗೊಳ್ಳುವುದು ಜಾಣತನ. ಇದರ ಬಗ್ಗೆ ಸ್ಥೂಲವಾಗಿ ತಿಳಿಸುವುದು ಈ ಲೇಖನದ ಉದ್ದೇಶ.

## ಬಿರುಕು

ಕಾಂಕ್ರೀಟಿನಲ್ಲಿ ಬಿರುಕು ಹೇಗೆ ಉಂಟಾಗುತ್ತದೆ? ಕಾಂಕ್ರೀಟಿನ ಒಳಗಿರುವ ಸರಳಿಗೆ (ಪ್ರಬಲನಗಳು)ತುಕ್ಕು ಹಿಡಿದಾಗ, ಅದರ ಗಾತ್ರ ಹೆಚ್ಚುತ್ತದೆ. ಈ ಹಿಗ್ಗುವಿಕೆಯಿಂದ ಕಾಂಕ್ರೀಟಿನಲ್ಲಿ ಬಿರುಕುಬಿಡುವುದು. ಈ ಪರಿಸ್ಥಿತಿಯಲ್ಲಿ ಪ್ರಬಲನಗಳಿಗೆ ಕೂಡ ತಾವು ನಿರ್ವಹಿಸಬೇಕಾದ ಕಾರ್ಯವನ್ನು ನಿರ್ವಹಿಸಲು ಸಾಧ್ಯವಾಗುವುದಿಲ್ಲ. ಹೀಗಾಗಿ, ಕಟ್ಟಡಕ್ಕೆ ಅಪಾಯ ಉಂಟಾಗುತ್ತದೆ.

ಉಕ್ಕಿನ ಸರಳು ಏಕೆ ತುಕ್ಕು ಹಿಡಿಯುತ್ತದೆ? ಸ್ಥೂಲವಾಗಿ ಹೇಳುವುದಾದರೆ, ವಾತಾವರಣದ ತೇವ ಹಾಗೂ ಆಮ್ಲೀಯ ಅಂಶಗಳೊಂದಿಗೆ ಸಂಪರ್ಕ ಉಂಟಾದಾಗ ತುಕ್ಕು ಹಿಡಿಯುತ್ತದೆ.

ಹಾಗಾದರೆ ಕಾಂಕ್ರೀಟಿನಲ್ಲಿ ಹುದುಗಿರುವಾಗ ಅದು ಹೇಗೆ ಸರಳುಗಳು ಈ ರೀತಿ ಸಂಪರ್ಕದಲ್ಲಿ ಬರುತ್ತವೆ? ಎಂದು ನೀವು ಕೇಳಬಹುದು. ಬಹು ಮುಖ್ಯವಾದ ಪ್ರಶ್ನೆಗಳಿಗೆ ಮಿಲಿಯನ್ ಡಾಲರ್ ಪ್ರಶ್ನೆ ಎನ್ನುತ್ತಾರೆ. ಇದು ಅಂತಹುದೇ ಒಂದು ಪ್ರಶ್ನೆ. ಈ ಪ್ರಶ್ನೆಗೆ ಮಿಲಿಯನ್ ಡಾಲರು ಬಹುಮಾನವೆಂದೂ ದೊರೆಯುವುದಿಲ್ಲ ನಿಜ. ಆದರೆ ಈ ಪ್ರಶ್ನೆಗೆ ಸಂಬಂಧಿಸಿದ ಸಮಸ್ಯೆಯಿಂದ ಲಕ್ಷಾಂತರ ರೂಪಾಯಿಗಳಷ್ಟು ಹಣ ಕಾಂಕ್ರೀಟಿನ ಕಟ್ಟಡಗಳ ದುರಸ್ತಿಗಾಗಿ ವ್ಯವವಾಗುತ್ತದೆ.

ನೋಡಿ, ಕಾಂಕ್ರೀಟು ಬಹು ಜನಪ್ರಿಯ ನಿರ್ಮಾಣ ಸಾಮಗ್ರಿಯಾಗಿರುವುದಕ್ಕೆ ಕಾರಣ ಅದನ್ನು ನಮ್ಮ ಸುತ್ತಮುತ್ತ ಧಾರಾಳವಾಗಿ ದೊರೆಯುವ ಜಲ್ಲಿ, ಮರಳು, ನೀರು ಇವುಗಳನ್ನು ಸಿಮೆಂಟಿನೊಂದಿಗೆ ಬೆರೆಸಿ, ಸುಲಭವಾಗಿ ತಯಾ

ರಿಸಬಹುದು ಎನ್ನುವುದು. ಅಲ್ಲದೆ, ಕಾಂಕ್ರೀಟಿನಿಂದ ನಮಗೆ ಬೇಕಾದ ರೂಪ, ಆಕಾರಗಳನ್ನು ಹೆಚ್ಚಿನ ಪರಿಶ್ರಮವಿಲ್ಲದೆ ಪಡೆಯಬಹುದು. ಕಾಂಕ್ರೀಟಿನ ಕಟ್ಟಡಗಳನ್ನು ಯಾರು ಬೇಕಾದರೂ ನಿರ್ಮಿಸಬಹುದು ಎನ್ನುವಷ್ಟರ ಮಟ್ಟಿಗೆ ಅಭಿಪ್ರಾಯವು ಜನಜನಿತವಾಗಿದೆ. ಪರಿಸ್ಥಿತಿ ಹಾಗಿದೆ ಕೂಡ. ಇದರಿಂದಲೇ ಈಗ ಬಂದಿದೆ ಸಿವಿಲ್ ಇಂಜಿನಿಯರುಗಳಿಗೆ ಪೇಚು.

ಕಾಂಕ್ರೀಟಿನಲ್ಲಿ ಹುದುಗಿರುವ ಉಕ್ಕಿನ ಸರಳುಗಳು ಹೇಗೆ ಮೇಲೆ ತಿಳಿಸಿದಂತೆ ಸಂಪರ್ಕ ಹೊಂದಿ ತುಕ್ಕು ಹಿಡಿಯುತ್ತವ? ಹಾಗೆ ನೋಡಿದರೆ ಕಾಂಕ್ರೀಟಿನ ಒಳಗಿರುವ ಕ್ಷಾರೀಯ ಪರಿಸರವು ಉಕ್ಕಿನ ಸರಳುಗಳಿಗೆ ರಕ್ಷಣೆ ನೀಡುವುದರಿಂದ ತುಕ್ಕು ಹಿಡಿಯಲೇಕೂಡದು. ಆದ್ದರಿಂದ ಈ ಸರಳ, ಅಮಾಯಕ ಪ್ರಶ್ನೆಗೆ ಉತ್ತರ: ಕಾಂಕ್ರೀಟಿನಿಂದ ನಿರ್ಮಿಸುವವರ- ಅವರು ಇಂಜಿನಿಯರರೇ ಆಗಿರಲಿ, ಮೇಸ್ತ್ರಿಯೇ ಆಗಿರಲಿ ಅಥವಾ ಮತ್ತಾರೇ ಆಗಿರಲಿ-ಅವರ ತಾಂತ್ರಿಕ ಅಸಡ್ಡೆ. ಕಾಂಕ್ರೀಟಿನಿಂದ ನಿರ್ಮಿಸುವಾಗ, ನಿರ್ದಿಷ್ಟ ಹಂತಗಳಲ್ಲಿ ಮುಖ್ಯವಾದ ಕೆಲವು ಅಂಶಗಳ ಕಡೆ ಗಮನಕೊಡದಿರುವುದರಿಂದ ಈ ಪರಿಸ್ಥಿತಿ ಏರ್ಪಡುತ್ತದೆ.

## ಕ್ಷಯ ನಿರೋಧ

ಕಾಂಕ್ರೀಟಿನಲ್ಲಿ ಹುದುಗಿಸಿರುವ ಪ್ರಬಲನಗಳು ಕ್ಷಯಿಸದಿರಬೇಕಾದರೆ ಈ ಕೆಳಕಂಡ ಮುಖ್ಯ ಅಂಶಗಳನ್ನು ಸಾಧಿಸಿರಬೇಕು. ಎಂದರೆ ಮಾತ್ರ ಕಟ್ಟಡಗಳು ನಂಬಿಕೆಗೆ ಅರ್ಹವಾಗಿರುತ್ತವೆ. ಕಾಂಕ್ರೀಟು ಪ್ರಬಲನಗಳನ್ನು ಸಂಪೂರ್ಣವಾಗಿ ಸುತ್ತುವರೆದಿರಬೇಕು.

* ಕಾಂಕ್ರೀಟನ ಮೂಲಕ ತೇವ ಒಳತೂರದಂತಿರಬೇಕು.
* ಕಾಂಕ್ರೀಟನ ಮೂಲಕ ಇಂಗಾಲಾಮ್ಲ ಮತ್ತಿತರ ಅನಿಲಗಳು ತೂರದಂತಿರಬೇಕು.
* ಕಾಂಕ್ರೀಟನ್ನು ಪ್ರಬಲನಗಳ ಸುತ್ತಲೂ ಚೆನ್ನಾಗಿ ಅಡಕಿಸಿರಬೇಕು.
* ಪ್ರಬಲನಗಳ ಯಾವ ಭಾಗವೂ ಹೊರಗೆ ಕಾಣದೆ, ನಿರ್ದಿಷ್ಟ ದೂರದಲ್ಲಿ ಹುದುಗಿರಬೇಕು.




ಮೇಲ್ಕಂಡ ಅಂಶಗಳನ್ನು ಸಾಧಿಸು[illegible]ದು ಕಷ್ಟವೇನಿಲ್ಲ. ಅವುಗಳ ಕಡೆ ಸ್ವಲ್ಪ ಜವಾಬ್ದಾರಿಯುತವಾಗಿ ಗಮನಕೊಡಬೇಕಷ್ಟೆ! ಅದು ಹೇಗೆ?

## ಸಾಧನೆ

ಕಾಂಕ್ರೀಟನ್ನು ಪ್ರಬಲನಗಳ ಸುತ್ತ[illegible] ಸುರಿದು, ಅದು ಅವುಗಳ ತಳಭಾಗದಲ್ಲಿ [illegible] ಸಮರ್ಪಕವಾಗಿ ಸುತ್ತುವರಿದಿದೆಯೆ? [illegible]ನ್ನು ಖಚಿತಪಡಿಸಿಕೊಳ್ಳಬೇಕು. ಸರಳುಗಳ [illegible] ಅಂತರವು ಕಡಿಮೆ ಇದ್ದಾಗ, ವೈಬ್ರೇಟರುಗಳನ್ನು ಬಳಸುವುದಕ್ಕೆ ಮುಂಚೆ ದುಂಡುಮು[illegible] ಕಂಬಿಗಳಿಂದ ಕಾಂಕ್ರೀಟನ್ನು ತಿವಿದು ಅದು ಸುತ್ತುವರಿಯಲು ಅನುಕೂಲ ಮಾಡಿಕೊಡಬೇಕು. ಹೀಗೆ ಮಾಡದಿದ್ದರೆ, ರೂಪಕ (ಸೆಂಟರಿಂಗ್, ಶಟರಿಂಗ್ ಅಥವಾ ಫಾರ್ಮ್‌ವರ್ಕ್)ಗಳನ್ನು ಕಳಚಿದಾಗ ಕಾಂಕ್ರೀಟಿನಲ್ಲಿ ಕಿಂಡಿಗಳಿದ್ದು ಸರಳುಗಳು ಹೊರಗೆ ಕಾಣುತ್ತವೆ. ಇದರ ಮೂಲಕ ತೇವ, ಅನಿಲಗಳು ತೂರಿಹೋಗಲು ಆರಂಭಿಸುವವು.

ತೇವ ತೂರದಂತಿರಬೇಕಾದರೆ, ಕಾಂಕ್ರೀಟಿನಲ್ಲಿ ಮುಂಚೆಯೇ ಸಮರ್ಪಕವಾಗಿ ಸಿಗಬಿಪಡಿಸಿದ

ಪ್ರಮಾಣದ ಸಿಮೆಂಟನ್ನು ಬಳಸಬೇಕು. ಸಿಮೆಂಟಿನ ಉಳಿತಾಯ ಮಾಡಹೊರಟರೆ ಮುಂದೆ ಅಪಾಯ ಕಟ್ಟಿಟ್ಟದ್ದು. ಹಾಗೆಯೇ ಮುಂಚೆಯೇ ತಾಂತ್ರಿಕವಾಗಿ ನಿಗದಿಪಡಿಸಿದ ಪರಿಮಾಣದಷ್ಟೇ ನೀರನ್ನು ಬೆರೆಸಿ ಕಾಂಕ್ರೀಟನ್ನು ಕಲಸಬೇಕು. ಕೆಲಸ ಸುಲಭವಾಗಲೆಂದು ಹೆಚ್ಚಿಗೆ ನೀರನ್ನು ಬೆರೆಸಿದರೆ ಕಾಂಕ್ರೀಟು ತೇವ ತೂರದಂತಿರುವುದಿಲ್ಲ. ಇದರಿಂದ ಉಕ್ಕು ಕ್ಷಯಿಸಲು ಪ್ರಾರಂಭವಾಗುತ್ತದೆ.

ರೂಪಕಗಳ ಸಂದಿಗಳು ಸಮರ್ಪಕವಾಗಿರದಿದ್ದರೆ, ಕಾಂಕ್ರೀಟನ್ನು ಸುರಿದು ಅಡಕಮಾಡುವಾಗ, ಸಿಮೆಂಟು ಮರಳನ್ನೊಳಗೊಂಡ ಗಾರೆಯು ಹೊರಗೆ ಸೋರಿಹೋಗುತ್ತದೆ. ರೂಪಕಗಳನ್ನು ಕಳಚಿದಾಗ, ಜಲ್ಲಿಯ ನಡುವೆ ತೆರವಿದ್ದು, ಕಾಂಕ್ರೀಟು ಕಿಂಡಿ ಕಿಂಡಿಯಾಗಿರುವುದು. ಇದನ್ನು ಗಾರೆಯಿಂದ ಮುಚ್ಚುವುದು ವಾಡಿಕೆ. ಹೀಗೆ ಮಾಡುವುದರಿಂದ ತೇವ, ಅನಿಲಗಳು ತೂರುವುದನ್ನು ತಡೆಯುವುದಕ್ಕಾಗುವುದಿಲ್ಲ. ಇದರಿಂದ ಉಕ್ಕಿನ ಸರಳುಗಳು ಕ್ಷಯಿಸಲು ಅನುವಾಗುತ್ತದೆ.

ಪ್ರಬಲನಗಳು ಮೇಲ್ಮೈಯಿಂದ ನಿರ್ದಿಷ್ಟ ದೂರದಲ್ಲಿರಬೇಕು. ಆಂದರೆ ಮಾತ್ರ ಅವುಗಳಿಗೆ ಸೂಕ್ತ ರಕ್ಷಣೆ ದೊರೆಯಲು ಪ್ರಾರಂಭವಾಗುತ್ತದೆ. ಈ ದೂರವೂ ಒಂದೇ ಸಮನಾಗಿರಲು ನಿರ್ದಿಷ್ಟ ದಪ್ಪದ ಗಾರೆಯ ಬ್ಲಾಕುಗಳ ಮೇಲೆ ಸರಳುಗಳನ್ನು ಕೂರಿಸಿ, ತಂತಿಗಳಿಂದ ಬಂಧಿಸಬೇಕು. ಹಾಗಾದರೆ ಮಾತ್ರ ನಡೆಯುವಾಗಲಾಗಲಿ ಕಾಂಕ್ರೀಟನ್ನು ವೈಬ್ರೇಟರಿನಿಂದ ಅಡಕಿಸುವಾಗಲಾಗಲಿ ಸರಳುಗಳು ಸ್ಥಳಾಂತರಗೊಳ್ಳುವುದಿಲ್ಲ.

ಕರ್ನಾಟಕದಲ್ಲಿ ಮಣ್ಣಿನ ಸೆಂಟರಿಂಗನ್ನು ಬಳಸುವುದು ವಾಡಿಕೆ. ಸರ್ವೇಸಾಮಾನ್ಯವಾಗಿ ಸೆಂಟರಿಂಗನ್ನು ಕಳಚಿದಾಗ ಸರಳುಗಳು ಹೊರಗಿರುವುದನ್ನು ಕಾಣಬಹುದು. ಇದನ್ನು ಗಾರೆಯಿಂದ ಮುಚ್ಚುವರು. ಇದರಿಂದ ಸರಳುಗಳ ಕ್ಷಯ ಬಹಳ ಬೇಗ ಪ್ರಾರಂಭವಾಗುತ್ತದೆ.

ಕಾಂಕ್ರೀಟಿನ ಮೂಲಕ ತೇವ ಹಾಗೂ ಅನಿಲಗಳು ತೂರದಂತಿರಬೇಕಾದರೆ, ಅದನ್ನು ವೈಬ್ರೇಟರು (ಕಂಪಕಗಳು)ಗಳನ್ನು ಬಳಸಿ ಚೆನ್ನಾಗಿ ಅಡಗಿಸಬೇಕು. ಅಲ್ಲದೆ ಸಮರ್ಪಕವಾಗಿ ಕೂರಿಸಬೇಕು.

ಕ್ಯೂರಿಂಗ್ ಎನ್ನುವುದು ಅತಿ ಮುಖ್ಯವಾದ ಹಂತ. ಅದು ಸಮರ್ಪಕವಾಗಿಲ್ಲದಿದ್ದರೆ, ನಮಗೆ ಬೇಕಾದ ಗುಣಗಳಿರುವ ಕಾಂಕ್ರೀಟು ದೊರೆಯುವುದಿಲ್ಲ. ಅಲ್ಲದೆ ಹೀಗೆ ಸಿದ್ಧವಾದ ತೇವ, ಅನಿಲಗಳು ತೂರದಂತಿರುವುದಿಲ್ಲ. ಕ್ಯೂರಣೆಯು ಬಹು ಸುಲಭವಾದ ಕೆಲಸ. ಸ್ವಲ್ಪ ಗಮನವಿಟ್ಟು ಮಾಡಬೇಕಷ್ಟೆ!

ಕ್ಯೂರಣೆಯು ಏಕೆ ಬೇಕು ಎಂದು ತಿಳಿಯುವುದು ಮುಖ್ಯ. ಸಿಮೆಂಟು ಒಂದು ರಾಸಾಯನಿಕ ವಸ್ತುವೆಂದರೆ ತಪ್ಪಾಗದು. ನೀರಿನ ಸಂಪರ್ಕವಾದೊಡನೆಯೇ ರಾಸಾಯನಿಕ ಕ್ರಿಯೆಯು ಪ್ರಾರಂಭವಾಗುತ್ತದೆ. ಈ ಕ್ರಿಯೆಯಿಂದಲೇ ಕಾಂಕ್ರೀಟು ಗಟ್ಟಿಯಾಗುವುದು. ಅರ್ಥಾತ್ ಕಾಂಕ್ರೀಟು ಗಟ್ಟಿಯಾಗಲು ನೀರು ಬೇಕೇಬೇಕು. ಕಾಂಕ್ರೀಟನ್ನು ತಯಾರಿಸುವಾಗ ಬೆರೆಸುವ ನೀರಿನ ಪರಿಮಾಣವು, ರಾಸಾಯನಿಕ ಕ್ರಿಯೆಗೆ ಎಷ್ಟು ಬೇಕಾಗುವುದೋ ಆದಕ್ಕಿಂತ ಹೆಚ್ಚಾಗಿಯೇ ಇರುತ್ತದೆ. ಆದರೆ ರಾಸಾಯನಿಕ ಕ್ರಿಯೆಯು ನಡೆಯುವಾಗ ಶಾಖ ಉತ್ಪನ್ನವಾಗಿ ಅದರ ದೆಸೆಯಿಂದ ಕಲೆಸಿದ ನೀರು ಆವಿಯಾಗಿ ಪರಿವರ್ತನಗೊಂಡು, ಕಾಂಕ್ರೀಟಿನಲ್ಲಿನ ನೀರಿನಂಶ ನಷ್ಟವಾಗುತ್ತದೆ. ಹೀಗೆಯೇ ಬಿಟ್ಟರೆ, ರಾಸಾಯನಿಕ ಕ್ರಿಯೆಯು ನಿಂತುಹೋಗಿ, ಕಾಂಕ್ರೀಟು ಎಷ್ಟು ಗಟ್ಟಿಯಾಗಬೇಕೋ ಅಷ್ಟು ಗಟ್ಟಿಯಾಗುವುದಿಲ್ಲ.

ಈ ರೀತಿ ಕಲೆಸಿದ ನೀರಿನ ನಷ್ಟವಾಗದಂತೆ, ರಾಸಾಯನಿಕ ಕ್ರಿಯೆಗೆ ಅಗತ್ಯವಾದಷ್ಟು ತೇವವನ್ನು ಉಳಿಸಿ, ಕಾಪಾಡುವುದಕ್ಕೆ ಕ್ಯೂರಿಂಗ್ ಎನ್ನುವರು. ಇದನ್ನು ಸಾಧಿಸಲು ಹಲವಾರು ವಿಧಾನಗಳಿವೆಯಾದರೂ, ಕಾಂಕ್ರೀಟಿನ ಕಟ್ಟಡಗಳ ಮೇಲೆ ನೀರನ್ನು ಸಿಂಪಡಿಸುವುದು ಮತ್ತು ನೀರನ್ನು ಕಟ್ಟುವುದು ಅಗ್ಗದ ಹಾಗೂ ಸರಳ ವಿಧಾನಗಳು.

ಕಾಂಕ್ರೀಟನ್ನು ಸುರಿದು, ಒಪ್ಪ ಮಾಡಿದ ಕೆಲವು ಗಂಟೆಗಳ ನಂತರದಿಂದ ಎಡೆಬಿಡದೆ ಒಂದು ವಾರವಾದರೂ ಕ್ಯೂರಿಸಬೇಕು. ೧೪ ದಿವಸಗಳವ

ರೆಗೆ ಕ್ಯೂರಿಸಿದರೆ ಬಹಳ ಉತ್ತಮ. ಹೆಚ್ಚು ತಾಪವಿರುವ ಪ್ರದೇಶಗಳಲ್ಲಿ ಮೇಲೆ ನಡೆದುಹೋಗುವಷ್ಟು ಕಾಂಕ್ರೀಟು ಗಡುಸಾದ ತಕ್ಷಣ ನೀರು ಸಿಂಪಡಿಸಲು ಪ್ರಾರಂಭಿಸಿ, ನಂತರ ನೀರು ಸುರಿದು ಕ್ಯೂರಿಸಬೇಕು. ವಿಸ್ತಾರವಾದ ಚಪ್ಪಡಿಗಳನ್ನು ನಿರ್ಮಿಸುವಾಗ, ದಿನದ ಕೆಲಸ ಮುಗಿಯುವವರೆಗೂ ಕಾಯುವುದು ಒಳ್ಳೆಯದಲ್ಲ. ಕಾಂಕ್ರೀಟು ಬಿಗಿಯಾಗುತ್ತಿದ್ದಂತೆಯೇ ನೀರನ್ನು ಸಿಂಪಡಿಸಲು ಪ್ರಾರಂಭಿಸಬೇಕು. ತಂಪಾದ ವಾತಾವರಣವಿರುವ ಪ್ರದೇಶಗಳಲ್ಲಿ, ಕೆಲಸ ಮುಗಿಸಿ ಹೋಗುವಾಗ ತೇವವಿರುವ ಗೋಣಿಯನ್ನು ಹರವಿ ೬ ಗಂಟೆಗಳ ನಂತರ ಕ್ಯೂರಣೆಯನ್ನು ಪ್ರಾರಂಭಿಸಬಹುದು.

ಊಟಕ್ಕೆ ಹೋದಾಗ ಅಥವಾ ಮಲಗಲು ಹೋದಾಗ ಕ್ಯೂರಿಸದೆ ಕಾಂಕ್ರೀಟನ್ನು ಒಣಗಬಿಡುವುದು ಎಂದಿಗೂ ಕೂಡದು.

## ಕೊನೆಯ ಮಾತು

ಇದುವರೆಗೆ ಸ್ಥೂಲವಾಗಿ ನಿರೂಪಿಸಿದ ಅಂಶಗಳನ್ನು ಸಾಧಿಸುವುದು ಕಷ್ಟವೇನಿಲ್ಲ. ಆದರ ಕಡೆಗೆ ಗಮನಕೊಡದೆ ಅಸಡ್ಡೆ ತೋರಿಸಿದರೆ ಮುಂದೆ ವ್ಯಥೆಪಡಬೇಕಾದೀತು. ಕಾಂಕ್ರೀಟಿನ ಕಟ್ಟಡಗಳ ದುರಸ್ತಿ ಬಹು ದುಬಾರಿ. ಸಕಾಲದಲ್ಲಿ ಹಾಕಿದ ಒಂದು ಹೊಲಿಗೆ, ಮುಂದೆ ಒಂಭತ್ತು ಹೊಲಿಗೆಗಳನ್ನು ಉಳಿಸುತ್ತದೆಂಬ ಆಂಗ್ಲ ಗಾದೆಯನ್ನು ಮರೆಯದಿರಿ.

ಆದ್ದರಿಂದ ಕಾಂಕ್ರೀಟಿನ ಕಟ್ಟಡಗಳ ಒಡೆತನವುಳ್ಳವರು ಈ ಬಗ್ಗೆ ಹೆಚ್ಚಿನ ಆಸ್ಥೆ ವಹಿಸಿ, ಅವುಗಳ ನಿರ್ಮಾಣಕ್ಕೆ ತಿಳಿವಳಿಕೆ ಇರುವ ಇಂಜಿನಿಯರುಗಳನ್ನು ನೇಮಿಸಿಕೊಳ್ಳಬೇಕು. ದುರಸ್ತಿಯ ಕಷ್ಟಸುಖಗಳನ್ನು ತಿಳಿದವರಾದರೆ ಬಹಳ ಒಳ್ಳೆಯದು. ಇಂಜಿನಿಯರುಗಳು ತಿಳಿವಳಿಕೆ ಇರುವ ಮೇಲ್ವಿಚಾರಕರನ್ನು ನೇಮಿಸಿಕೊಳ್ಳಬೇಕು ಅಥವಾ ಅವರಿಗೆ ಸೂಕ್ತ ತಿಳಿವಳಿಕೆ ನೀಡಬೇಕು. ಮೇಲ್ವಿಚಾರಕರು ಕಾರ್ಮಿಕರ ಮೇಲೆ ಎಡೆಬಿಡದೆ ನಿಗಾ ಇಟ್ಟು ಒಳ್ಳೆಯ ಕೆಲಸ ಮಾಡಿಸಬೇಕು. ಕೆಲವು ನುರಿತ ಕುಶಲಕರ್ಮಿಗಳು ಇದಾವುದರ ಕಡೆಗೂ ಗಮನ ಕೊಡದೆ, ನೋಡಲು ಬಹು ಅಂದವಾದ ಕಟ್ಟಡಗಳನ್ನು ನಿರ್ಮಿಸಿಕೊಡುತ್ತಾರೆ. ಕೆಲವೇ ವರ್ಷಗಳಲ್ಲಿ ನಿಜಸ್ಥಿತಿಯ ಅರಿವಾದಾಗ ಕಟ್ಟಿಸಿದವರು ಪಶ್ಚಾತ್ತಾಪ ಪಡಬೇಕಾಗುತ್ತದೆ.

ಇಷ್ಟೆಲ್ಲಾ ಜಾಗ್ರತೆ ವಹಿಸಿದರೂ, ಸಾಗರದ ಪರಿಸರಗಳಲ್ಲಿ, ರಾಸಾಯನಿಕ, ಪೆಟ್ರೋಲಿಯಂ ಪದಾರ್ಥಗಳ ಕಾರ್ಖಾನೆಗಳು ಹತ್ತಿರವಾಗಿರುವಲ್ಲಿ ಕಟ್ಟಡಗಳಿಗೆ ಅಪಾಯ ಪೂರ್ಣವಾಗಿ ತಪ್ಪಿದ್ದಲ್ಲ. ಅಂತಹ ಸ್ಥಳಗಳಲ್ಲಿ ನಿರ್ಮಾಣದ ಜಾಗರೂಕತೆಯ ಜೊತೆಗೆ, ಕೆಲವು ವಿಶೇಷ ಕ್ರಮಗಳನ್ನೂ ತೆಗೆದುಕೊಳ್ಳಬೇಕು. ಅವುಗಳಲ್ಲಿ ಮುಖ್ಯವಾದವು-ಕ್ಷಯ ನಿರೋಧಿ ಲೇಪನಗಳನ್ನು ಬಳಿದ ಪ್ರಬಲನಗಳನ್ನು ಬಳಸುವುದು, ವಿಶೇಷ ಕ್ಷಯ ನಿರೋಧಿ ಉಕ್ಕಿನ ಸರಳುಗಳನ್ನು ಬಳಸುವುದು ಮತ್ತು ಕಾಂಕ್ರೀಟಿನ ಮೇಲ್ಮೈಗೆ ಕ್ಷಯ ನಿರೋಧಿ ಲೇಪಗಳನ್ನು ಬಳಿಯುವುದು.

ಹೀಗೆ ದುರಸ್ತಿಯ ಅವಶ್ಯಕತೆಯನ್ನು ಮುಂಚಿತವಾಗಿಯೇ ನಿವಾರಿಸಿದರೆ, ಮುಂದೊದಗಬಹುದಾದ ಅಪಾಯವನ್ನು ತಪ್ಪಿಸಬಹುದು. ●

## ಅದಕ್ಕಿಂತ ಮೊದಲು?

**ಕೋ**ರ್ಟಿನಲ್ಲಿ ಪಾಟೀಸವಾಲು ನಡೆದಿತ್ತು. "ನೀವು ಯಾರು?" ಕಟಕಟೆಯಲ್ಲಿ ನಿಂತ ಸಾಕ್ಷಿಯನ್ನು ಪ್ರಶ್ನಿಸಿದ ವಕೀಲ.

ಸ್ವರ್ಣಾಭರಣಗಳ ವ್ಯಾಪಾರ ಮಾಡುತ್ತಿದ್ದ ವ್ಯಾಪಾರಿ ಒಂದು ಕ್ಷಣವೂ ತಡಮಾಡದೆ ಉತ್ತರಿಸಿದ: "ನಿಮಗೆ ಗೊತ್ತೇ ಇರುವ ಹಾಗೆ ನಾನೊಬ್ಬ ಸದ್‌ಗೃಹಸ್ಥ".

"ಸರಿಯಾಗಿಯೇ ಹೇಳಿದಿರಿ. ಅದಕ್ಕಿಂತ ಮೊದಲು ಏನಾಗಿದ್ದಿರಿ?" ವಕೀಲರಿಂದ ಕೂಡಲೆ ಬಂತು ಎರಡನೆಯ ಪ್ರಶ್ನೆ.

# ನನ್ನ ಬದುಕಿಗೆ ನೆಲೆ ಒದಗಿಸಿದ ಡಾ. ಶಿವರಾಮ ಕಾರಂತರು

ನಾನು ಹೈಸ್ಕೂಲು ಓದುತ್ತಿರುವಾಗ ನನ್ನ ಮೇಲೆ ಹೆಚ್ಚು ಪ್ರಭಾವ ಬೀರಿದವರಲ್ಲಿ ಡಾ. ಶಿವರಾಮ ಕಾರಂತರೂ ಒಬ್ಬರು. ಈ ಮಧ್ಯದಲ್ಲಿ ಮೂರು ನಾಲ್ಕು ಸಲ ಕಾರಂತರು ನಾಡಹಬ್ಬದ ಅತಿಥಿಗಳಾಗಿ ಬಾಗಲಕೋಟೆಗೆ ಬಂದಾಗ ಅವರ ಭಾಷಣವನ್ನು ಕೇಳಿ ಮೆಚ್ಚಿಕೊಂಡಿದ್ದೆ. ಅದೇ ವೇಳೆಗೆ ಡಾ. ಕಾರಂತರ ಬಹಳಷ್ಟು ಕಾದಂಬರಿಗಳನ್ನೂ ಓದಿದ್ದೆ. ನನ್ನ ಮೇಲೆ ಪ್ರಭಾವ ಬೀರಿದ ಪುಸ್ತಕಗಳ ಪೈಕಿ 'ಅವರ ಹುಚ್ಚು ಮನಸ್ಸಿನ ಹತ್ತು ಮುಖಗಳು' ಒಂದಾಗಿತ್ತು. ಅದರಲ್ಲಿ ಅವರು ನಿರುದ್ಯೋಗಿ ಯುವಕನಿಗೆ ಕೋಳಿ ಸಾಕಣೆ ನಡೆಸಲು ಆರ್ಥಿಕ ನೆರವು ನೀಡಿದ್ದು, ಮತ್ತೊಬ್ಬನ ಸೈಕಲ್ ಅಂಗಡಿ ಸುಟ್ಟುಹೋದಾಗ ಅವನನ್ನು ಕರೆದು ಹಣ ಕೊಟ್ಟು ದುಡಿಮೆ ಮುಂದುವರಿಸಲು ಪ್ರೋತ್ಸಾಹಿಸಿದ್ದು ನನಗೆ ನೆನಪಿದ್ದವು.

ಹೈಸ್ಕೂಲು ಮುಗಿಸಿದ ನಾನು ಮುಂದಿನ ಶಿಕ್ಷಣದ ಬಗ್ಗೆ ವಿಚಾರಿಸಲಿಲ್ಲ. ನನಗೆ ಪ್ರಿಂಟಿಂಗ್ ಪ್ರೆಸ್ಸಿನ ಕೆಲಸದ ಮಾಹಿತಿ ಇದ್ದುದರಿಂದ ಒಂದು ಕೆಲಸ ಹುಡುಕುವ ಬಗ್ಗೆ ಪ್ರಯತ್ನಿಸುತ್ತಿದ್ದೆ. ಡಾ. ಶಿವರಾಮ ಕಾರಂತರು ಹರ್ಷ ಮುದ್ರಣಾಲಯ ನಡೆಸುತ್ತಾರೆಂದು ತಿಳಿದು ಅವರ ಪ್ರೆಸ್ಸಿನಲ್ಲಿ ಕೆಲಸ ಕೇಳಿ ಪತ್ರ ಬರೆದೆ. ಅದಕ್ಕೆ ಅವರು, "ನಾನು ಪ್ರೆಸ್ಸು ಮುಚ್ಚುವ ವಿಚಾರದಲ್ಲಿದ್ದೇನೆ" ಎಂದಿಷ್ಟೇ ಬರೆಯಲಿಲ್ಲ. ಬದಲು, ನೀವು ಒಪ್ಪುವುದಾದರೆ ನನ್ನ ಸ್ನೇಹಿತರೊಬ್ಬರು ಅಂಕೋಲೆಯಲ್ಲಿ ಒಂದು ಛಾಪಖಾನೆ ಹಾಗೂ ಒಂದು ಪತ್ರಿಕೆ ನಡೆಸುತ್ತಾರೆ. ಅಲ್ಲಿ ನಿಮ್ಮ ಅಭಿರುಚಿಗಳಿಗೆ ಅವಕಾಶ ಸಿಕ್ಕೀತು. ಯಾವುದಕ್ಕೂ ಬರೆಯಿರಿ ಎಂದು ತಿಳಿಸಿದರು. ನಾನು ಒಪ್ಪಿದೆ. ಡಾ. ಶಿವರಾಮ ಕಾರಂತರ ಮೂಲಕವಾಗಿಯೇ ನಾನು ದಿ. ಡಾ. ದಿನಕರ ದೇಸಾಯಿ ಅವರು ನಡೆಸುತ್ತಿದ್ದ 'ಜನಸೇವಕ', 'ಜನಮುದ್ರಣ' ದಲ್ಲಿ ಸೇರಿಕೊಂಡೆ. ಇಷ್ಟೆಲ್ಲ ನಡೆದುದು ೪೦ ವರ್ಷಗಳ ಹಿಂದೆ. ಆಗ ಇನ್ನೂ ಕರ್ನಾಟಕ ಏಕೀಕರಣ ಆಗಿದ್ದಿಲ್ಲ.

ಹೀಗೆ ನನ್ನ ಬದುಕಿಗೊಂದು ಭದ್ರ ನೆಲೆ ಒದಗಿಸಿದವರು ಡಾ. ಕಾರಂತರು. ಅಂದಿನಿಂದ ಡಾ. ಕಾರಂತರು ಅಂಕೋಲೆಗೆ ಬಂದಾಗಲೆಲ್ಲ ಅವರನ್ನು ಹತ್ತಿರದಿಂದ ಕಂಡು ಎಷ್ಟೋ ಹೊತ್ತು ಕಳೆದಿದ್ದೇನೆ. ಆಗಾಗ ನನ್ನ ಕ್ಷೇಮ ಸಮಾಚಾರ ಕೇಳುವುದು ಅವರ ವಾಡಿಕೆ.

ನಾನು ಅಂಕೋಲೆಗೆ ಬಂದ ನಂತರ ಅನೇಕ ಸಲ ಕಾರಂತರು ಅಲ್ಲಿಗೆ ಬರುತ್ತಿದ್ದರು. ಆಗ ನಾನು ಒಬ್ಬಂಟಿಗ, 'ಸ್ವಯಂಪಾಕಿ.' ಆ ಕಾರಣ ನನ್ನ ಮನೆಗೆ ಬನ್ನಿ ಎಂದು ಆಮಂತ್ರಿಸುವ ಧೈರ್ಯ ಆಗಿರಲಿಲ್ಲ.

ಜನವರಿ ೧೯೭೩. ಡಾ. ಶಿವರಾಮ ಕಾರಂತರು



ನಮ್ಮ ಟ್ರಸ್ಟಿನ ಗೋಖಲೆ ಸೆಂಟೆನರಿ ಕಾಲೇಜಿನ ವಾರ್ಷಿಕ ಸ್ನೇಹ ಸಮ್ಮೇಳನದ ಮುಖ್ಯ ಅತಿಥಿಗಳಾಗಿ ಬರುವವರಿದ್ದರು. ಆ ಸಂದರ್ಭದಲ್ಲಿ ನಾನು ಕಾಲೇಜಿನ ಲೈಬ್ರರಿಯಲ್ಲಿದ್ದೆ. ನನಗೆ ಆಗಲೇ ಮದುವೆ ಆಗಿ ಒಬ್ಬ ಮಗನೂ ಹುಟ್ಟಿದ್ದ. ಈಗ ಡಾ. ಕಾರಂತರನ್ನು ಮನೆಗೆ ಆಮಂತ್ರಿಸುವ ಧೈರ್ಯ ಮಾಡಿದೆ. ಆದರೆ ಇಷ್ಟೊಂದು ಎತ್ತರದ ವ್ಯಕ್ತಿ ನನ್ನ ಮನೆಗೆ ಬರಬಹುದೇ? ಎಂಬ ಅಳುಕೂ ಇತ್ತು. ಅಲ್ಲದೆ ಮುಂಚಿತವಾಗಿ ಕೂಡ ಈ ಬಗ್ಗೆ ನಾನು ಅವರಿಗೆ ತಿಳಿಸಿರಲಿಲ್ಲ.

ಅಂದು ಡಾ. ಕಾರಂತರು ಅಂಕೋಲೆಗೆ ಬಂದುದನ್ನು ತಿಳಿದು ೧೦-೩೦ರ ಸುಮಾರಿಗೆ ಭೆಟ್ಟಿಗೆಂದು ಅವರು ಉಳಿದುಕೊಂಡಿದ್ದ ಶ್ರೀ ನಾರ್ವೇಕರರ ಮನೆಗೆ ಹೋದೆ. ಎಂದಿನಂತೆ ಅವರ ಕ್ಷೇಮ ಸಮಾಚಾರ ಕೇಳಿದರು. ದಿನಕರ ದೇಸಾಯಿಯವರ ಬಗ್ಗೆ ವಿಚಾರಿಸಿದರು. ನನ್ನ ಭಾಗದ ಐಹೊಳೆ, ಪಟ್ಟದ ಕಲ್ಲು ಶಿಲ್ಪಕಲೆಯ ಬಗ್ಗೆ ಮಾತನಾಡಿದರು. ಅವರ ಮಾತು ಮುಗಿಯುತ್ತಿದ್ದಂತೆ, “ನನ್ನ ಮನೆಗೆ ತಾವು ಬರಬೇಕು,'' ಎಂದು ಹೇಳಿದೆ. ಕೂಡಲೇ ಡಾ. ಕಾರಂತರು ಕೈಗಡಿಯಾರ ನೋಡಿ, “ಗಂಟೆ ಹನ್ನೊಂದು. ಈಗ ಬೇಡ, ಮಧ್ಯಾಹ್ನ ಕಾಲೇಜಿಗೆ ಹೋಗುವ ಮೊದಲು ನಿಮ್ಮಲ್ಲಿ ಬಂದು ಆ ಮೇಲೆ ಕಾಲೇಜಿಗೆ ಹೋಗುವೆ,'' ಎಂದು ಆಗಿಂದಾಗ ಒಪ್ಪಿಕೊಂಡರು.

ನಾನು ಧಾವಿಸಿ ಮನೆಗೆ ಬಂದವನೆ ಡಾ. ಕಾರಂತರು ಕಾಲೇಜಿಗೆ ಹೋಗುವ ಮೊದಲು ನಮ್ಮ ಮನೆಗೆ ಬರುವರೆಂದು ನನ್ನ ಶ್ರೀಮತಿಗೆ ತಿಳಿಸಿದೆ. ಅವಳಿಗೂ ಹೆಚ್ಚಿನ ಖುಷಿ.

ಮಧ್ಯಾಹ್ನ ಕಾರಂತರನ್ನು ನನ್ನ ಮನೆಗೆ ಕರೆದುಕೊಂಡು ಬರುವಂತೆ ಸ್ನೇಹಿತರಿಗೆ ಹೇಳಿ ವ್ಯವಸ್ಥೆ ಮಾಡಿದೆ. ಸರಿಯಾಗಿ ಮೂರೂವರೆ ಆಗಿರಬೇಕು. ಕಾರು ಬಂದು ನನ್ನ ಮನೆಯಿಂದ ಸ್ವಲ್ಪ ದೂರದ ರಸ್ತೆಗೆ ನಿಂತಿತು. ಕಾರು ಬಂದಾಕ್ಷಣ ನಾನು ಓಡಿಹೋದೆ. ಅಷ್ಟರಲ್ಲಿ ಕಾರಂತರು ಕಾರಿನಿಂದ ಕೆಳಗೆ ಇಳಿದುಬಿಟ್ಟಿದ್ದರು. “ಕಾರು ಮನೆ ಬಾಗಿಲ ತನಕ ಬರುತ್ತದೆ. ಇಲ್ಲೇಕೆ ಇಳಿದಿರಿ?'' ಅಂದೆ. ನನ್ನ ಮಾತು ಇನ್ನೂ ಮುಗಿದಿರಲಿಲ್ಲ, “ಪಾದ ಧೂಳಿಯಿಂದ ನಮ್ಮ ಮನೆ ಪವಿತ್ರ ಮಾಡಿದರೆಂದು ನೀವು ಹೇಳೋದು ಬೇಡವೋ,'' ಎಂದು ಹೇಳುತ್ತ ಅವರು ನಡೆದೇ ನನ್ನ ಮನೆಗೆ ಬಂದರು.

ಡಾ. ಕಾರಂತರು ಅಂಕೋಲೆಗೆ ಬರುವುದನ್ನು ತಿಳಿದ ನನ್ನ ಸ್ನೇಹಿತರಾದ ಡಾ. ಎಂ. ಅಕಬರ ಅಲಿ ಅವರು ಕೆಲವು ಗೆಳೆಯರೊಂದಿಗೆ ಮೊದಲು ನನ್ನನ್ನು ಭೆಟ್ಟಿಯಾಗಿ ಕಾಲೇಜಿಗೆ ಹೋದರಾಯಿತೆಂದು ಲೆಕ್ಕಾಚಾರ ಹಾಕಿ ನೇರವಾಗಿ ನನ್ನ ಮನೆಗೆ ಬಂದಿದ್ದರು. ಹೀಗಾಗಿ ಅದೊಂದು ಚಿಕ್ಕ ಸಾಹಿತಿಗಳ ಕೂಟವೇ ಕೂಡಿದಂತಾಯಿತು. ಎಷ್ಟೆಲ್ಲ ಮಾತು, ಹರಟೆ! ಅನೇಕ ವಿಷಯಗಳ ಬಗ್ಗೆ ಮಾತಾಡಿದ್ದೇ ಮಾತಾಡಿದ್ದು.

ಆಗ ಬಾಗಿಲಲ್ಲಿ ನನ್ನ ಮಗ ರವಿ ಆಡುತ್ತಿದ್ದ. ಅದಕ್ಕೆ ನೇರವಾಗಿ ಒಳಗೆ ಕಾರಂತರು ಕುಳಿತಿದ್ದರು. ನನ್ನ ಮಗ ಆಡುತ್ತ ಆಡುತ್ತ ಡಾ. ಕಾರಂತರ ಚಪ್ಪಲಿಯಲ್ಲಿ ತನ್ನ ಕಾಲು ಹಾಕಿ ನಡೆಯಲು ಪ್ರಯತ್ನ ನಡೆಸಿದ್ದ. ಅದನ್ನು ಗಮನಿಸಿದ ಡಾ. ಕಾರಂತರು, “ಹುದ್ದಾರರೇ, ಬನ್ನಿ ಇಲ್ಲಿ. ನೀವೇನೂ ಭಯಪಡಬೇಕಿಲ್ಲ. ನಿಮ್ಮ ಮಗ ಹಿರಿಯರ ಹೆಜ್ಜೆಯಲ್ಲಿಯೇ ಹೆಜ್ಜೆ ಹಾಕಿ ನಡೆಯುತ್ತಾನೆ,'' ಎಂದು ಕೈತೋರಿಸಿದರು. ನನ್ನ ಮಗ ರವಿ ಕಾರಂತರ ಚಪ್ಪಲಿ ಹಾಕಿಕೊಂಡು ನಡೆಯುವಾಗ, ಜೋಲಿ ಸಾಲದೆ ಹೊಯ್ದಾಡುತ್ತಿದ್ದ. ಬಿದ್ದಾನೆಂದು ಯಾರೋ “ಏ!'' ಎಂದು ಹಿಡಿಯಲು ಹೋದರು. “ಬಿಡಿ ಬಿಡಿ, ಹಿಡಿಯಬೇಡಿ, ಮಗುವಿಗೆ ಬಿದ್ದರೇನಾಗುವುದೆಂದು ತಿಳಿಯುವುದು ಬೇಡವೆ? ಆತ ನಡಿಗೆ ಕಲೀತಾ ಇದ್ದಾನೆ,'' ಎಂದರು ಕಾರಂತರು. ಮತ್ತೊಂದಿಷ್ಟು ಮಾತನಾಡುತ್ತ ಗಡಿಯಾರ ನೋಡಿದರು. ನಾಲ್ಕು ಗಂಟೆಗೆ ೧೦ ನಿಮಿಷ ಉಳಿದಿತ್ತು. “ಆಯಿತು ಅಲ್ಲಿ ಹೋಗಬೇಕಲ್ಲ,'' ಎಂದು ಡಾ. ಕಾರಂತರು ಎದ್ದರು. ನನ್ನ ಮಗನನ್ನೂ ಮಡದಿಯನ್ನೂ ಮತ್ತೊಮ್ಮೆ ಮಾತನಾಡಿಸಿದರು.

ಕಾರವಾರದ ಸ್ನೇಹಿತರಿದ್ದುದರಿಂದ ಕಾರಿನಲ್ಲಿ

---

✿ ಶ್ಯಾಮ ಹುದ್ದಾರ

ಜನ ಹೆಚ್ಚಾಗುವರೆಂದು ಕೆಲವರು ಹಿಂದಿನಿಂದ ನಡೆದು ಬರುವದಾಗಿ ಹೇಳಿದರು. "ಬಂದು ಬಿಡಿ. ಇದ್ದುದರಲ್ಲಿಯೇ ಹೊಂದಾಣಿಕೆ ಮಾಡಿದರಾಯಿತು," ಅಂದರು ಕಾರಂತರು.

### ಡಾ. ಕಾರಂತರಲ್ಲಿ ಆತಿಥ್ಯ

ನಾನು ಆರೋಗ್ಯ ತಪಾಸಣೆಗಾಗಿ ೧೯೮೭ರ ಮೇ ತಿಂಗಳಲ್ಲಿ ಮಣಿಪಾಲಕ್ಕೆ ಹೋಗಿದ್ದೆ. ಅಲ್ಲಿ ೨-೩ ದಿವಸ ನನ್ನ ಆತ್ಮೀಯರೊಬ್ಬರಲ್ಲಿ ಉಳಿದುಕೊಂಡಿದ್ದೆ. ಮಣಿಪಾಲಕ್ಕೆ ಹೋಗುವ ದಾರಿಯಲ್ಲಿ ಸಾಲಿಗ್ರಾಮ. ಡಾ. ಕಾರಂತರ ಮನೆ 'ಸುಹಾಸ'ದ ಮುಂದೆಯೇ ಬಸ್ಸು ಹೋಗುವಾಗ ಅವರು ಇದ್ದಾರೆಯೆ? ಎಂದು ನೋಡಿದ್ದೆ. ಅವರು ಊರಲ್ಲಿ ಇರುವುದು ಅಪರೂಪ. ಅವರು ಇದ್ದಾರೋ ಇಲ್ಲವೋ ಎನ್ನುವುದು ಬಸ್ ಮೂಲಕ ಗೊತ್ತಾಗಲಿಲ್ಲ. ಮಣಿಪಾಲದ ವಾಸ್ತವ್ಯದಲ್ಲಿರುವಾಗ 'ಉದಯವಾಣಿ' ಪತ್ರಿಕೆಯಲ್ಲಿ ಡಾ. ಕಾರಂತರು ಭಾಗವಹಿಸಿದ ಕೆಲವು ಕಾರ್ಯಕ್ರಮಗಳ ವರದಿ ಬಂದದ್ದು ನೋಡಿ ಅವರು ಜಿಲ್ಲೆಯಲ್ಲಿಯೇ ಇದ್ದಾರೆಂದು ಧೈರ್ಯ ತಂದುಕೊಂಡೆ. ತಿರುಗಿ ಹೋಗುವಾಗ ಸಾಲಿಗ್ರಾಮದಲ್ಲಿ ಇಳಿದು ಕಾರಂತರು ಮನೆಯಲ್ಲಿ ಇದ್ದರೆ ಭೇಟಿಯಾಗಿ ಹೋದರಾಯಿತೆಂದು ನಿಶ್ಚಯಿಸಿದೆ.

ಆ ರೀತಿ ತಿರುಗಿ ಬರುವಾಗ ಸಾಲಿಗ್ರಾಮದಲ್ಲಿ ಇಳಿದೆ. ಜೊತೆಗೆ ನನ್ನ ಮಗ ಇದ್ದ. ಇಬ್ಬರೂ ಡಾ. ಕಾರಂತರ ಮನೆಗೆ ಹೋದೆವು. ಹೊರಗೆ ಕಾರು ಕಾಣಿಸಲಿಲ್ಲ. ಅನುಮಾನವಾಯಿತು. ಮನೆ ಬಾಗಿಲು ತಟ್ಟಿದಾಗ ನಮ್ಮನ್ನು ಸ್ವಾಗತಿಸಿದವರು ಇಬ್ಬರು ಮಕ್ಕಳು. ಅವರಿಬ್ಬರೂ ಡಾ. ಕಾರಂತರ ಮೊಮ್ಮಕ್ಕಳಿರಬಹುದೆಂದು ಭಾವಿಸಿದೆ. ಅವರನ್ನೇ, "ಡಾ. ಕಾರಂತರು ಇಲ್ಲವೇ?" ಎಂದು ಕೇಳಿದೆ. "ಇಲ್ಲ. ಅವರು ಉಡುಪಿಗೆ ಹೋಗಿದ್ದಾರೆ. ಈಗ ಬರಬಹುದು,"ಎಂದರು. ನಾವು ಅವರು ಬರುವ ತನಕ ಕಾಯಬೇಕಾಯಿತು. ಸ್ವಲ್ಪ ಸುತ್ತಾಡಿ ಬಂದರಾಯಿತೆಂದು ಮುಂದಿನ ಕ್ರಾಸ್ ವರೆಗೆ ಬಂದೆವು. ಅಲ್ಲಿ ಚಹಾ ಕುಡಿದು ಬದಿಯ ಸ್ಟೇಷನರಿ ಅಂಗಡಿಯಲ್ಲಿ ಒಂದು ಲೆದರ್ ಬ್ಯಾಗ್ ಬಗ್ಗೆ ವಿಚಾರಿಸುತ್ತಿದ್ದೆವು. ನಾವು ನಿಂತಲ್ಲಿಂದ ಕಾರಂತರ ಮನೆ ಕಾಣುತ್ತಿತ್ತು. ಮಾತಿಗೆ ಮಾತು ಆಡುತ್ತ ನಾವು ಡಾ. ಕಾರಂತರನ್ನು ಭೆಟ್ಟಿಯಾಗಲು ಬಂದಿರುವುದಾಗಿ ಆ ಅಂಗಡಿಯವನಿಗೆ ಹೇಳಿದಾಗ ಆತ ಒಮ್ಮೆಲೇ, "ನೋಡಿ ಕಾರಂತರು, ಅಂದ.

ನಾವು ತಿರುಗಿ ನೋಡುವಾಗಲೇ ಕಾರು ಕಣ್ಮರೆಯಾಗಿ ಮುಂದೆ ಹೋಯಿತು. ಆ ಅಂಗಡಿಯವನೇ, "ಕುಂದಾಪುರಕ್ಕೆ ಹೋಗಿರಬಹುದು. ಅವರು ಅಣ್ಣನನ್ನು ನೋಡಲು ಹೋಗುತ್ತಿರುತ್ತಾರೆ. ಮತ್ತೆ ಬರುತ್ತಾರೆ," ಎಂದ. ನಾವು ಬ್ಯಾಗ್ ಖರೀದಿಸಿ ತಿರುಗಿ ಕಾರಂತರ ಮನೆಯತ್ತ ಹೋದೆವು. ಒಳಗೆ ಹೋಗಿ ಕುಳಿತಾಗ ಆ ಚಿಕ್ಕ ಹುಡುಗ, "ಕುಂದಾಪುರಕ್ಕೆ ಹೋಗಿದ್ದಾರೆ. ಈಗ ತಿರುಗಿ ಬರುತ್ತಾರೆ," ಅಂದ. ಸ್ವಲ್ಪ ಹೊತ್ತಿನಲ್ಲಿ ಡಾ. ಕಾರಂತರು ಬಂದೇಬಿಟ್ಟರು. ಅವರು ಕಾರು ಇಳಿದು ಬರುವಾಗ ಬಾಗಿಲಲ್ಲಿ ನಿಂತು ನಮಸ್ಕರಿಸಿದೆ. "ಏನು ಈಗ ಇಲ್ಲಿ? ಯಾವಾಗ ಬಂದದ್ದು?" ಎಂದು ತಟ್ಟನೆ ಬಂತು ಕಾರಂತರಿಂದ ಪ್ರಶ್ನೆ. ನಾನು ಮಣಿಪಾಲಕ್ಕೆ ಆರೋಗ್ಯ ತಪಾಸಣೆಗಾಗಿ ಬಂದ ವಿಷಯ ಹೇಳಿದೆ. ವಿವರವಾಗಿ ಕೇಳಿದರು. "ಡಾಕ್ಟರರು ಏನನ್ನುತ್ತಾರೆ?" ಎಂದು ಪ್ರಶ್ನಿಸಿದರು. ಎಕ್ಸರೇ ತೆಗೆದದ್ದು, ಕೆಲವು ಔಷಧ, ಗುಳಿಗೆ ಬರೆದು ಕೊಟ್ಟದ್ದು ಹೇಳಿದೆ. ಮತ್ತು ಈಗ ನಾವಿಲ್ಲಿ ಬಂದು ಹೋದದ್ದನ್ನೂ ತಿಳಿಸಿದೆ. "ನೀವು ಬಂದಾಗ ಮಕ್ಕಳು ಏನಾದರೂ ಕೊಟ್ಟರೋ?"ಎಂದು ಕೇಳಿದರು. "ನಮಗೇನೂ ಬೇಡವಾಗಿತ್ತು,"ಅಂದೆ. ಮಕ್ಕಳಿಗೆ ಯಾರು ಬಂದಿದ್ದಾರೆ, ಏನು ಮಾಡಬೇಕು ಅನ್ನುವುದು ತಿಳಿಯುವುದಿಲ್ಲ ಅನ್ನುತ್ತ ಅರಿವೆ ಕಳೆದು ಒಳಗೆ ಹೋದವರು ಬರುವಾಗ ಎರಡು ಗ್ಲಾಸು ಶರಬತ್ತನ್ನು ತಾವೇ ತಂದುಕೊಟ್ಟರು, ಅಂಕೋಲೆಯಲ್ಲಿಯ ಪರಿಚಯಸ್ಥರ ಬಗೆಗೂ ವಿಚಾರಿಸಿದರು.

ಸ್ವಲ್ಪ ಹೊತ್ತು ಮಾತನಾಡಿ, "ನಾವಿನ್ನು ಬರುತ್ತೇವೆ," ಎಂದು ನಮಸ್ಕರಿಸಿ ಎದ್ದು ನಿಂತೆ. ಆಗ ಕಾರಂತರು, "ಛೇ! ಮಧ್ಯಾಹ್ನದ ಹೊತ್ತು; ಊಟ ಮಾಡಿ ಹೋಗಿ. ಆದರೆ ಇಷ್ಟೇ, ಒಂದು ಹತ್ತು ನಿಮಿಷ ಕಾಯಬೇಕು," ಎಂದು ಆಗ್ರಹಪೂರ್ವಕ ಕೂಡ್ರಿಸಿದರು. ನೆನಪಿನ ಸುರುಳಿ ಬಿಚ್ಚತೊಡಗಿತು.

ಈಗ ಡಾ. ಕಾರಂತರು ಏಕಾಕಿಯಾಗಿದ್ದರು. ಹಿಂದೊಮ್ಮೆ ನಾನು 'ಸುಹಾಸ'ಕ್ಕೆ ಬಂದಿದ್ದಾಗ ಶ್ರೀಮತಿ ಲೀಲಾ ಕಾರಂತರು ಇದ್ದರು. ಆದರೆ ಕಾರಂತರು ಇದ್ದಿರಲಿಲ್ಲ. ಅವರೂ ಇಂದಿನಷ್ಟೆ ಉಪಚಾರವನ್ನು ಮಾಡಿದ್ದರು. "ಬಿಸಿಲು ಬಹಳ, ಸ್ವಲ್ಪ ತಡೆದು ಹೋಗಿ," ಎಂದು ನಿಲ್ಲಿಸಿಕೊಂಡು ಕಾರಂತರಿಗೆ ಬಂದ ಜ್ಞಾನಪೀಠ ಪ್ರಶಸ್ತಿಯನ್ನು ತೋರಿಸಿದ್ದರು. ಡಾ. ಕಾರಂತರು "ಏಳಿ," ಎಂದು ಕರೆದಾಗಲೇ ನನ್ನ ನೆನಪಿನ ನೂಲು ಕತ್ತರಿಸಿತು.

ಡಾ. ಕಾರಂತರೊಂದಿಗೆ ಊಟ! ಏನೋ ಒಂದು ಅವಿಸ್ಮರಣೀಯ ಮೈ ಪುಲಕ. ಸುಮಾರು ಹದಿನಾಲ್ಕು ವಯಸ್ಸಿನ ಹುಡುಗಿ ನಮಗೆ ಊಟ ಬಡಿಸಿದಳು. ಡಾ. ಕಾರಂತರ ಊಟ ತುಂಬ ಸರಳ. ನಿಯಮಿತ ಪ್ರಮಾಣ. ಊಟ ಮುಗಿಯುತ್ತಿದ್ದಂತೆ ಒಂದು ಬಟ್ಟಲು ಮೊಸರು. ನಮ್ಮ ಊಟ ಮುಗಿಯುತ್ತಿದ್ದಂತೆ ಆ ಹುಡುಗಿ ಉಪ್ಪಿನಕಾಯಿ ತಂದಳು. ಡಾ ಕಾರಂತರು ಕಣ್ಣರಳಿಸಿ, "ಅದನ್ನು ಈಗ ಬಡಿಸೋದೆ?" ಅಂದರು. ಪಾಪ, ಆ ಹುಡುಗಿ ಹಿಂದೆ ಸರಿದುಬಿಟ್ಟಳು.

ಊಟ ಮಾಡಿ ಹೊರಗೆ ಬರುತ್ತಿದ್ದಂತೆಯೇ, "ಇನ್ನು ನೀವು ಹೋಗಬಹುದು. ನಾನು ನಿಮ್ಮನ್ನು ಬಿಡುತ್ತೇನೆ. ಆದರೆ ಹೊರಗಿನ ಬಿಸಿಲು ನಿಮ್ಮನ್ನು ಬಿಡುವುದಿಲ್ಲ," ಎಂದರು. ಇಲ್ಲ, ನಾವೀಗ ಹೋಗಿ ಬಿಡುತ್ತೇವೆಂದು ಎದ್ದೆವು. "ನೇರವಾಗಿ ಹೋಗಿ. ಅಲ್ಲಿ ಕ್ರಾಸ್ ಇದೆ. ಅಲ್ಲಿ ನಿಂತುಕೊಂಡರೆ ಬಸ್ ಬರುತ್ತೆ. ಬಸ್ ನಿಲ್ಲೋದೂ ಅಲ್ಲೇನೆ," ಎಂದು ಬೀಳ್ಕೊಟ್ಟರು.

ಡಾ. ಕಾರಂತರ ಆತಿಥ್ಯ ಸ್ವೀಕರಿಸಿ, ಆ ಹಿರಿಯ ಚೇತನದೊಂದಿಗೆ ಊಟ ಮಾಡಿ ಬಂಧ ಅವಕಾಶ ನನ್ನ ಜೀವನದುದ್ದಕ್ಕೂ ಹಸಿರಾಗಿ ಉಳಿಯುವ ನೆನಪು.

ನಾನು ಅಂಕೋಲೆಯ ಜಿಸಿ. ಕಾಲೇಜಿನ ಲೈಬ್ರರಿಯಿಂದ ನಿವೃತ್ತನಾದದ್ದು ೧೯೮೯ರ ಮಾರ್ಚ್ ತಿಂಗಳಲ್ಲಿ. ವೇಳೆ ಕಳೆಯಲು ಬೇರೆ ಏನನ್ನಾದರೂ ಮಾಡಬೇಕೆನ್ನುವ ವಿಚಾರದಲ್ಲಿದ್ದೆ. ಅದೇ ವರ್ಷ ಮೇ ತಿಂಗಳ ೧ನೇ ತಾರೀಖಿನಂದು ಅಂಕೋಲೆಯಲ್ಲಿ ಜಿಲ್ಲಾ ಮಟ್ಟದ ಜಾನಪದ ಸಮ್ಮೇಳನ ನಡೆಯಿತು. ಅದರ ಉದ್ಘಾಟನೆಗೆ ಡಾ. ಶಿವರಾಮ ಕಾರಂತರೇ ಬಂದಿದ್ದರು. ಆ ಸಂದರ್ಭದಲ್ಲಿಯೂ ಅವರನ್ನು ಭೇಟಿಯಾಗಿದ್ದೆ. ನಾನು ನಿವೃತ್ತನಾದದ್ದನ್ನು ಅವರಿಗೆ ಪತ್ರ ಬರೆದು ತಿಳಿಸಿ ನನಗೆ ವಿ. ದಿನಕರ ದೇಸಾಯಿ ಅವರಲ್ಲಿ ಕೆಲಸ ಕೊಡಿಸಿ ನನ್ನ ಬದುಕಿಗೊಂದು ನೆಲೆ ತಂದುಕೊಟ್ಟ ಅವರ ಉಪಕಾರವನ್ನು ಸ್ಮರಿಸಿ ಕೃತಜ್ಞತೆ ಸಲ್ಲಿಸಿದ್ದೆ.

ಡಾ. ಕಾರಂತರು, "ಇನ್ನೇನು ಮುಂದೆ?" ಅಂದರು. "ನಾನೀಗ ರಿಟೈರ್ಡ್" ಅಂದೆ. "ಅದು ಗೊತ್ತಾಗಿದೆ. ಈಗ ಏನಾದರೂ ಮಾಡಬೇಕಲ್ಲ" ಅಂದರು. ನಾನು ಅನುಮಾನಿಸಿದೆ. ಅವರೇ, "ನೋಡೋಣ," ಅಂದರು. ನನಗಾಗಿ ಯಾವುದಾದರೂ ಕೆಲಸ ಹುಡುಕುವ ಧಾಟಿ ಅವರ ಮಾತಿನಲ್ಲಿತ್ತು. ಆ ಪ್ರಕಾರ ಒಂದೆರಡು ಛಾಪಖಾನೆ ವಿಚಾರಿಸಿದೆ. "ಅವು ನಿಮಗೆ ತಕ್ಕವಲ್ಲ," ಎಂದು ಪತ್ರ ಬರೆದರು. ಮತ್ತೊಂದು ಪತ್ರದಲ್ಲಿ "ನಿಮಗೆ ಪ್ರಾಪಂಚಿಕ ತೊಂದರೆ ಇರುವಂತಿದ್ದರೆ ನಾನು ಪ್ರತಿ ತಿಂಗಳೂ ಸಾಧ್ಯವಾದಷ್ಟು ಆರ್ಥಿಕ ಅನುಕೂಲ ಮಾಡಿಕೊಡಬಹುದು," ಎಂದು ಬರೆದಿದ್ದರು. ಅದನ್ನು ಓದುತ್ತಿದ್ದಂತೆ ನನ್ನ ಕಣ್ಣುಗಳೆರಡೂ ತುಂಬಿ ಬಂದವು. ನೌಕರಿ ಇಲ್ಲದಾಗ ನೌಕರಿ ಕೊಡಿಸಿದರು. ನೌಕರಿಯಿಂದ ನಿವೃತ್ತನಾದಾಗ ಬೇರೆ ಕೆಲಸಕ್ಕೆ ಪ್ರಯತ್ನಿಸಿದರು. ಕೆಲಸ ಸಿಗಲು ವಿಳಂಬವಾಗುವುದು ಎನಿಸಿದಾಗ ಆರ್ಥಿಕ ನೆರವು ನೀಡಲು ಮುಂದಾದರು. ಡಾ. ಶಿವರಾಮ ಕಾರಂತರು ನನ್ನ ಬಗ್ಗೆ ತಾಳಿದ, ತೋರಿಸಿದ ಅನುಕಂಪ, ಪ್ರೀತಿ-ವಿಶ್ವಾಸವನ್ನು ಮೂವತ್ನಾಲ್ಕು ವರ್ಷಗಳವರೆಗೆ ನನ್ನನ್ನು ದುಡಿಸಿಕೊಂಡವರೂ ತೋರಿಸಲಿಲ್ಲ. ಆದರೆ ದಿನಕರ ದೇಸಾಯಿ ಅವರು ನಿಧನರಾದಾಗ ತಂದೆ ಇದ್ದೂ ನಾನು ಪರದೇಶಿಯಾದೆ. ಡಾ. ಶಿವರಾಮ ಕಾರಂತರು ನನ್ನ ಬಗ್ಗೆ, ನನ್ನ ಕುಟುಂಬದ ಬಗ್ಗೆ ತೋರಿಸಿದ ಔದಾರ್ಯವನ್ನು ನಾನೆಂದೂ ಮರೆಯಲಾರೆ. ನಿಮ್ಮ ಆಶೀರ್ವಾದ ಸಾಕು. ಆರ್ಥಿಕ ನೆರವು ಬೇಡ, ಬೇಕಾದರೆ ತಮಗೆ ಕೇಳಿ ಬರೆಯುವೆ, ಎಂದು ಅವರಿಗೆ ತಿಳಿಸಿದೆ. ಇಂಥವರು ಇದ್ದುದರಿಂದಲೇ ಅಲ್ಲವೆ ದಯೆ, ಅನುಕಂಪ, ಸದ್ಗುಣಗಳಿಗೆ ಏನಾದರೂ ಅರ್ಥ ಉಳಿದಿರುವುದು? ●

# ಅಚ್ಚಳಿಯದ ಪುಟಗಳು

# ಹಸುರು ಹೊನ್ನು!

❖ ಪ್ರಕಾಶಕರು
'ಹಸುರು ಹೊನ್ನು'
ಕಾರ್ಯಾಲಯ ಪ್ರಕಾಶನ
ಮೈಸೂರು - ೫೭೦ ೦೧೪
ಪುಟ: ೪೧೧+ ಚಿತ್ರಗಳು

ಬಿ.ಜಿ.ಎಲ್. ಸ್ವಾಮಿಯವರು ಮದರಾಸಿನ ಪ್ರೆಸಿಡೆನ್ಸಿ ಕಾಲೇಜಿನಲ್ಲಿ ಸಸ್ಯಶಾಸ್ತ್ರ ಪ್ರಾಧ್ಯಾಪಕರಾಗಿದ್ದಾಗ ಸ್ನಾತಕೋತ್ತರ ವಿದ್ಯಾರ್ಥಿಗಳೊಡನೆ ಅರಣ್ಯ ಪ್ರವಾಸಕ್ಕೆ ಹೋಗಿದ್ದಂತಹ ಅನೇಕ ಸಂದರ್ಭಗಳಲ್ಲಿನ ಅನುಭವಗಳನ್ನು ತಮ್ಮ ಕೃತಿ 'ಹಸುರು ಹೊನ್ನು'ದಲ್ಲಿ ವಿವರಿಸಿದ್ದಾರೆ. ಈ ಪುಸ್ತಕದಿಂದ ಆಯ್ದ ಎರಡು ಪ್ರಸಂಗಗಳು ಇಂತಿವೆ.

ಪೊರಿಂಗಲ್ ಕುತ್ತಿಗೆ ಮೂರು ಮೈಲಿ ದೂರದಲ್ಲಿರುವ ಒರಕುಂಬನ್ ಎಂಬ ಕಾಡು ಪ್ರದೇಶದಲ್ಲಿ ಲೇಖಕರಿಗೆ ಮಿರಿಸ್ಟಿಕ ಮಲಬಾರಿಕ ಮರ (ಜಾಯಿಕಾಯಿ ಜಾತಿಗೆ ಸೇರಿದ ಮರ) ನೋಡಿದಾಗ ನೆನಪಾದ ಘಟನೆ ಇಂತಿದೆ.

ಮಿರಿಸ್ಟಿಕ ಪ್ರಧಾನ ಜಾತಿಯ ಒಳಜಾತಿಗಳಿಗೆಲ್ಲ ಒಂದು ವೈವಿಧ್ಯವಿದೆ. ವಿದ್ಯಾರ್ಥಿಗಳಿಗೆ ಇದನ್ನು ತಿಳಿಸಬೇಕೆಂದು ನನಗೆ ಆಸೆ. ಆದರೆ ಒಂದು ವಿಧವಾದ ಅಂಜಿಕೆ. ಕೆಲವು ವರ್ಷಗಳ ಹಿಂದೆ ನಡೆದ ಘಟನೆ ಇದು. ಕೊಡಚಾದ್ರಿ ಘಟ್ಟಗಳಲ್ಲಿ ಸಸ್ಯ ಸಂಗ್ರಹಣಾಕಾರ್ಯಕ್ಕಾಗಿ ಹೋಗಿದ್ದೆ. ಅಲ್ಲಿ ಅಮೆರಿಕದಿಂದ ಮೃಗಬೇಟೆಗಾಗಿ ನಾಲ್ಕೈದು ಜನ ಬಂದಿದ್ದರು. ಇವರ ಪರಿಚಯವಾಯಿತು. ಅವರಲ್ಲೊಬ್ಬ ಆಫ್ರಿಕ ಕಾಡುಗಳಲ್ಲಿ ನೂರಾರು ಸಿಂಹಗಳನ್ನು ಸುಟ್ಟಿದ್ದನಂತೆ; ಸುಮಾತ್ರ-ಬೋರ್ನಿಯೊ ಕಾಡುಗಳಲ್ಲಿ ಹುಲಿ, ಚಿರತೆ, ಕರಡಿಗಳನ್ನು ಸುಟ್ಟಿದ್ದನಂತೆ, ವಿಷ ಸರ್ಪಗಳೊಂದಿಗೆ ಕಾಳಗವಾಡಿದ್ದನಂತೆ, ನೋಡುವುದಕ್ಕೆ ಪಳಗಿದ ಪೈಲ್ವಾನನಂತಿದ್ದ. ಅಜಾನುಬಾಹು, ಕೆಂಪು ತಲೆಗೂದಲು, ಗಡ್ಡಮೀಸೆಗಳು; ಸ್ವಲ್ಪ ಭಯಂಕರನಾಗಿಯೇ ಕಂಡ. ಆಕಾರಕ್ಕೂ ಅನುಭವಕ್ಕೂ ತಕ್ಕ ಹೆಮ್ಮೆಯ ಮಾತುಕತೆಗಳು.

ಆ ಗುಂಪಿನಲ್ಲೊಬ್ಬ ಕೆಲವು ಗಿಡಮರಗಳ ಪರಿಚಯ ಮಾಡಿಕೊಳ್ಳಬೇಕೆಂಬ ಆಸೆಯನ್ನು ವ್ಯಕ್ತಪಡಿಸಿದ. ಎಲ್ಲರೂ ಒಟ್ಟಿಗೆ ಕಲೆತು ಕಾಡಿನ ಒಳಗನ್ನು ಹೊಕ್ಕೆವು. ಮರಗಿಡಗಳ ಪರಿಚಯ ಮಾಡಿಕೊಳ್ಳುತ್ತಿದ್ದಾಗ ಮಿರಿಸ್ಟಿಕ ಮರವೊಂದನ್ನು ತೋರಿಸಿ, ಅದರ ವಿಷಯವನ್ನು ವಿವರಿಸುತ್ತ ಕೈಲಿದ್ದ ಕುಕ್ರಿಯಿಂದ ತೊಗಟೆಯ ಮೇಲೆ ಬಲವಾದ ಕಚ್ಚು ಮಾಡಿದ. ಗಾಯದಿಂದ ಕೆಂಪು ದ್ರವ ಚಂಗನೆ ಹಾರಿ ಧಾರೆಧಾರೆಯಾಗಿ ಹರಿಯಿತು; ಹತ್ತು ನಿಮಿಷವಾದರೂ ಹರಿಯುವ ತೀವ್ರತೆ ಕುಂದದೆ ಚಿಲುಮೆಯಂತೆ ಉಕ್ಕಿ ಬರುತ್ತಲೇ ಇತ್ತು. ರಕ್ತದ್ದೇ ಬಣ್ಣ. ಅದರಷ್ಟೇ ಮಂದ. ಗಾಳಿ ತಗುಲಿ ಆರಿದಾಗ ಅದರಂತೆಯೇ ಕಪ್ಪು ಬಣ್ಣದ ಪೊರಕು ಕಟ್ಟಿ ಗಟ್ಟಿಯಾಗುತ್ತದೆ. ಬೇಟೆಯ ವೀರ ಇದನ್ನು ನೋಡಿ ಕಣ್ಮುಚ್ಚಿಕೊಂಡು 'ಹಾ' ಎಂದು ಚೀರಿ ಪ್ರಜ್ಞೆ ತಪ್ಪಿದ, ನೆಲಕ್ಕೆ ಕುಸಿದು ಬಿದ್ದ. ಹಾಸನದ ಆಸ್ಪತ್ರೆಗೆ ಇವನನ್ನು ಸಾಗಿಸಿದರು. ಚಿಕಿತ್ಸೆ ಮಾಡಿದರು. ಎರಡು ದಿನವಾದ ಮೇಲೆ ಪ್ರಜ್ಞೆ ಬಂದಿತು. ರಕ್ತವನ್ನಾಗಲಿ ಅದನ್ನು ಹೋಲುವ ಯಾವುದೇ ಕೆಂಪು ಬಣ್ಣದ ದ್ರವವನ್ನಾಗಲಿ ನೋಡಿದಾಗ ಕೆಲವರಿಗೆ ಅವರು ಎಷ್ಟೇ ಧೈರ್ಯಶಾಲಿಗಳಾಗಿದ್ದರೂ ಸಹಿಸಲಾಗದು. ನಮ್ಮಲ್ಲಿಯೂ ಇಂಥವರಿದ್ದು, ಈ ತೆರನಾದ ಅನಾಹುತವಾದರೆ ಅದರ ಜವಾಬ್ದಾರಿಯನ್ನು ಹೊರಲು ನಾನು ಸಿದ್ಧನಾಗಿರಲಿಲ್ಲ. ಆದ್ದರಿಂದ ಬೇರೊಂದು ಸಮಯ ಒದಗಿ ಬಂದಾಗ ನೋಡಿಕೊಳ್ಳೋಣವೆಂದುಕೊಂಡೆ.

ಎರಡನೆಯದು ಇಂತಿದೆ.

ಹಿಂದಿನ ದಿನ ಒರಕುಂಬನ್ ಕಾಡಿನಲ್ಲಿ ಎಲಿಯಾಕಾರ್ಪಸ್ ಎಂಬ ಮರವನ್ನು ಕಂಡಿದ್ದೆವು. ನಮ್ಮೊಡನಿದ್ದ ಡಿಸ್ಟ್ರಿಕ್ಟ್ ಫಾರೆಸ್ಟ್ ಆಫೀಸರು ಅದರ ಕಾಯೊಂದನ್ನು ಹಲ್ಲಿನಿಂದ ಕಡಿದು ಅದನ್ನು ತಿನ್ನಬಹುದೆಂದು ಹೇಳಿದ್ದರು. ಇದು ಮೈಸೂರು ಕಾಡುಗಳಲ್ಲಿ ಸಟ್ಟಿಗ ಎಂದು ಹೇಳುವ ಮರಜಾತಿಗೆ ಸೇರಿದ್ದು; ಇದರ ಕಾಯಿಗಳನ್ನು ತಿನ್ನುತ್ತಾರೆಂದು ನಮಗೆ ತಿಳಿದಿರಲಿಲ್ಲ. ಈಗ ನಮ್ಮೆದುರಿಗೆ ಅದೇ ಮರ ಬೆಳೆದಿತ್ತು. "ಈ ಮರದ ಕಾಯಿಗಳನ್ನು ತಿನ್ನುತ್ತಾರೆಯೇ?" ಎಂದು ಕನ್ಸರ್‌ವೇಟರನ್ನು ಕೇಳಿದೆ.

"ಯಾರು ನಿಮಗೆ ಹೇಳಿದ್ದು?"

"ನಿಮ್ಮ ಡಿಸ್ಟ್ರಿಕ್ಟ್ ಫಾರೆಸ್ಟ್ ಆಫೀಸರು," ಎಂದೆ.

"ಅವನೊಬ್ಬ ಗಾರ್ದಭ"ಎಂದು ಸಂಸ್ಕೃತದಲ್ಲಿಯೇ ಹೇಳಿ, "ಅದು ವಿಷ. ಅದನ್ನು ತಿಂದರೆ ಜನ

ಸಾಯುತ್ತಾರೆ" ಎಂದರು. ಇದನ್ನು ಕೇಳಿಸಿಕೊಂಡ ಡಿಸ್ಟ್ರಿಕ್ಟ್ ಫಾರೆಸ್ಟ್ ಆಫೀಸರು, ಅವನ ಕೆಳಗಿನ ದರ್ಜೆಯ ಅಧಿಕಾರಿಯಾದ ರೇಂಜರನ್ನು ದುರು ದುರು ನೋಡಿ, "ನೀನೊಂದು ಹೇಳಿ ಮಾಡಿಸಿದ ಕತ್ತೆ. ನೀನು ತಾನೆ ನನಗೆ ಹೇಳಿದ್ದು!"ಎಂದು ಬೈದ. ರೇಂಜರು ಫಾರೆಸ್ಟರನನ್ನು ಗದರಿಸಿ, "ನೀನು ಅಸಲು ಕತ್ತೆ" ಎಂದ. ಫಾರೆಸ್ಟರ್ ಗಾರ್ಡಿಗೆ ಇದೇ ಪ್ರಯೋಗವನ್ನು ಮಾಡಿ, "ನೀನು ತಾನೆ ನನಗೆ ಹೇಳಿದ್ದು?" ಎಂದ. ಗಾರ್ಡು ಕಾವಲುಗಾರನನ್ನು ತಿವಿದು, "ಇದೆಲ್ಲವೂ ನಿನ್ನಿಂದ ಆದದ್ದು, ನೀನು ಮೆದುಳಿಲ್ಲದ ಕತ್ತೆ, ಒದ್ದು ಬಿಡುತ್ತೇನೆ ಮುಠ್ಠಾಳ,"ಎಂದ. ಕಾವಲುಗಾರ ನಮ್ಮೊಡನೆ ಬಂದಿದ್ದ ಮರ ಹತ್ತುವವನನ್ನು ಕರೆದು, "ಹೊಟ್ಟೆಗೆ ಏನನ್ನು ತಿಂದು ಹೀಗೆ ಬೆಳೆದಿದ್ದೀಯೋ, ಕೊಳೆತ ಮೆದುಳಿನ ಕತ್ತೆ! ನೀನು ತಾನೆ ನನಗೆ ಹೇಳಿದ್ದು, ಇದರ ಕಾಯನ್ನು ತಿನ್ನುತ್ತಾರೆಂದು?" ಎಂದು ತನ್ನ ಮೇಲಿನ ಅಪವಾದವನ್ನು ತೀರಿಸಿಕೊಂಡ. ಮರ ಹತ್ತುವವನಿಗೆ ಆಶ್ಚರ್ಯವಾಯಿತು. "ನಾನು ತೋರಿಸಿದ್ದು ಈ ಮರವೇ ಅಲ್ಲ. ಇದು ವಿಷ.' ಮೀನನ್ನು ಕೊಲ್ಲುವುದಕ್ಕೆ ಉಪಯೋಗಿಸುತ್ತೇವೆ. ನಾನು ತೋರಿಸಿದ ಮರವೇ ಬೇರೆ,"ಎಂದ. ಕಾವಲುಗಾರ ಹಲ್ಲು ಕಚ್ಚಿ, "ಇನ್ನು ಮೇಲೆ ಹುಷಾರ್,"ಎಂದು ಕಾರಣವಿಲ್ಲದ ಬೆದರಿಕೆ ಹಾಕಿದ. ಮರ ಹತ್ತುವವನು ತನ್ನೊಳಗೇ ಗೊಣಗುಟ್ಟಿಕೊಂಡು ಸುಮ್ಮನಾದ.

(ಗಾರ್ಡನ್ನು ಉಳಿದು ಇತರೇ ಅರಣ್ಯ ಇಲಾಖೆ ಅಧಿಕಾರಿ, ನೌಕರರು ತೆರಳಿದ ನಂತರ)

ಹುಡುಗರು ಸಂದರ್ಭವನ್ನರಿತು ಮುಚ್ಚಿಕೊಂಡಿದ್ದ ಬಾಯನ್ನು ತೆರೆದರು. ಶಿಂಗನ ಆಶ್ಚರ್ಯವನ್ನು ಹೇಳ ತೀರದು; "ಅಬ್ಬಬ್ಬ! ಅರಣ್ಯ ಇಲಾಖೆಯಲ್ಲಿ ಎಷ್ಟೊಂದು ಕತ್ತೆಗಳು ಮೇಯುತ್ತಿವೆ!" ಎಂದ. "ಅದೂ ಎಷ್ಟೊಂದು ದರ್ಜೆಗಳ ಕತ್ತೆಗಳು! ಅಂದ ಸಲೀಮ್ ಪಾಷಾ; "ಕನ್ಸರ್‌ವೇಟರರದು ಯಾವ ದರ್ಜೆಯೋ?"ಅಂದ ಶಿಂಗ; "ಅದರ ಬಗ್ಗೆ ಚೀಫ್ ಕನ್ಸರ್‌ವೇಟರನ್ನು ಕೇಳಬೇಕು," ಎಂದು ಬಂತು ಉತ್ತರ.

❋ *ಕೆ. ರಾಜೇಶ*

---

# ಭೂಮಿಗೀತೆ

**ಕ್ರಾಂತಿ ಕಹಳೆ ಊದಿದ ಕೆ.ಟಿ. ಗಟ್ಟಿಯವರ 'ಭೂಮಿಗೀತೆ'ಕಾದಂಬರಿಯಿಂದ ಆಯ್ದುಕೊಳ್ಳಲಾಗಿದೆ. ಪ್ರಕಾಶಕರು: ಪ್ರತಿಭಾ ಸಾಹಿತ್ಯ ಮಾಲೆ, ಬೆಂಗಳೂರು.**

*ಇದುವರೆಗೆ ಯಾವ ಪ್ರಧಾನಮಂತ್ರಿಗೂ ಈ ದೇಶದ ಸುಮಾರು ಅರುವತ್ತು ಸಿರಿವಂತರು ನಿರ್ಮಿಸಿದ ಚಕ್ರವ್ಯೂಹವನ್ನು ಮುರಿದು ಹೊರಬರಲು ಸಾಧ್ಯವಾಗಿಲ್ಲ. ಇಡೀ ದೇಶದ ಆರ್ಥಿಕ ವ್ಯವಸ್ಥೆ ಈ ಅರವತ್ತು ಕುಟುಂಬಗಳ ನಿಯಂತ್ರಣದಲ್ಲಿದೆ. ಒಂದಲ್ಲ ಒಂದು ವಿಧದಲ್ಲಿ ಶೇಕಡ ಎಪ್ಪತ್ತೈದು ಜನಪ್ರತಿನಿಧಿಗಳು ಈ ಟೈಕೂನುಗಳ ಕೃಪಾ ಛತ್ರದಡಿಯಲ್ಲಿದ್ದಾರೆ. ಈ ಸಿರಿವಂತ ಕುಟುಂಬಗಳು ನಡೆಸುವ ನಾನಾ ವ್ಯವಹಾರಗಳ ಪ್ರಭಾವ ಇಡೀ ರಾಷ್ಟ್ರದಲ್ಲಿ ಜರುಗುವ ಎಲ್ಲಾ ಕಾರ್ಯಕ್ರಮಗಳ ಮೇಲೂ ಇದೆ. ಎಲ್ಲಾ ಯೋಜನೆಗಳ ಮೇಲೂ ಇದೆ. ಎಲ್ಲವೂ ಅವರಿಗೆ ಬೇಕಾದಂತೆ ಅಲ್ಲದೆ ಬೇರೆ ರೀತಿ ನಡೆಯುವುದಿಲ್ಲ. ಈ ಅರವತ್ತು ಕುಟುಂಬಗಳೆಂಬ ಆಲದ ಮರಗಳಿಂದ ಇಳಿಬಿದ್ದ ಬಿಳಲುಗಳಂತೆ ಮತ್ತೆ ಹಲವು ಸಾವಿರ ಟೈಕೂನುಗಳಿದ್ದಾರೆ. ಯಾಕೆ ಈ ದೇಶದಲ್ಲಿ ಬಡವರ ಸಂಖ್ಯೆ ಅಧಿಕವಾಗುತ್ತಾ ಹೋಗುತ್ತಿದೆ? ಯಾಕೆ ಈ ದೇಶದಲ್ಲಿ ಸಾಕ್ಷರತೆ ಹೆಚ್ಚುತ್ತಿಲ್ಲ? ಯಾಕೆ ಈ ದೇಶದಲ್ಲಿ ಯೋಜನೆಗಳ ಸಿಂಹಪಾಲು ಬಡಜನರಿಗೆ ತಲುಪುತ್ತಿಲ್ಲ? ಯಾಕೆ ಈ ದೇಶದಲ್ಲಿ ರಾಷ್ಟ್ರೀಯ ಆದಾಯ ಇದ್ದೂ ಇಲ್ಲದಂತಾಗಿದೆ. ಇವೆಲ್ಲಾ ಪ್ರಶ್ನೆಗಳಿಗೂ ಉತ್ತರವಾಗಿ ಈ ಅರವತ್ತು ಕುಟುಂಬಗಳನ್ನು ಬೊಟ್ಟಿಟ್ಟು ತೋರಿಸಬಹುದು. ಈ ದುಃಸ್ಥಿತಿಗೆ ಎರಡು ಬಗೆಯಲ್ಲಿ ಪರಿಹಾರ ಕಾಣಬಹುದು. ಒಂದೋ ಇದು ಅಮೇರಿಕದಂತೆ ಶುದ್ಧ ಕ್ಯಾಪಿಟಲಿಸಂ ಆಗಲಿ, ಬಡವ, ಸೋಮಾರಿ ಭಿಕ್ಷುಕ ಎಲ್ಲಾ ಹೊಂಡಕ್ಕೆ ಹೋಗಲಿ, ಮುಳುಗಲಿ, ಮಣ್ಣು ಮುಕ್ಕಲಿ ಅವನ ಬಗ್ಗೆ ಯಾವ ಅನುಕಂಪದ ಕಣ್ಣೀರು ಅಗತ್ಯವಿಲ್ಲ. ಸಾಧ್ಯವಿದ್ದರೆ ಅವನೂ ಕ್ಯಾಪಿಟಲಿಸ್ಟ್ ಆಗಲಿ ಅಥವಾ ಇದು ಶುದ್ಧ ಸೋಶಿಯಲಿಸಂ ಆಗಲಿ.*

*ಧೈರ್ಯದಿಂದ ಇಂಥದೊಂದು ಹೆಜ್ಜೆ ಇಡಬಲ್ಲ ಪ್ರಧಾನ ಮಂತ್ರಿ ಈ ದೇಶಕ್ಕೆ ಬೇಕು. ವಾಣಿಜ್ಯೋದ್ಯಮ ಚಕ್ರವರ್ತಿಗಳಿಂದ ಹಾರ ಹಾಕಿಸಿಕೊಳ್ಳುವ ಕಾಳಸಂತೆಕೋರರು, ಕಳ್ಳ ಸಾಗಾಣಿಕೆಗಾರರು, ಕಾಳಧನವಂತರು, ಹೆಂಡದ ದೊರೆಗಳು ಮುಂತಾದವರಿಂದ ದೇಣಿಗೆಯನ್ನು ಸಂಗ್ರಹಿಸುವ ಪೂಜಿಸಿಕೊಳ್ಳುವುದರಲ್ಲಿ ಬ್ರಹ್ಮಾನಂದವನ್ನು ಪಡೆಯುವ ಆ ಹಳೆಯ ಪ್ರಧಾನಮಂತ್ರಿ ಈ ದೇಶಕ್ಕೆ ಇನ್ನು ಸಾಕು. ಈ ದೇಶದ ನರನಾಡಿಗಳಲ್ಲಿ ಒಂದು ಹೊಸ ಯುಗದ ಸ್ಪಂದನವನ್ನು ಹುಟ್ಟಿಸಿ ಒಂದು ಅದ್ಭುತ ಚಮತ್ಕಾರವನ್ನು ತೋರಿಸಿ ಅದರ ಆನಂದಕ್ಕಾಗಿ ಎಲ್ಲವನ್ನು ಕೊಡಬಲ್ಲ ಕೆಚ್ಚೆದೆಯ ಪ್ರಧಾನಿ ಬೇಕು.*

✤ (ಸಂಗ್ರಹ) ಪ್ರಕಾಶ ಎಸ್. ಮನ್ನಂಗಿ

# ವೃದ್ಧರೇಕೆ ಮರೆಗುಳಿಗಳು?

● ಎಚ್.ಆರ್. ಸುರೇಶ

"ನಾನಾಗ ಚಿಕ್ಕ ಹುಡುಗನಾಗಿದ್ದೆ. ನಮ್ಮ ಹಳ್ಳಿಯಿಂದ ೧೦ ಮೈಲು ದೂರದಲ್ಲಿದ್ದ ಪಟ್ಟಣದಲ್ಲಿ ವಾರಕ್ಕೊಂದು ಸಾರಿ ಸಂತೆ ನೆರೆಯುತ್ತಿತ್ತು. ಇಡೀ ವಾರ ಹಳ್ಳಿಯಲ್ಲಿದ್ದು ಶಾಲೆಗೆ ಹೋಗಿ, ಹೊಲದ ಕೆಲಸ ಮಾಡಿ ಬೇಸರವಾಗಿರುತ್ತಿತ್ತು. ಹಾಗಾಗಿ ಸಂತೆಯ ದಿನ ಶಾಲೆಗೆ ಚಕ್ಕರ್ ಕೊಟ್ಟಾದರೂ ಸಂತೆಗೆ ಹೋಗುವವರೊಂದಿಗೆ ಓಡುತ್ತಿದ್ದೆ. ಸಂತೆಗೆ ಹೋದ ಮೇಲೆ ಕೇಳಬೇಕೆ, ಕಡ್ಲೇಪುರಿ, ಕೊಬ್ಬರಿ ಮಿಠಾಯಿ ಮತ್ತಿತರ ತಿನಿಸುಗಳನ್ನು ಕಾಡಿ-ಬೇಡಿ ದೊಡ್ಡವರಿಂದ ಕೊಡಿಸಿಕೊಂಡು ತಿನ್ನುತ್ತಿದ್ದೆ. ಅವರು ಕೊಡಿಸಿದ ವಸ್ತುಗಳನ್ನು ಹೊತ್ತುಕೊಂಡು ಮನೆಗೆ ಬರುತ್ತಿದ್ದೆ."

"ಆಗಿನದು ಅದೆಂಥ ಸೋವಿ ಕಾಲವಾಗಿತ್ತು! ಅಂದರೆ ಹದಿನಾರಾಣೆ (ಸರಿಸುಮಾರು ಒಂದು ರೂ) ಕೊಟ್ಟರೆ ೧೨ ಸೇರು ರತ್ನಚೂಡಿ ಅಕ್ಕಿ ೨೦-೨೨ ಸೇರು ರಾಗಿ, ಮಣತೂಕದ ಬೆಲ್ಲ ಎಣ್ಣೆಗಳೆಲ್ಲ ಸಿಕ್ಕುತ್ತಿದ್ದವು. ಅಂದಿನ ಹದಿನಾರಾಣೆ ಇಂದು ಯಾವ ಲೆಕ್ಕಕ್ಕೂ ಇಲ್ಲ. ಹಣದ ಬೆಲೆ ಅಷ್ಟೊಂದು ಇಳಿದಿದೆ....." ಮುಂತಾಗಿ ೫೦-೬೦ ವರ್ಷಗಳ ಹಿಂದಿನ ಸುದ್ದಿಯನ್ನು ರೋಚಕ ಕಥೆ ಮಾಡಿ ಹೇಳುವ ವೃದ್ಧರನ್ನು ನೀವು ಕಂಡಿರಬಹುದು.

ಅವರು ಹೀಗೆ ಹಳೆಯ ಘಟನೆಗಳನ್ನೆಲ್ಲ ಸೋದಾಹರಣವಾಗಿ ವಿವರಿಸುವುದನ್ನು ಕಂಡಾಗ ಅವರ ಈ ಸ್ಮರಣ ಶಕ್ತಿ ವಿಸ್ಮಯವನ್ನೇ ಮೂಡಿಸುತ್ತದೆ.

ಆದರೆ ಅಷ್ಟೊಂದು ಹಳೆಯ ಘಟನೆಯನ್ನು ಸೋದಾಹರಣವಾಗಿ ವಿವರಿಸುವ ವಯೋವೃದ್ಧರು ಐದು ನಿಮಿಷಗಳ ಹಿಂದೆ ತಾವು ಧರಿಸಿದ್ದ ಸುಲೋಚನ (ಚಾಳೀಸ)ವನ್ನೇ ಮರೆಯುವುದು ವಿಚಿತ್ರ ಎನ್ನಿಸುತ್ತದಲ್ಲವೆ? ಇದನ್ನೇ ಸ್ಮರಣಶಕ್ತಿಯ ಹ್ರಾಸ ಎಂದು ಕರೆಯುವುದು.

ಹೀಗೆ ಸ್ಮರಣಶಕ್ತಿ ಹ್ರಾಸಗೊಳ್ಳುವುದಕ್ಕೆ ವಿಜ್ಞಾನಿಗಳ ಅನಿಸಿಕೆ ಹಲವಾರು.

ಆ ಪ್ರಕಾರ ಶಬ್ದಗಳ ಸ್ಮರಣೆ (ಶಬ್ದ ಸಂಪತ್ತು), ಅಭ್ಯಸಿತ ಸ್ಮರಣೆ (ಉದಾ: ಈಜು, ವಾಹನ ಚಾಲನೆ ಮುಂತಾದವು) ಮತ್ತು ದೀರ್ಘಾವಧಿ ಸ್ಮರಣೆ (ಸಾಮಾನ್ಯ ಜ್ಞಾನದ ಪ್ರಶ್ನೆಗಳಿಗೆ ಉತ್ತರಿಸುವ ಸಾಮರ್ಥ್ಯ)ಗಳು ಯಾವುದೇ ಪ್ರಭಾವಕ್ಕೂ ಒಳಗಾಗದೆ ಹಾಗೇ ಉಳಿದಿರುತ್ತವೆ.

ಹಾಗಾದರೆ ವೃದ್ಧರೇಕೆ ಅನ್ಯಮನಸ್ಕರಂತೆ ಕಾಣುತ್ತಾರೆ? ಎಂಬ ಪ್ರಶ್ನೆ ಸಹ ಸಹಜವಾಗಿ ಏಳುತ್ತದೆ. ಇದಕ್ಕೆ ಕಾರಣವೆಂದರೆ ಕಾರ್ಯ ಪ್ರವೃತ್ತ ಸ್ಮರಣೆ ಮತ್ತು ಪ್ರಾಸಂಗಿಕ ಸ್ಮರಣೆಗಳು ದುರ್ಬಲಗೊಳ್ಳುವುದು.



ಕಾರ್ಯ ಪ್ರವೃತ್ತ ಸ್ಮರಣೆ ಒಂದೇ ವೇಳೆಯಲ್ಲಿ ಅನೇಕ ವಿಷಯಗಳ ಬಗೆಗೆ ಯಾವುದೇ ಗೊಂದಲಕ್ಕೆ ಒಳಗಾಗದೆ ಯೋಚಿಸಲು, ಕಾರ್ಯದಲ್ಲಿ ತೊಡಗಿಕೊಳ್ಳಲು ಸಹಾಯಮಾಡುತ್ತದೆ. ಉದಾಹರಣೆಗೆ ೨೫ ವರ್ಷದ ವ್ಯಕ್ತಿಯೊಬ್ಬ ಟಿಪ್ಪಣಿ ಮಾಡಿಕೊಳ್ಳುತ್ತಲೇ, ಸಂಭಾಷಣೆಯಲ್ಲಿ ತೊಡಗಲು ಅಥವಾ ಮತ್ತಾವುದೋ ಕೆಲಸವನ್ನು ಮಾಡಲು ಅವಕಾಶವನ್ನು ಒದಗಿಸುತ್ತದೆ.

ಆದರೆ ಅದಾವುದೋ ಕಾರಣದಿಂದ ಈ ಸಾಮರ್ಥ್ಯ ४೦ ರಿಂದ ೫೦ ವರ್ಷಗಳ ನಡುವೆ ಕುಂಠಿತಗೊಳ್ಳುತ್ತದೆ. ಹಾಗಾಗಿಯೇ ನಾವು ಸಹಜವಾಗಿ ಆ ಕಾಲಘಟ್ಟದಲ್ಲಿ ಕೇಂದ್ರೀಕೃತವಾದ ಕೆಲಸ ಮತ್ತು ಜೀವನ ಶೈಲಿಯನ್ನು ಆಯ್ದುಕೊಳ್ಳತೊಡಗುತ್ತೇವೆ. ವಯಸ್ಸಾದಂತೆಲ್ಲ ನಶಿಸತೊಡಗುವ ಸ್ಮರಣಶಕ್ತಿ ೮೦ ವರ್ಷದ ವೃದ್ಧರಿಗೆ ಕೆಲಕ್ಷಣಗಳ ಹಿಂದೆಯಷ್ಟೆ ತಾನೇನು ಮಾತಾಡುತ್ತಿದ್ದೆ ಎಂಬುದನ್ನೇ ಮರೆತು ಬಿಡುವಂತೆ ಮಾಡುತ್ತದೆ! ಆದರೆ ಇದಕ್ಕೆ ಅಪವಾದಗಳು ಇಲ್ಲದಿಲ್ಲ.

ಅದೇ ರೀತಿ ಪ್ರಾಸಂಗಿಕ ಸ್ಮರಣೆ ಕುಂಠಿತಗೊಳ್ಳುವುದರಿಂದಾಗಿ ಮಾತ್ರೆಯನ್ನು ನುಂಗಿದೆನೋ ಅಥವಾ ಇಲ್ಲವೋ ಎಂಬಂಥ ಸಣ್ಣಪುಟ್ಟ ವಿಚಾರಗಳಿಗೂ ಯೋಚಿಸುವ ವ್ಯವಧಾನವನ್ನೂ ಕಳೆದುಕೊಂಡು ಗೊಂದಲಕ್ಕೆ ಈಡಾಗುವಂಥ ಪರಿಸ್ಥಿತಿ ಸೃಷ್ಟಿಯಾಗುತ್ತದೆ. ಹೀಗಾಗಲು ಕಾರಣ ಆ ಕ್ಷಣದ ಘಟನೆಗಳನ್ನು ನೆನಪಿನಲ್ಲಿ ಇಟ್ಟುಕೊಳ್ಳುವ ಸಾಮರ್ಥ್ಯ ಕುಗ್ಗುವುದಾಗಿದೆ.

ಈ ರೀತಿ ವಿಸ್ಮೃತಿಗೆ ಒಳಗಾಗುವುದನ್ನು ತಪ್ಪಿಸಬೇಕೆಂದರೆ ನಮ್ಮ ಮನಸ್ಸನ್ನು ಆಗಿಂದಾಗ್ಗೆ ತಾರ್ಕಿಕ ಒರೆಗೆ ಹಚ್ಚಬೇಕು ಮತ್ತು ಅದು ಉತ್ತೇಜಿತಗೊಳ್ಳುವಂತೆ ಮಾಡಬೇಕು ಎನ್ನುತ್ತಾರೆ ಸಂಶೋಧಕರು.

೭೦ನೇ ವಯಸ್ಸಿನ ಸುಮಾರಿಗೆ ಬಹುಪಾಲು ಮಿದುಳಿನ ಕೋಶಗಳು ಸತ್ತುಹೋಗಿರುತ್ತವೆ. ಅವುಗಳನ್ನು ಪುನರುಜ್ಜೀವನಗೊಳಿಸಲು ಸಾಧ್ಯವಿಲ್ಲ. ಆಗ ಉಳಿದ ಕೋಶಗಳ ಪೈಕಿ ಶೇ. ೨೦ ಕ್ಕೂ ಹೆಚ್ಚು ಕೋಶಗಳು ತಮ್ಮ ಕ್ರಿಯಾಶೀಲತೆಯನ್ನು ಕಳೆದುಕೊಳ್ಳುತ್ತವೆ.

ಆದರೆ ಆಗಿಂದಾಗ್ಗೆ ಘಟನೆಗಳನ್ನು, ವಸ್ತುಗಳನ್ನು ನೆನಪಿಸಿಕೊಳ್ಳುವ ಮತ್ತು ಸ್ಮೃತಿಗೆ ಸಾಣೆಹಿಡಿಯುವ ಕೆಲಸವನ್ನು ಮಾಡಿದಲ್ಲಿ ಕ್ರಿಯಾಶೀಲಕೋಶಗಳೊಂದಿಗಿನ ಸಂಪರ್ಕವನ್ನು ಕಾಯ್ದುಕೊಳ್ಳುವ ಸಾಮರ್ಥ್ಯವನ್ನು ಆ ಕೋಶಗಳು ಪಡೆದುಕೊಳ್ಳಬಹುದು. ಈ ರೀತಿ ಉಳಿಸಿಕೊಂಡ ಸಂಪರ್ಕ ಗಟ್ಟಿಯಾಗುಳಿದು ಸ್ಮರಣಶಕ್ತಿ ದೀರ್ಘಕಾಲದವರೆಗೆ ಉಳಿಯುತ್ತದೆ. ಅರ್ಥಾತ್ ಮಿದುಳಿಗೆ ಸಾಣೆ ಹಿಡಿಯುವುದೊಂದೆ ಸ್ಮರಣಶಕ್ತಿಯನ್ನು ಉಳಿಸಿಕೊಳ್ಳಲು ಸದ್ಯಕ್ಕಿರುವ ಉಪಾಯ.

## ಕೊನೆಗೆ ಏನಾಯಿತು?

ಗಂಡ ಹೆಂಡತಿ ಜಗಳವಾಡುತ್ತಿದ್ದುದನ್ನು ಅವನ ಸ್ನೇಹಿತ ಆಕಸ್ಮಾತ್ ನೋಡಿಬಿಟ್ಟ.

ಮಾರನೆ ದಿನ ಆ ಮಿತ್ರ ಜಗಳವಾಡುತ್ತಿದ್ದ ಸ್ನೇಹಿತನನ್ನು ಕೇಳಿದ, "ನಿನ್ನೆ ಹೆಂಡತಿಯೊಡನೆ ಜಗಳವಾಡುತ್ತಿದ್ದೆಯಲ್ಲ, ಕೊನೆಗೆ ಏನಾಯಿತು?"

"ಅವಳು ನನ್ನೆದುರು ಮೊಳಕಾಲೂರಿದಳು."

"ಅದು ಹೇಗೆ ಸಾಧ್ಯವಾಯಿತೋ ಮಹರಾಯ?"

"ನಾನು ಮಂಚದ ಕೆಳಗೆ ನುಸುಳಿದ್ದೆ" -ಬಂತು ಉತ್ತರ.

* -ಬಾರಾಶಂ

# ಕಾಲ ಅನಂತ ಅಚಿಂತ್ಯ

ವೇಗದಿಂದ ಚಲಿಸುವ ರೈಲುಗಾಡಿಯಲ್ಲಿ ಕುಳಿತ ಮಗುವಿನ ಕಣ್ಣಿಗೆ ಕಂಬಿಗಳ ಇಕ್ಕೆಲಗಳಲ್ಲಿರುವ ತಂತಿ ಕಂಬಗಳು, ಗಿಡ ಮರಗಳು ಓಡುತ್ತಿರುವಂತೆ ಕಾಣುತ್ತವೆ. ಮಗ್ಗುಲಲ್ಲಿರುವ ತನ್ನ ತಾಯಿಗೆ ಹಾಗೆಂದು ಹೇಳುತ್ತದೆ ಕೂಡ. ಇಂತಹ ಅನಿಸಿಕೆ ಚಿಕ್ಕ ಮಕ್ಕಳ ಎಳೆಯ ತಿಳುವಳಿಕೆಗೆ ತಕ್ಕುದೇನೋ ಸರಿ. ಮುಂದಕ್ಕೆ ಮುಂದಕ್ಕೆ ಧಾವಿಸುತ್ತಿರುವ ರೈಲು ಬಂಡಿಯ ಓಟವನ್ನು ನೆಲದಾಳದಲ್ಲಿ ಬೇರೂರಿ ಸ್ಥಿರವಾಗಿ ನಿಂತಿರುವ ಗಿಡಮರಗಳ ಮೇಲೆ ಆರೋಪಿಸಲಾಗುತ್ತದೆ. ಹಿರಿಯರ ಮಾತಿನಲ್ಲಿ ಕೂಡ ಇಂತಹ ಧಾಟಿ ಆಗಾಗ ಇಣುಕಿ ಹಾಕುವುದು ಸೋಜಿಗವೆನಿಸಿದರೂ ಸತ್ಯ ಸಂಗತಿಯಾದುದು ನಿತ್ಯ ಅನುಭವದ ಮಾತು. ಮೂರು ವರುಷದ ಬುದ್ಧಿ ನೂರು ವರುಷದ ವರೆಗೆ ತಾನೆ?

ನಾಲ್ವರು ಗೆಳೆಯರು ಸೇರಿ ಹರಟೆ ಹೊಡೆದು ಹೊಟ್ಟೆ ತುಂಬ ನಕ್ಕು ಕೊನೆಗೆ, ಅಗಲುವಾಗ ಏನನ್ನುವರು? 'ಹೊತ್ತು ಹೋದದ್ದೇ ಗೊತ್ತಾಗಲಿಲ್ಲ!'ಎಂದಲ್ಲವೆ? ನಿಜವಾಗಿ ಆಲೋಚಿಸಿದರೆ 'ಹೊತ್ತು' ಎಂಬುದು ಹೋಗುವಂಥದೂ ಅಲ್ಲ, ಬರುವಂಥದೂ ಅಲ್ಲ, ಅದು ಸದಾ ಇದ್ದುದೆ. ಚಲನಚಿತ್ರ ಮಂದಿರದಲ್ಲಿ ಕುಳಿತ ಪ್ರೇಕ್ಷಕರ ಎದುರಿಗಿನ ಗೋಡೆಗೆ ತಗುಲಿಕೊಂಡು ಕದಲದೆ ನಿಂತಿರುವ ರಜತ ಪರದೆಯ ಮೇಲೆ ಹಲವು ದೃಶ್ಯಾವಳಿಗಳು ಮೂಡುತ್ತವೆ. ಮತ್ತೆ ಮರೆಯಾಗುತ್ತವೆ. ಆ ಪರದೆ ಮಾತ್ರ ಇದ್ದ ತಾಣದಲ್ಲಿಯೇ ಅಬಾಧಿತ, ಅಕಲಂಕಿತ. ಪ್ರಕ್ಷೇಪ ಯಂತ್ರ **(Projector)**ದಿಂದ ತೂರಿ ಬಂದ ಕಿರಣಗಳನ್ನು ಪ್ರತಿಫಲನಗೊಳಿಸುವುದೊಂದೇ ಅದರ ಕೆಲಸ. ಇಂತಹುದೆ ವ್ಯಕ್ತಿ ಇಂತಹದೆ ವೃತ್ತವಾಗಿರ ಬೇಕೆಂಬ ಒತ್ತಾಯ, ಒತ್ತಾಸೆ ಅದಕ್ಕಿಲ್ಲ. ಕಾಲವೂ ಅಷ್ಟೆ. ವಿಶ್ವವೆಂಬ ಚಿತ್ರ ಮಂದಿರದ ಭಿತ್ತಿಯ ಉದ್ದಗಲ ಹರಡಿಕೊಂಡಿರುವ ವಿಶಾಲ ಪಟವದು!

ಕಾಲವೆಂಬುದು ಸ್ಥಿರ, ಅಚಲ, ಅದನ್ನು ಹಿನ್ನೆಲೆಯಾಗಿಸಿಕೊಂಡು ಜಗತ್ತಿನಲ್ಲಿ ಏನೆಲ್ಲವೂ ಕ್ರಿಯಾಶೀಲ. ಭರ್ತೃಹರಿ ನಿವೇದಿಸುವಂತೆ 'ಕಾಲೋ ನ ಯಾತೋ ವಯಮೇವ ಯಾತಾಃ.'ಎಂದರೆ ಹೋಗುವುದು ಕಾಲವಲ್ಲ; ಹೋಗುವವರು ನಾವು. ಇಂತಿದ್ದರೂ 'ಹೊತ್ತು ಹೋದದ್ದೇ ಗೊತ್ತಾಗಲಿಲ್ಲ,''ಸಂತೋಷದಿಂದ ಕಾಲ ಕಳೆದೆವು,''ನಿವೃತ್ತನಾದ ನಂತರ ನನಗೆ ಕಾಲ ಕಳೆಯುವುದೇ ಕಠಿಣವಾಗಿದೆ. ಎಂಬ ಮೊದಲಾದ ಪದ ಪ್ರಯೋಗ ಪದೇ ಪದೇ ಕಿವಿಗೆ ಬೀಳುತ್ತಲೇ ಇರುತ್ತವೆ.

ಕಾಲವೆಂದರೇನು? 'ಕಾಲ ಉರುಳಿತು' ಎನ್ನುತ್ತೇವೆ. ಅದೇನು ಗಾಲಿಯೇ? ಕಾಲಚಕ್ರದ ತುಳಿತಕ್ಕೆ ಬಲಾಢ್ಯವಾದ ಸಾಮ್ರಾಜ್ಯಗಳು ಮಣ್ಣುಗೂಡಿದ ಘಟನೆಗಳನ್ನು ಇತಿಹಾಸದ ಪುಟಗಳು ಬಣ್ಣಿಸುವುದರಿಂದ ಈ ಕಾಲಚಕ್ರವು ಅದೆಷ್ಟು ಭಾರವಾಗಿರಬೇಡ? ಶಕ್ತಿಶಾಲಿಯಾಗಿರಬೇಡ? ವಿಧ್ವಂಸಕ ಸಾಮರ್ಥ್ಯದ ಸಾಕಾರ ರೂಪವಾಗಿರಬೇಡ? 'ಕಾಲವಾದರು', 'ಕಾಲವಶರಾದರು,' ಎಂದೆಲ್ಲ ವಿವರಿಸುವ ನುಡಿಗಳಲ್ಲಿ ಕಾಲ ಎಂಬುದು ಮರಣದ ಸಮಾನಾರ್ಥಕ ಪದ. ಎಂತಲೆ 'ಕಾಲ'ಎಂದರೆ 'ಸಾವು'ಎಂದೇ ಕೆಲವೊಂದು ಸಲ ಭಾವಿಸುವುದುಂಟು. ವಿಶ್ವದ ನಿರ್ಮಾಣದ ಹಿಂದಣ ಕಾಣದ ಕೈಯಾದ ಪರಮ ಪುರುಷನಂತೆ ಕಾಲವೂ

ಅನಾದಿ, ಅನಂತ, ಅಮೇಯ, ಅಚಿಂತ್ಯವಾಗಿದೆ! 'ಕಾಲಪುರುಷ'ಎಂಬ ಪದವೇ ಅದರ ಪೌರುಷ ಹಾಗೂ ಪ್ರಭಾವದ ಪ್ರತೀಕ.

'ಕಾಲ'ವನ್ನು 'ತೋಳವೆಂದೂ ಅದರಿಂದ ಹತವಾಗುವ ಪ್ರಾಣಿಯನ್ನು ಆಡೆಂದೂ ಬಗೆಯುವ ಪದ್ಯವೊಂದು ಇಂತಿದೆ! 'ಅಶನಂ ಮೇ, ವಸನಂ ಮೇ, ಜಾಯಾಮೇ, ಬಂಧು ವರ್ಗೋ ಮೇ ಇತಿ ಮೇ ಮೇ ಕುರ್ವಾಣಂ, ಕಾಲಖಿಕೋಹಂತಿ ಪುರುಷಾಜಮ್.' ಅನ್ನ ನನ್ನದು, ಬಟ್ಟೆ ನನ್ನದು,ಮಡದಿ ನನ್ನವಳು, ಬಂಧು ಬಳಗವೆನ್ನದು ಎಂದು ಒಂದೇ ಸಮನೆ 'ಮೇ ಮೇ'(ಸಂಸ್ಕೃತದಲ್ಲಿ 'ಮೇ' ಎಂದರೆ 'ನನ್ನ'ಎಂದರ್ಥ)ಎಂದು ಹಲುಬುವ ಪುರುಷ ರೂಪದ ಆಡನ್ನು ಕಾಲರೂಪದ ತೋಳ ನಿರ್ದಯೆಯಿಂದ ತರಿದು ತಿಂದುಹಾಕುತ್ತದೆ. ಈಗ ಬೇಡ, ಇಷ್ಟು ಬೇಗ ಬೇಡ ಎಂದು ಮಾನವ ಅಂಗಲಾಚಿದರೂ ಒಂದಿನಿತೂ ಕರುಣೆಯಿಲ್ಲ ಆ ಕ್ರೂರ ಕಾಲನಿಗೆ. ಕಾಲಕ್ಕಾಗಲಿ ಕಡಲಿನ ಉಬ್ಬರಕ್ಕಾಗಲಿ ಹೆರವರಿಗೆಂದು ಕಾದು ನಿಲ್ಲುವುದು ತೀರ ಅಪರಿಚಿತ.

ಕಾಲವೆಂಬುದು ಒಂದು ಒಡೆಯಲಾಗದ ಒಗಟು. ಹುಟ್ಟುಗುರುಡರು ಆನೆಯನ್ನು ಬಗೆ ಬಗೆಯಾಗಿ ಬಣ್ಣಿಸಿದಂತೆ ಕಾಲವನ್ನು ಹತ್ತು ಹಲವು ತೆರನಾಗಿ ನಿರ್ದೇಶಿಸುವ ವಾಡಿಕೆ. ಅದರ ಪ್ರಬಲವಾದ ಸಾಮರ್ಥ್ಯ ಪ್ರವಾಹಕ್ಕೆ ಸಮಾನ. ಹಿಂದು ಮುಂದೆನ್ನದೆ ಅದು ಎಲ್ಲವನ್ನೂ ಕೊಚ್ಚಿಕೊಂಡು ಹೋಗುತ್ತದೆ. ಮಾನವನ ಇತಿಹಾಸದಲ್ಲಿ ಈ ಕಾಲ ಪ್ರವಾಹಕ್ಕೆ ಇದಿರಾಗಿ ನಿಂತು ಈಜಿ ಮೇಲೇಳುವ ಎದೆಗಾರಿಕೆಯುಳ್ಳ ಮಹಾನುಭಾವರು ಅದೆಷ್ಟು ಜನ? ಅಂತಹವರನ್ನು ಬೆರಳ ಮೇಲೆ ಎಣಿಸಬೇಕಷ್ಟೆ. ಒಬ್ಬ ಬುದ್ಧ ಒಬ್ಬ ಬಸವ, ಒಬ್ಬ ರಾಜಾರಾಂ ಮೋಹನರಾಯ್, ಒಬ್ಬ ವಿವೇಕಾನಂದ, ಒಬ್ಬ ಗಾಂಧೀಜಿ, ಒಬ್ಬ ಲಿಂಕನ್, ಒಬ್ಬ ಲೆನಿನ್‌ರಂತಹರು ಅಲ್ಲೊಬ್ಬ ಇಲ್ಲೊಬ್ಬ ಮಾತ್ರ. ಉಳಿದ ಜನಸಮುದಾಯವೆಲ್ಲ ಕಾಲನ ಸೆಳವಿಗೆ ಸಿಲುಕಿ ಉಸಿರುಗಟ್ಟಿ ಮೇಲೇಳದೆ ನಿತ್ರಾಣವಾಗಿ, ನಿಷ್ಪ್ರಾಣವಾಗಿ, ನಿಸ್ಸಹಾಯಕವಾಗಿ ದಡದ ಕಂಟಿ ಪೊದೆಗಳಿಗೆ ಅಂಟಿಕೊಳ್ಳುವುದೊಂದೆ ಬಾಕಿ.

ಬೆಟ್ಟದ ತುದಿಯಿಂದ ಮೊದಲುಗೊಂಡ ಹೊಳೆಯ ನೀರಿನ ಪ್ರವಾಹ ಕಡಲಿನಲ್ಲಿ ಕೊನೆಯನ್ನು ಕಾಣಬೇಕಷ್ಟೆ. ಬೆಳಕಿನ ಗತಿಯೂ ಅಷ್ಟೆ. ಒಂದು ತಾಣದಿಂದ ಹೊರಹೊಮ್ಮಿ ಇನ್ನೆಲ್ಲೋ ಮುಕ್ತಾಯವಾಗಬೇಕು. ಅದರಂತೆಯೇ ವಿದ್ಯುತ್ತಿನ ಪ್ರವಾಹವೂ ಉತ್ಪಾದನ ಕೇಂದ್ರದಲ್ಲಿ ಉಗಮಿಸಿ ವಿದ್ಯುದುಪಕರಣಗಳ ವರೆಗೆ ಹರಿಯಬೇಕು. ಕಾಲ ಪ್ರವಾಹ ಹಾಗಲ್ಲ, ಅದು ನಿರಂತರ ಹರಿಯುವಂಥದು. ಅದು ನಿರವಧಿ. ಭೂತ-ವರ್ತಮಾನ-ಭವಿಷ್ಯತ್ ಎಂಬ ಅದರ ವರ್ಗೀಕರಣ ಕೇವಲ ಕೃತ್ರಿಮ ಕ್ರಮ. ದೈನಂದಿನ ವ್ಯವಹಾರಕ್ಕೋಸ್ಕರ ಇಂತಹ ವಿಭಜನ ಅವಶ್ಯಕ. ಹಿಂದು ಇಂದು ಮುಂದು ಎಂಬ ಮೂರೆಲ್ಲವೂ ಒಂದು! 'ಇಂದು'ಎಂಬುದು 'ನಾಳೆ'ಗೆ ನಿನ್ನೆ; ಅದೇ 'ಇಂದು'ನಿನ್ನೆಗೆ ನಾಳೆ ತಾನೆ! ಸತ್ತ ನಿನ್ನೆಗೆ ಅದೇಕೆ ವೃಥಾ ಕೊರಗುವುದು? ಅದೇ ತೆರನಾಗಿ ಇನ್ನೂ ಜನಿಸದಿರುವ ನಾಳೆಗಾಗಿ ಅದೇಕೆ ಅಳುಕುವುದು? ಇಂದು ಬದುಕಿನಲ್ಲಿ ಎಲ್ಲವೂ ಸರಿಯಿದ್ದರೆ ಸಾಕಲ್ಲವೇ? ಮಾನವ ಸಮುದಾಯಕ್ಕೆ ಉಮರ ಖಯಾಂನಂತಹ ದಾರ್ಶನಿಕ ಒಡ್ಡುವ ಸವಾಲು ಈ ಮಾದರಿಯದು.

ಕಾಲವು ಅಮೂಲ್ಯವಾದುದು. ಅದನ್ನು ಬಲು ಎಚ್ಚರಿಕೆಯಿಂದ ಬಳಸುವುದು ವಿಹಿತ. ಹೊತ್ತು ಕಳೆದರೆ ಹೋಯಿತು, ಮುತ್ತು ಒಡೆದರೆ ಹೋಯಿತು ಎಂಬ ಗಾದೆ ಮಾತು ಯಾರಿಗೆ ಗೊತ್ತಿಲ್ಲ? ಯಯಾತಿಯಂತಹ ರಾಜನು ಕಳೆದುಹೋದ ಯೌವನವನ್ನು ಕೂಡ ಮಗನ ಔದಾರ್ಯದಿಂದಾಗಿ ಮರಳಿ ಸಂಪಾದಿಸಿದ. ಹೀಗೆ ಕಳೆದುಹೋದ ಏನನ್ನಾದರೂ ಮರಳಿ ಗಳಿಸಲು ಸಾಧ್ಯ. ಆದರೆ ಒಂದು ಸಾರಿ ಕೈಯಿಂದ ಜಾರಿ ಹೋದ ಹೊತ್ತನ್ನು ಏನಿತ್ತರೂ ಎಂತಹ ಶತ ಪ್ರಯತ್ನಗೈದರೂ ಮರಳಿ ದೊರಕಿಸಲುಬಾರದು.

❋ *ಶ್ರೀನಿವಾಸ ತೋಫಖಾನೆ*

# ನಿಸರ್ಗದ ವಾಸ್ತುಶಿಲ್ಪಿ ಗೆದ್ದಲು

✷ ಮೂರ್ತಿ ರಾಮನಾಥಪುರ

ಗೆದ್ದಲಿನ ಹೆಸರು ಕೇಳುತ್ತಲೇ ನಮಗೆ ನೆನಪಿಗೆ ಬರುವುದು ನಮ್ಮ ಕೊರೆಯಲ್ಪಟ್ಟ ಪೀಠೋಪಕರಣಗಳೋ, ಪುಸ್ತಕಗಳೋ, ಕಿಟಕಿ-ಬಾಗಿಲುಗಳೋ ಇತ್ಯಾದಿ. ಅದು ಎಲ್ಲವನ್ನೂ ಹಾಳು ಮಾಡುತ್ತಿರುವುದನ್ನು ನಾವು ನೋಡುತ್ತಿರುತ್ತೇವೆಯೇ ಹೊರತು ಅದು ಸೃಜನಾತ್ಮಕ ಕಾರ್ಯದಲ್ಲಿ ತೊಡಗಿರುವುದು ನಮ್ಮ ಗಮನಕ್ಕೂ ಬರುವುದಿಲ್ಲ. ಹಾಗೆ ನೋಡಿದರೆ ಗೆದ್ದಲು ಒಂದು ಕುಶಲ ಇಂಜನಿಯರ್, ದಕ್ಷ ವಾಸ್ತುಶಿಲ್ಪಿ. ಅದರ ಮನೆ ನಮ್ಮ ಮನೆಗಿಂತ ವಾಸಿ. ಹವಾನಿಯಂತ್ರಿತ ಮನೆ ಕಟ್ಟುತ್ತದೆ ಅದು. ಈ ಮನೆಯಲ್ಲಿ ನೀರಿನ ವ್ಯವಸ್ಥೆ ಇರುತ್ತದೆ, ಸಂರಕ್ಷಣೆಯ ಏರ್ಪಾಡಿರುತ್ತದೆ, ಅಲ್ಲದೆ ತಂಗುವ ವ್ಯವಸ್ಥೆಯಂತೂ ಬಹಳ ಸುಖಮಯವಾಗಿರುತ್ತದೆ.

ನಾವೆಲ್ಲ ಸಾಮಾನ್ಯವಾಗಿ ಹೇಳುವುದು, ಗೆದ್ದಲು ಕೀಟ ವರ್ಗಕ್ಕೆ ಸೇರಿದ ಜಂತುವೆಂದು. ಜೀವವಿಜ್ಞಾನದ ಪರಿಭಾಷೆಯಲ್ಲಿ ಆರ್ಥೋಪೋಡಾ ಎನ್ನುತ್ತೇವೆ. ಪ್ರಪಂಚದಲ್ಲಿ ಗೆದ್ದಲುಗಳಲ್ಲಿ ಸುಮಾರು ೨,೦೦೦ ಉಪಜಾತಿಗಳಿವೆ. ಇವುಗಳಿಗೆ ಕತ್ತಲೆಂದರೆ ಬಲು ಪ್ರೀತಿ. ಬಿಸಿಲು ಮತ್ತು ಒಣ ಹವೆಯ ಸಂಪರ್ಕಕ್ಕೆ ಬಂದರೆ ಬಹಳ ದಿನ ಬದುಕುವುದಿಲ್ಲ. ಆದ್ದರಿಂದಲೇ ಇವುಗಳ ಇಡೀ ಜೀವನ ಮಣ್ಣಿನಲ್ಲೋ ಮರದ ಪೊಟರೆಯಲ್ಲೋ ಕಳೆಯುತ್ತದೆ. ಕತ್ತಲೆಯಲ್ಲಿಯೇ ಬದುಕು ಕಳೆಯುವುದರಿಂದ ಅನೇಕ ಜಾತಿಯ ಗೆದ್ದಲುಗಳಿಗೆ ಕಣ್ಣುಗಳೇ ಇರುವುದಿಲ್ಲ. ಅವುಗಳ ಶರೀರ ನಾಜೂಕು. ಹೊರಭಾಗ ಮೃದುವಾಗಿದ್ದು ಗಟ್ಟಿಯಾದ ಹೊದಿಕೆಯಿಂದ ಕೂಡಿರುವುದಿಲ್ಲ. ಆಕ್ರಮಣ ಮಾಡಲು ಯಾವುದೇ ಕೊಂಡಿಗಳಿರುವುದಿಲ್ಲ. ತಮ್ಮನ್ನು ಬಿಸಿಲು, ಸೆಕೆಯ ವಾತಾವರಣದಿಂದ ಸಂರಕ್ಷಿಸಿಕೊಳ್ಳಲು ಯಾವುದೇ ಸಾಧನಗಳಿರುವುದಿಲ್ಲ. ಆದರೆ ಸಂಘಟಿತವಾದಾಗ ಇವು ಸಾಕಷ್ಟು ಬಲಿಷ್ಠವೆಂದು ಭಾವಿಸಲ್ಪಟ್ಟಿವೆ.

ನೀವೇನಾದರೂ ಗೆದ್ದಲಿನ ಹುತ್ತವನ್ನು ಒಡೆದರೆ ಅಲ್ಲಿ ಅಸಂಖ್ಯ ಚಿಕ್ಕಪುಟ್ಟ ಗೆದ್ದಲು ಹುಳು ಅಲ್ಲಿ ಇಲ್ಲಿ ಓಡಾಡುತ್ತಿರುವುದನ್ನು ಕಾಣಬಹುದು. ಹುತ್ತದ ಒಳಗೆ ನಿಮಗೆ ಕೊಠಡಿಗಳಷ್ಟೇ ಅಲ್ಲ, ಕಲ್ಲು ದಾರಿಗಳೂ ಕಾಣಸಿಗುತ್ತವೆ. ನಟ್ಟ ನಡುವೆ ದೊಡ್ಡ ಕೊಠಡಿಯಲ್ಲಿ ಗೆದ್ದಲಿನ ರಾಣಿ



ರಾಣಿ

ಕಾಣುತ್ತಾಳೆ. ಜೊತೆಗೆ ರಾಜನೂ ಇರುತ್ತಾನೆ. ಈ ಕೊಠಡಿಯೇ ಅಂತಃಪುರ. ರಾಣಿ ವೇಗವಾಗಿ ಮೊಟ್ಟೆ ಇಡುತ್ತಾ ಹೋದಂತೆ ಉಳಿದ ಚಿಕ್ಕಪುಟ್ಟ ಗೆದ್ದಲುಗಳು ಬೇರೆ ಬೇರೆ ಕೊಠಡಿಗಳಿಗೆ ಅವುಗಳನ್ನು ಕೊಂಡೊಯ್ಯುತ್ತವೆ. ಸಂಪೂರ್ಣ ವಿಕಾಸಗೊಂಡ ರಾಣಿ ಗೆದ್ದಲು ಸುಮಾರು ನಾಲ್ಕು ಅಂಗುಲ ಉದ್ದ ಮತ್ತು ಬಾಳೆಹಣ್ಣಿನಷ್ಟು ದಪ್ಪವಿರುತ್ತದೆ. ಗೆದ್ದಲಿನ ಒಂದೊಂದು ಬಡಾವಣೆಯಲ್ಲೂ ಲಕ್ಷಾಂತರ ಗೆದ್ದಲುಗಳು ವಾಸಿಸುವವಾದರೂ ಎಲ್ಲವೂ ಒಂದೇ ರೀತಿ ಇರುವುದಿಲ್ಲ.

ರಾಣಿ ಮತ್ತು ರಾಜ ಗೆದ್ದಲಿನ ವಿಷಯವನ್ನಂತೂ ಹೇಳಿಯೆ ಇದ್ದೇವೆ. ಇದಾದ ನಂತರ ಕೂಲಿಕಾರರ ವಿಷಯ. ಇದಲ್ಲದೆ ಬೇರೊಂದು ರೀತಿಯ ಗೆದ್ದಲುಗಳೂ ಕಾಣುತ್ತವೆ. ಇವುಗಳನ್ನು ಸೈನಿಕ ಇಲ್ಲವೆ ಸಿಪಾಯಿ ಗೆದ್ದಲು ಎನ್ನಬಹುದು. ಈ ಸಿಪಾಯಿಗಳ ಮುಖಾಂಗ ಬಹಳ ವಿಕಾಸಗೊಂಡಿರುತ್ತದೆ. ಹುತ್ತದ ರಕ್ಷಣೆಯ ಸಂಪೂರ್ಣ ಭಾರ ಈ ಸಿಪಾಯಿ ಗೆದ್ದಲುಗಳ ಮೇಲೆಯೇ ಇದೆ. ಆದ್ದರಿಂದ ಇವುಗಳ ಮುಖಾಂಗಗಳು ಇಷ್ಟೊಂದು ವಿಕಾಸಗೊಂಡಿರುವುದು. ಆದರೆ ಹೀಗಾದ್ದರಿಂದ ಇವು ಸ್ವತಃ ಊಟವನ್ನು ಮಾಡಲಾರವು. ಕೂಲಿ ಗೆದ್ದಲುಗಳೇ ಇವಕ್ಕೆ ಉಣಿಸಬೇಕು. ಹೀಗೆ ಒಂದು ರೀತಿಯಲ್ಲಿ ಗೆದ್ದಲುಗಳಲ್ಲಿ ಶ್ರಮ ವಿಭಜನೆಯಾಗಿದೆ ಎಂದು ಹೇಳಬಹುದು. ಅದಕ್ಕೆ ಅನುಕೂಲವಾಗುವಂತೆ ಶಾರೀರಿಕ ರಚನೆಯೂ ಇರುತ್ತದೆ ಅಥವಾ ಶಾರೀರಿಕ ರಚನೆಗನುಗುಣವಾಗಿ ಜವಾಬ್ದಾರಿ ಇರುತ್ತದೆ ಎಂದರೂ ಸರಿ.


ರಾಜ

ಇವುಗಳ ಮನೆಯನ್ನು ಮನೆಯೆನ್ನದೆ ಪಟ್ಟಣ ಇಲ್ಲವೆ ನಗರಗಳೆಂದರೆ ಸರಿಯಾದೀತು. ಗೆದ್ದಲುಗಳ ಮನೆಗಳು ಹೆಚ್ಚಾಗಿ ಅಗೋಚರವಾಗಿಯೇ ಇರುತ್ತವೆ. ಆದರೆ ಅನೇಕ ಗೆದ್ದಲುಗಳು ೨೦-೩೦ ಅಡಿಯಷ್ಟು ಎತ್ತರದ ಸ್ತಂಭಗಳನ್ನು ಸಹ ಕಟ್ಟಿರುತ್ತವೆ. ತಮ್ಮ ಮನೆಕಟ್ಟಲು ಇವು ಬಹುಶಃ ಮಣ್ಣು ಮತ್ತು ಚಿಂದಿಯನ್ನು ಉಪಯೋಗಿಸುತ್ತವೆ. ಚಿಂದಿಯನ್ನು ಉಪಯೋಗಿಸಿ ಅವುಗಳಿಗೆ ತಮ್ಮಿಂದ ಹೊರಡುವ ಅಂಟಾದ ಎಂಜಲನ್ನು ಸೇರಿಸುತ್ತವೆ. ಹೀಗಾಗಿ ಇವುಗಳ ಎಂಜಲು ಒಂದು ರೀತಿಯಲ್ಲಿ ಸಿಮೆಂಟಿನ ಕೆಲಸ ಮಾಡುತ್ತದೆ. ಒಂದು ವೇಳೆ ಕೊಡಲಿಯಿಂದ ಹೊಡೆದರೆ ಬೆಂಕಿಯ ಕಿಡಿಗಳು ಏಳುವಷ್ಟು ಬಲಿಷ್ಠವಾಗಿ ಇವು ಮನೆಗಳನ್ನು ಕಟ್ಟುತ್ತವೆ.

ಕೆಲವು ವೇಳೆ ಇಂತಹ ಭವನಗಳನ್ನು ನಾಶ ಮಾಡಲು ಡೈನಮೈಟನ್ನೇ ಉಪಯೋಗಿಸಬೇಕಾಗುತ್ತದೆ. ಆಫ್ರಿಕದಲ್ಲಿ ಗೆದ್ದಲುಗಳ ಸ್ತಂಭಗಳಂತಹ ಕಟ್ಟಡಗಳು ನೋಡಲು ಸಿಕ್ಕುವುದು ಸರ್ವೇಸಾಮಾನ್ಯ. ಇವು ನೋಡಲು ನಾಯಿಕೊಡೆಯಂತೆಯೇ ಕಾಣುತ್ತವೆ. ಕೆಳಗೆ ಒಂದು ಉದ್ದವಾದ ಸ್ತಂಭ ಮತ್ತು ಮೇಲ್ಭಾಗದಲ್ಲಿ ಛತ್ರಿಯಂತಹ ಭಾವಣಿ ಇರುತ್ತದೆ. ಛತ್ರಿಯಂತಹ ಭವನಗಳ ಉದ್ದೇಶ ಮಳೆಯ ನೀರು ಮನೆಯೊಳಗೆ ನುಗ್ಗದಿರಲಿ ಎಂಬುದೇ.



ಪ್ರಾಥಮಿಕ ರಾಜ/ರಾಣಿ.

ಟ್ರಿನಿದಾದ್‌ನ ಕಾಡು ಪ್ರದೇಶಗಳಲ್ಲಿ ಗೆದ್ದಲು ತನ್ನ ಮನೆಗಳನ್ನು ಮರದ ಮೇಲೆ ಕಟ್ಟುತ್ತದೆ. ಇವು ಡಬ್ಬಿಯಾಕಾರದಲ್ಲಿ ಇರುತ್ತವೆ. ಆಸ್ಟ್ರೇಲಿಯದ ಕೆಲವು ಜಾತಿಯ ಗೆದ್ದಲುಗಳ ಮನೆಗಳು ಪಿರಾಮಿಡ್‌ನ ಆಕಾರದಲ್ಲಿರುತ್ತವೆ. ಸುಮಾರು ೧೦ ಅಡಿ ಉದ್ದ, ೪ ಅಡಿ ಅಗಲ ಮತ್ತು ೧೨ ಅಡಿ ಎತ್ತರವಾಗಿರುತ್ತವೆ. ಇವು ಯಾವಾಗಲೂ ಉತ್ತರ-ದಕ್ಷಿಣ ದಿಕ್ಕುಗಳಲ್ಲಿ ಕಟ್ಟಲ್ಪಡುತ್ತವೆ. ಏಕೆಂದರೆ ಇವುಗಳ ಚಪ್ಪಟೆಯಾದ ಅಡಿಪಾಯ ಪೂರ್ವ-ಪಶ್ಚಿಮದತ್ತ ಇರಲಿ ಎಂಬುದೇ ಕಾರಣ. ಅಲ್ಲದೆ ಇದರಿಂದ ಮಧ್ಯಾಹ್ನದ ಉರಿಬಿಸಿಲು ಇವುಗಳ ಮೇಲೆ ನೇರವಾಗಿ ಬೀಳುವುದಿಲ್ಲ.

ಈ ಮನೆಗಳ ಮತ್ತೊಂದು ವೈಶಿಷ್ಟ್ಯ ಗಾಳಿ, ನೀರು ಮತ್ತು ಹವಾಮಾನದ ವ್ಯವಸ್ಥೆ ಇಲ್ಲಿ ಅಚ್ಚುಕಟ್ಟಾಗಿರುವುದು. ಮೊದಲು ಗಾಳಿಯ ಏರ್ಪಾಡನ್ನು ನೋಡಿ. ಹೊರಗಿನ ಹವಾಮಾನದ ವೈಪರೀತ್ಯಗಳು ಒಳಗಿನ ವಾತಾವರಣದ ಮೇಲೆ ಹೆಚ್ಚು ಪರಿಣಾಮವಾಗದಂತೆ ಗೆದ್ದಲಿನ ಹುತ್ತದ ಗೋಡೆಗಳು ಬಹಳ ದಪ್ಪವಾಗಿ ಕಟ್ಟಲ್ಪಟ್ಟಿರುತ್ತವೆ. ಆದರೆ ಇದರಿಂದ ಒಂದು ಸಮಸ್ಯೆಯೂ ಉದ್ಭವವಾಗುತ್ತದೆ. ಒಂದು ವೇಳೆ ಒಂದು ಕಾಲಕ್ಕೆ ಹುತ್ತದ ಗೆದ್ದಲಿನ ಸಂಖ್ಯೆ ೨೦ ಲಕ್ಷವೆಂದಾದರೆ, ಪ್ರತಿನಿತ್ಯ ಸುಮಾರು ೧೦೦೦ ಲೀಟರ್‌ನಷ್ಟು ಗಾಳಿ ಬೇಕಾಗುತ್ತದೆ. ಇಷ್ಟು ಗಾಳಿ ಸಿಗದಿದ್ದರೆ ಬದುಕೇ ದುರ್ಭರವಾಗುತ್ತದೆ. ಹೀಗಾಗದಂತೆ ಒಳಗಿನ ವ್ಯವಸ್ಥೆಯನ್ನು ಬಹಳ ಸುಂದರವಾಗಿ ರೂಪಿಸಲಾಗಿದೆ. ಇದಕ್ಕೊಂದು ಒಳ್ಳೆಯ ಉದಾಹರಣೆಯೆಂದರೆ ಆಫ್ರಿಕದ ಗೆದ್ದಲುಗಳ ಹುತ್ತ.

ಇವುಗಳ ಮನೆ ಒಳಗಿನಿಂದ ಪೊಟರೆಯಾಕಾರದಲ್ಲಿದ್ದರೂ ನೋಡಲು ದಿಣ್ಣೆಯಾಕಾರದಲ್ಲಿರುತ್ತದೆ. ಇದರಲ್ಲಿ ಕಂಬಗಳ ಮೇಲೆ ಗೆದ್ದಲಿನ ಮನೆ ನಿಂತಿರುತ್ತದೆ. ದಿಣ್ಣೆಯ ಗೋಡೆಗಳಲ್ಲಿ ತೆಳುವಾದ ಕೊಳವೆಗಳಿರುತ್ತವೆ. ಶರೀರದ ಕ್ರಿಯೆಯಿಂದ ಒಳಗಿನ ಹವೆ ಬಿಸಿಯಾಗಿ ಮೇಲೇಳುತ್ತದೆ. ಈ ಗಾಳಿ ತೆಳುವಾದ ಕೊಳವೆಗಳಿಂದ ಹೊರಟು ದಿಣ್ಣೆಯ ಕೆಳಭಾಗಕ್ಕೆ ತಲುಪುತ್ತದೆ. ಈ ಕೊಳವೆಗಳು ದಿಣ್ಣೆಯ ಗೋಡೆಯ ಹೊರಭಾಗದಲ್ಲಿರುತ್ತವೆ. ಅಲ್ಲದೆ ಇವುಗಳ ಗೋಡೆಗಳು ತೆಳುವಾದ ಅಂಟಿನಿಂದ ಕೂಡಿದ ಚರ್ಮದಂತಿರುತ್ತವೆ. ಇಂಗಾ



ಕೂಲಿ

ಲಾಮ್ಲ ವಾಯುವನ್ನು ಕೊಂಡು- ಕೊಡುವಷ್ಟು ಇವು ತೆಳ್ಳಗಿರುತ್ತವೆ. ಅಂದರೆ ಮನೆಗಳಲ್ಲಿನ ಗಾಳಿಯಲ್ಲಿರುವ ಇಂಗಾಲಾಮ್ಲವಾಯುವು ಹೊರಗೆ ಗಾಳಿಯಲ್ಲಿ ಹರಡಲೂ, ಹೊರಗಿನ ಗಾಳಿಯಲ್ಲಿನ ಆಮ್ಲಜನಕವು ಒಳಗಿನ ಗಾಳಿಗೆ ಸೇರಲೂ ಅನುಕೂಲವಾಗಿದೆ. ನಾವು ಉಸಿರೆಳೆದುಕೊಂಡಾಗ ನಮ್ಮ ಶ್ವಾಸಕೋಶಗಳಲ್ಲಿಯೂ ಇದೇ ಕ್ರಿಯೆ ನಡೆಯುತ್ತದೆ. ಗಾಳಿಯ ನಿಯಂತ್ರಣ ಸರಿಯಿರಲೆಂಬುದೇ ಇದರ ಉದ್ದೇಶ. ಕೂಲಿಕಾರ ಗೆದ್ದಲುಗಳು ಒಂದೇ ಸಮನೆ ಈ ಕೊಳವೆಗಳನ್ನು ತೆರೆಯುವ-ಮುಚ್ಚುವ ಕೆಲಸಗಳಲ್ಲಿ ತೊಡಗಿರುತ್ತವೆ.

ಮನೆ ತೇವವಾಗಿರುವಂತೆ ನೋಡಿಕೊಳ್ಳಲು ಸಹ ಅವು ವಿಶೇಷವಾದ ರೀತಿಯನ್ನು ಅನುಸರಿಸುತ್ತವೆ. ಕೆಲ ಗೆದ್ದಲುಗಳು ತಮ್ಮ ಹುತ್ತಗಳಲ್ಲಿ ಬಿಳಿಯ ಹಣ್ಣಿನಂತಹ ವಸ್ತುವನ್ನು ಬೆಳೆಸುತ್ತವೆ. ಇದರಿಂದ ಆಹಾರ ಸಿಗುವುದಲ್ಲದೆ ಆ ವಸ್ತುವು ತೇವವನ್ನು ಹೀರಿಕೊಳ್ಳುತ್ತದೆ. ಕೆಲವು ಮರುಭೂಮಿಯ ಗೆದ್ದಲುಗಳು ನೀರಿಗಾಗಿ ಬಾವಿಯನ್ನು ತೋಡುತ್ತವೆ. ಈ ಗೆದ್ದಲುಗಳು ಮರಳಿನಲ್ಲಿ ೧೨೦ ಅಡಿಯವರೆಗೆ ಆಳವಾದ ಕೊಳವೆಯನ್ನು ತೋಡುತ್ತವೆ. ಇದು ಸಾಮಾನ್ಯವಾಗಿ ನೀರಿನ ಸ್ರೋತದವರೆಗೂ ತಲುಪುತ್ತದೆ. ಇಲ್ಲಿಂದ ಅವು ನೀರನ್ನು ಕೊಂಡು ಮೇಲಿನವರೆಗೆ ಬರುತ್ತವೆ. ಈ ನೀರಿನ ಬಾಷ್ಪದಿಂದ ತೇವದ ವಾತಾವರಣ ಉಂಟಾಗುತ್ತದೆ.






ಸಿಪಾಯಿ

ಈ ಎಲ್ಲ ಕೆಲಸಗಳು ನಿಯಮದಂತೆ ನಡೆಯುತ್ತಲೇ ಇರುತ್ತವೆ. ಒಂದು ವೇಳೆ ಆಕಸ್ಮಿಕವಾಗಿ ಮನೆ ಕುಸಿದರೆ ಕೂಲಿಕಾರ ಗೆದ್ದಲುಗಳು ಆ ಕೂಡಲೇ ಸರಿಪಡಿಸತೊಡಗುತ್ತವೆ. ಒಂದೆರಡು ದಿನಗಳಲ್ಲಿಯೇ ಅವು ಮನೆಗಳನ್ನು ಸರಿಪಡಿಸಿಕೊಳ್ಳುತ್ತವೆ. ತಮ್ಮಲ್ಲಿಯ ಸಂಘಟನೆ-ಸಂಯೋಜನೆಯಿಂದಲೇ ಇವು ಪ್ರಪಂಚದ ಮೂಲೆ-ಮೂಲೆಗಳಲ್ಲಿಯೂ ಬದುಕಲು ಸಾಧ್ಯವಾಗಿದೆ. ಒಂಟಿಯಾದ ಗೆದ್ದಲು ಬಹಳ ದಿನ ಬದುಕದೆ ಸತ್ತು ಸುಣ್ಣವಾಗುತ್ತದೆ. ಆದರೆ ಗುಂಪಿನಲ್ಲಿದ್ದಾಗ ಆ ಭಯವಿಲ್ಲ.

ಇಷ್ಟೊಂದು ಸಂಘಟಿತವಾಗಿ ಕೆಲಸ ಮಾಡಲು ಇವುಗಳ ಸಂಚಾರದ ವ್ಯವಸ್ಥೆಯಲ್ಲಿಯೇ ಅಚ್ಚರಿ[illegible]ಯಿಲ್ಲದ ವೈಶಿಷ್ಟ್ಯವಿದೆ. ಗೆದ್ದಲುಗಳಲ್ಲಿ ಸಂಕೇತಗಳನ್ನು ಕಳುಹಿಸುವ ಕೆಲಸ ಮುಖ್ಯವಾಗಿ ರಾಸಾಯನಿಕ ಸಂಕೇತಗಳ ಮೂಲಕ ನಡೆಯುತ್ತದೆ ಎಂಬುದು ವಿಜ್ಞಾನಿಗಳ ಊಹೆ. ವಿಜ್ಞಾನಿಗಳು [illegible] ಗೆದ್ದಲನ್ನು ನಿಸರ್ಗದ ವಾಸ್ತುಶಿಲ್ಪಿಯೆಂದು [illegible] ಅನ್ವರ್ಥವಾಗಿಯೇ ಇದೆ.

# ಮದನ ಕಾಮನ ಕಥೆಗಳು

೧೬

ಎರಡು ರಾತ್ರಿಗಳನ್ನು ರಾಜಕುಮಾರಿಯರೊಬ್ಬೊಬ್ಬರಿಗೂ ಕುತೂಹಲಕಾರಿಯಾದ ಕತೆಗಳನ್ನು ಹೇಳುತ್ತ ಕಳೆದ ಬುದ್ಧಿಚಾತುರ್ಯನಿಗೆ ಮೂರನೆಯ ರಾತ್ರಿಯನ್ನು ಮತ್ತೆ ಹಿರಿಯ ರಾಜಕುಮಾರಿಯೊಂದಿಗೆ ಕಳೆಯುವುದು ಅಷ್ಟೇನೂ ದುಸ್ತರವೆನಿಸಲಿಲ್ಲ. ರಾಜಕುಮಾರಿಯ ಮೈಗೆ ತನ್ನ ಕೈ ಕೂಡ ತಗಲದಂತೆ ಎಚ್ಚರ ವಹಿಸಿ ಚಾತುರ್ಯನು ಆ ದಿನ ಬೆಳಗಾಗುವವರೆಗೂ ಅನೇಕ ವಿಷಯಗಳ



# ಆಮೆಯ ಕವಚದಲ್ಲಿ ರಾಜಕುಮಾರ!

ಬಗ್ಗೆ ಹರಟುತ್ತ ವೇಳೆಗಳೆಯುವಲ್ಲಿ ಯಶಸ್ವಿಯಾದನು. ಅವನೊಂದಿಗೆ ಹರಟುವಾಗ ಅವಳಿಗೆ ಸಮಯ ಸರಿದುದೇ ತಿಳಿಯಲಿಲ್ಲ.

ನಾಲ್ಕನೆಯ ರಾತ್ರಿ ಮತ್ತೆ ಕಿರಿಯ ರಾಜಕುವರಿಯ ಸರದಿಯಾಗಿತ್ತು. ಊರ್ವಶಿಯಂತೆ ಕಂಗೊಳಿಸುತ್ತಿದ್ದ ಆಕೆ ಶಯ್ಯಾಗೃಹವನ್ನು ಪ್ರವೇಶಿಸಿದಳು. ಮಂದ ಪ್ರಕಾಶದಲ್ಲಿ ಪುಟ್ಟ ದೇವಲೋಕದಂತೆಯೇ ಕಂಗೊಳಿಸುತ್ತಿದ್ದ ಶಯ್ಯಾಗೃಹದಲ್ಲಿ ಕಾಲಿರಿಸಿದವಳನ್ನು ಕಂಡ ಚಾತುರ್ಯನ ಎದೆ ಝಲ್ಲೆಂದಿತು. ರತಿಯೇ ಮೂರ್ತಿವೆತ್ತು ಬಂದಂತಿದ್ದ ಅವಳು ಇಷ್ಟೊಂದು ಹತ್ತಿರದಲ್ಲಿಯೆ ಇರುವಾಗ ಎಂಥ ಯೋಗಿಗೂ ನಿಗ್ರಹ ಅಸಾಧ್ಯವೆಂದೆನಿಸಿ ಅವನ ನಿರ್ಧಾರ ಅರೆಕ್ಷಣ ವಿಚಲಿತವಾಯಿತು. ಆದರೆ ಮರುನಿಮಿಷದಲ್ಲಿಯೇ ಕರ್ತವ್ಯ ಅವನಿಗೆದುರಾಯಿತು. ಇಂತು ವಿಚಿತ್ರ ಮಾನಸಿಕ ತುಮುಲವನ್ನನುಭವಿಸುತ್ತ ಮಂಚದ ಮೇಲೆ ಮಲಗಿದ್ದ ಚಾತುರ್ಯನ ಮನಃಸ್ಥಿತಿ ಎಂತೆಂಬುದರ ಅರಿವು ಕಿರಿಯ ರಾಜಕುಮಾರಿಗೆಳ್ಳಷ್ಟೂ ಇರಲಿಲ್ಲ.

ಯೌವನೋನ್ಮಾದದಲ್ಲಿದ್ದ ಆಕೆ, ಗಾಳಿಗುಂಟ ತೇಲಿಬಂದು ನೀವು ಬೇಡವೆಂದರೂ ನಿಮಗೆ ಸುವಾಸನೆಯನ್ನೀವ ಪರಿಮಳದಂತೆ ಬಂದವಳೇ ಚಾತುರ್ಯನ ತೆರೆದ ತೋಳುಗಳಲ್ಲಿ ತನ್ನನ್ನೇ ಅರ್ಪಿಸಲು ಮುಂದಾದಳು.

ಬಹು ಪ್ರಯಾಸದಿಂದ ಸಾವರಿಸಿಕೊಂಡೆದ್ದ ಚಾತುರ್ಯನು ರಾಜಕುಮಾರಿಯನ್ನು ಹತ್ತಿರದ ಆಸನದ ಮೇಲೆ ಕುಳ್ಳರಿಸಿ, "ದೇವರು ಸ್ತ್ರೀಯರನ್ನು ತುಂಬ ಗಡಿಬಿಡಿಯಿಂದ ಸೃಷ್ಟಿಸಿದನೆಂದು ತೋರುತ್ತದೆ! ಅಂತೆಯೇ ಅವರಿಗೆ ತಾಳ್ಮೆಯೆಂಬುದೆಷ್ಟೂ ಇಲ್ಲ. ಅಗ್ನಿಸಾಕ್ಷಿಯಾಗಿ ನಿನ್ನ ಕೈಹಿಡಿದ ನಾನು ಜೀವಮಾನವಿಡಿ ನಿನ್ನೊಂದಿಗೆಯೆ ಬಾಳಲಿರುವಾಗ, ಆದರಲ್ಲಿ ನಂಬಿಗೆಯೆ ಇಲ್ಲದವರಂತೆ ನೀನು ವರ್ತಿಸುತ್ತಿದ್ದೀ. ನಿಜವಾದ ವೈವಾಹಿಕ ಜೀವನವನ್ನು ಪ್ರಾರಂಭಿಸುವ ಮೊದಲು ನನಗೆ ಒಂದಿಷ್ಟು ಉಸಿರಾಡಿಸಲೂ ಸಮಯ ದೊರೆಯಲಾರದೆ?"ಎಂದು ಸಹನೆದಪ್ಪಿದವನಂತೆ ನುಡಿದನು.

"ನನ್ನರಸನಿಗೆ ಉಸಿರಾಡಿಸಲೂ ಸಹ ಸಮಯ ದೊರೆತಿಲ್ಲವೇ? ಪಾಪ! ಈಗ ಪತಿ ಉಸಿರಾಡಿಸುವಾಗ ಕರ್ತವ್ಯ ಪರಾಯಣೆಯಾದ ಪತ್ನಿಯ ಕೆಲಸವೇನು? ತಮ್ಮ ಅಪ್ಪಣೆಯನ್ನು ಶಿರಸಾ ಮನ್ನಿಸಲು ನಾನು ಸಿದ್ಧ" ಎಂದು ಅರ್ಧ ಕೊಂಕು, ಅರ್ಧ ಕೋಪದಿಂದೆಂಬಂತೆ ರಾಜಕುಮಾರಿ ಉತ್ತರಿಸಿದಳು.

"ನನ್ನ ಮಾತಿನಿಂದ ಇಷ್ಟೊಂದು ಕೆರಳಿದೆಯಾ? ಸದ್ಯ, ನಿನ್ನಿಂದ ನಾನು ಅಪೇಕ್ಷಿಸುವುದು ಹೆಚ್ಚೇನಿಲ್ಲ. ಇಂದೂ ನಿನಗೊಂದು ಬಹು ರಮ್ಯವಾದ ಕತೆ ಹೇಳಬೇಕೆಂದಿರುವೆ;ಕೇಳುವೆಯಷ್ಟೆ?"

"ಓಹೋ! ಅದಕ್ಕೇನಂತೆ?"

ಇಬ್ಬರೂ ತಮ್ಮ ತಮ್ಮ ಆಸನದ ಮೇಲೆ ಹಾಯಾಗಿ ಕುಳಿತ ನಂತರ ಚಾತುರ್ಯ ಕತೆ ಹೇಳಲಾರಂಭಿಸಿದ:

ನೂರಾರು ವರ್ಷಗಳ ಹಿಂದಿನ ಮಾತು. ಆಗ ವೆಂಕಟರಾಜನೆಂಬ ಅರಸನೊಬ್ಬ ಮಲ್ಲಿಕಾರ್ಜುನವನ್ನಾಳುತ್ತಿದ್ದನು. ಬಹುದಿನಗಳವರೆಗೆ ಹೆಂಡತಿ ಗರ್ಭಿಣಿಯಾಗದಿದ್ದುದನ್ನು ಕಂಡ ವೆಂಕಟರಾಜ ಬೇರೊಬ್ಬಳನ್ನು ಮದುವೆಯಾದ. ಮೊದಲಿನಾಕೆ ಜೀವದಿಂದಿರುವಾಗ ಎರಡನೆಯವಳನ್ನು ಮದುವೆಯಾದಾಗ ಮೊದಲನೆಯವಳ ಗತಿಯೇನೆನ್ನುವುದು ನಿನಗೆ ಗೊತ್ತೇ ಇದೆ. ಆದರೆ ವೆಂಕಟರಾಜ ಮಾತ್ರ ಮೊದಲನೆಯವಳನ್ನು ಪ್ರತ್ಯೇಕ ಅರಮನೆಯಲ್ಲಿಟ್ಟ

ನಲ್ಲದೆ ಅವಳ ಸೇವೆಗೆಂದು ತಕ್ಕ ಸೇವಕ ವರ್ಗವನ್ನು ನಿಯಮಿಸಿದನು. ಆದರೆ ಅವಳಿಗೆ ನಿತ್ಯ ಆಹಾರ ಪದಾರ್ಥಗಳನ್ನು ಕಳಿಸುವ ಅಧಿಕಾರ ಮಾತ್ರ ಎರಡನೆಯ ಹೆಂಡತಿಗೆ ಕೊಡಲ್ಪಟ್ಟಿತು.

ಹಿರಿಯ ರಾಣಿಗೆ ಬರುತ್ತಿದ್ದ ಆಹಾರ ಅವಳಿಗೆ ಮಾತ್ರವಲ್ಲ, ಅವಳ ಒಬ್ಬ ದಾಸಿಗೆ ಹಾಗೂ ಅವಳು ತನ್ನ ಸವಾರಿಗೆಂದಿಟ್ಟುಕೊಂಡಿದ್ದ ಹೆಣ್ಣು ಕುದುರೆಗೂ ಸಾಲುವಷ್ಟಿರುತ್ತಿತ್ತು.

ವೆಂಕಟರಾಜನೇನೋ ಎರಡನೆಯವಳಿಂದ ತನಗೆ ಸಂತತಿಯಾಗಬಹುದೆಂದು ಬಗೆದು ಇನ್ನೊಂದು ಮದುವೆ ಮಾಡಿಕೊಂಡಿದ್ದ. ಆದರೆ ಹೊಸ ಹೆಂಡತಿಯೂ ಗರ್ಭಿಣಿಯಾಗುವ ಚಿಹ್ನಗಳಾವವೂ ತೋರಿಬಾರದಾಗ ತನ್ನ ದೈವವನ್ನು ತಾನೇ ಹಳಿದುಕೊಂಡ. ಬಹಳ ವಿಚಾರಮಾಡಿದ ನಂತರ ಮಂತ್ರಿಗಳನ್ನು ಕರೆದು ಅವರಿಗೆ ತನ್ನ ರಾಜ್ಯಾಡಳಿತವನ್ನೆಲ್ಲ ಒಪ್ಪಿಸಿ ತಪಸ್ಸಿಗೆಂದು ನಡೆದ.

ದೀರ್ಘಾವಧಿಯ ವರೆಗೆ ಶಿವನನ್ನು ಕುರಿತು ತಪಸ್ಸು ಮಾಡಲಾಗಿ ದೇವರು ಪ್ರತ್ಯಕ್ಷನಾಗಿ ಒಂದು ಮಾವಿನ ಹಣ್ಣನ್ನಿತ್ತು, ಅದನ್ನು ರಾಣಿಯರಿಗಿತ್ತರೆ ಅವರು ಗರ್ಭಿಣಿಯಾಗುವರೆಂದು ಹೇಳಿದನು.

ದಯಾಳುವಾದ ಶಂಕರನನ್ನು ಮನವಾರೆ ಸ್ತುತಿಸಿ ಅರಸನು ಅರಮನೆಗೆ ಮರಳಿದನು. ಬಂದವನೆ ಕಿರಿಯ ಪತ್ನಿಯನ್ನು ಕರೆದು, "ಪ್ರಿಯತಮೆ, ದೇವರು ಪ್ರತ್ಯಕ್ಷನಾಗಿತ್ತ ಫಲವಿದು ಇದನ್ನು ನೀನು ಸೇವಿಸಿದರೆ ನಮಗೆ ಸಂತಾನಪ್ರಾಪ್ತಿಯಾಗುವುದು", ಎಂದು ಹೇಳಿ ಶಿವನಿತ್ತ ಮಾವಿನ ಹಣ್ಣನ್ನು ಅವಳಿಗೆ ಕೊಟ್ಟನು.

ಇದನ್ನು ಕೇಳಿದ ಕಿರಿಯ ರಾಣಿಯ ಆನಂದಕ್ಕೆ ಪಾರವೇ ಉಳಿಯಲಿಲ್ಲ. ಹಿರಿಯ ರಾಣಿಯ ನೆನಪು ಈ ಕ್ಷಣಕ್ಕೆ ತನ್ನ ಪತಿಗಾಗದ್ದಕ್ಕೆ ಅವಳಿಗೆ ಇನ್ನೂ ಸಮಾಧಾನವೆನಿಸಿತು. ಹಿರಿಯ ರಾಣಿಯ ವಿಚಾರ ಅವನ ಮನದಲ್ಲಿ ಸುಳಿವ ಮೊದಲೇ ಹಣ್ಣು ತಿನ್ನಿಸಿ ಬಿಡಬೇಕೆಂದುಕೊಂಡು ಅವನನ್ನು ಅಲ್ಲಿಂದ ಹೊರಗೆ ಕಳುಹಿದಳು.

ಅರಸನು ದರಬಾರಕ್ಕೆ ಹೋದೊಡನೆಯೆ ದೇವದತ್ತವಾದ ಫಲವನ್ನು ಕೈಗೆತ್ತಿಕೊಂಡು ಚಿನ್ನದ ಪಾತ್ರೆಯೊಂದರಲ್ಲಿ ಒಂದು ಹನಿ ರಸವನ್ನೂ ಬಿಡದಂತೆ ಹಿಂಡಿ ಗೊರಟವನ್ನು ಕಿಟಕಿಯ ಹೊರಗೆಸೆದಳು. ಅನಂತರ ರಸವನ್ನೆಲ್ಲ ತುಸುವೂ ಉಳಿಯದಂತೆ ಸೇವಿಸಿದಳು.

ಕಿರಿಯ ರಾಣಿಯಿಂದ ತನ್ನೊಡತಿಗೆ ಆಹಾರವನ್ನೊಯ್ಯಲೆಂದು ಹಿರಿಯ ರಾಣಿಯ ಸೇವಕಿಯು ನಿತ್ಯವೂ ಅರಮನೆಗೆ ಬರುತ್ತಿದ್ದಳು. ಆ ದಿನ ಆಕೆ ಅಲ್ಲಿಗೆ ಬಂದಾಗ ಅರಸನು ದೇವದತ್ತ ಮಾವಿನ ಹಣ್ಣಿನ ಬಗ್ಗೆ ಕಿರಿಯ ರಾಣಿಗೆ ಹೇಳುತ್ತಿದ್ದುದನ್ನು ಬಾಗಿಲ ಮರೆಯಲ್ಲಿ ನಿಂತು ಲಕ್ಷ್ಯಗೊಟ್ಟು ಕೇಳಿದಳು. ಅಲ್ಲದೆ ರಾಣಿಯು ಹಣ್ಣನ್ನು ಹಿಂಡಿ ಗೊರಟವನ್ನು ಕಿಟಕಿಯ ಹೊರಗೆ ಎಸೆದುದನ್ನೂ ನೋಡಿದಳು. ಅದರಿಂದ ತನ್ನ ಒಡತಿಗೆ ಏನಾದರೂ ಪ್ರಯೋಜನ ಆದರಾಗಲೆಂದುಕೊಂಡು ಆಕೆ ತಕ್ಷಣ ಓಡುತ್ತ ಹೊರಗೆ ಹೋಗಿ ಆ ಗೊರಟವನ್ನು ಜೋಪಾನವಾಗಿ ತೆಗೆದಿರಿಸಿಕೊಂಡಳು.

ಶಿವನಿಂದ ವರಪ್ರದಾನವಾಗಿ ದೊರೆತ ಮಾವಿನ ಹಣ್ಣಿನ ಗೊರಟವನ್ನು ಸೇವಕಿ ಹಿರಿಯ ರಾಣಿಗಿತ್ತು ತಾನು ಕೇಳಿದುದನ್ನೆಲ್ಲ ಹೇಳಿದಾಗ ಪತಿಯ ಪಕ್ಷಪಾತವನ್ನು ನೆನೆದು ನಿಟ್ಟುಸಿರುಬಿಟ್ಟಳು. ಆದರೂ ದೇವಾಂಶವುಳ್ಳ ಗೊರಟವನ್ನು ಸೇವಿಸುವುದಾಗಿಯೇ ನಿರ್ಧರಿಸಿದಳು. ಈಗ ತುಸುವೂ ವೇಳೆಗಳೆಯದೆ ಆ ಗೊರಟವನ್ನೊಡೆದು ಅದರಲ್ಲಿಯ ತಿರುಳನ್ನೆಲ್ಲ ತಾನು ತಿಂದು ಉಳಿದುದನ್ನು ತನ್ನ ಹೆಣ್ಣು ಕುದುರೆಗೆ ತಿನ್ನಿಸಿಬಿಟ್ಟಳು.

ಶಿವನಿತ್ತ ಆ ಹಣ್ಣು ತಿಂದವರೆಲ್ಲರಿಗೂ ಕಾಲಾನಂತರದಲ್ಲಿ ಮಕ್ಕಳಾದುವು. ಕಿರಿಯ ರಾಣಿಗೆ ಇಬ್ಬರು ಸುಂದರ ಗಂಡುಮಕ್ಕಳು ಜನಿಸಿದರೆ ಹಿರಿಯಳು ಮಾತ್ರ ಒಂದು ಆಮೆಯನ್ನು ಪಡೆದಳು. ಕುದುರೆಯು ಶ್ರೇಷ್ಠ ತರಗತಿಯ ಹೆಣ್ಣು ಮರಿಯನ್ನು ಪಡೆಯಿತು.

ತನ್ನ ಕಿರಿಯ ರಾಣಿ ಪುತ್ರರಿಬ್ಬರನ್ನು ಪಡೆದುದು ಮಾತ್ರ ವೆಂಕಟರಾಜನಿಗೆ ತಿಳಿದಿತ್ತು. ಅಂತೆಯೆ ಅವನು ಪುತ್ರೋತ್ಸವವನ್ನು ಅತ್ಯಂತ ವೈಭವದಿಂದ

ನೆರವೇರಿಸಿದನು.

ರಾಜಕುಮಾರರಿಬ್ಬರೂ ಯೋಗ್ಯ ವಯಸ್ಕರಾದ ನಂತರ ಅವರ ಶಿಕ್ಷಣವೂ ಆರಂಭವಾಯಿತು. ಚಿಕ್ಕ ವಯಸ್ಸಿನಲ್ಲಿಯೇ ಅವರು ರಾಜ್ಯದ ಆಡಳಿತದಲ್ಲಿ ಆಸ್ಥೆ ವಹಿಸಲಾರಂಭಿಸಿದರು.

ಹಿರಿಯ ರಾಣಿ ಮಾತ್ರ ತನಗೆ ದೊರೆತುದರಿಂದಲೇ ಸಮಾಧಾನಪಟ್ಟುಕೊಂಡಿರಬೇಕಾಯಿತು. ಆದರೆ ಜಗತ್ತಿನಲ್ಲಿ ತಾಯಪ್ರೀತಿಗೆ ಸಮನಾದುದು ಬೇರಾವುದೂ ಇಲ್ಲ. ಆಮೆಯೊಂದು ತನ್ನ ಮಗುವಾಗಿ ಜನಿಸಿತೆಂದು ಹಿರಿಯ ರಾಣಿ ಅದನ್ನು ಕಡೆಗಣಿಸಲಿಲ್ಲ. ಅದು ಸಹ ತನ್ನ ಕರುಳಬಳ್ಳಿಯ ಹೀಚೇ ಎಂದುಕೊಂಡು ಅತ್ಯಂತ ಪ್ರೇಮದಿಂದ ಅದಕ್ಕೆ ತನ್ನ ಮೊಲೆಹಾಲನ್ನೇ ಉಣಿಸುತ್ತ ಹಾಸಿಗೆಯಲ್ಲಿ ತನ್ನ ಮಗ್ಗುಲಲ್ಲೇ ಮಲಗಿಸಿಕೊಳ್ಳುತ್ತಿದ್ದಳು. ಈ ರೀತಿ ಆಮೆಯು ಬೆಳೆಯಲಾರಂಭಿಸಿತು.

ಇತ್ತೀಚೆ ಕೆಲದಿನಗಳಿಂದ ಮರುದಿನಕ್ಕೆಂದು ಕಾದಿರಿಸಿದ ಆಹಾರ ರಾತ್ರಿಯೇ ಮಾಯವಾಗಿಬಿಡುತ್ತಿದ್ದುದನ್ನು ಹಿರಿಯ ರಾಣಿ ಗಮನಿಸಿದ್ದಳು. ಸೇವಕಿಯನ್ನು ವಿಚಾರಿಸಿದಾಗ ಅವಳಿಂದಲೂ ಸರಿಯಾದ ಸಮಾಧಾನ ಸಿಕ್ಕಲಿಲ್ಲ. ಆ ರಾತ್ರಿ ಎಚ್ಚರವಾಗಿದ್ದುಕೊಂಡು 'ಕಳ್ಳ'ನನ್ನು ಶೋಧಿಸುವುದೆಂದು ಆಕೆ ನಿರ್ಧರಿಸಿದ್ದಳು.

ಅಂದು ಮಧ್ಯರಾತ್ರಿಯ ಸುಮಾರಿಗೇ ತನ್ನ ಮಗು ಆಮೆಯ ಹಾಸಿಗೆಯಲ್ಲಿ ಏನೊ ಸದ್ದಾದುದು ಹಿರಿಯ ರಾಣಿಯ ಗಮನಕ್ಕೆ ಬಂತು. ಮಲಗಿದ್ದಲ್ಲಿಂದಲೇ ತುಸು ಲಕ್ಷ್ಯಪೂರ್ವಕವಾಗಿ ನೋಡಿದಾಗ ಅವಳಿಗೆ ಒಂದು ವಿಚಿತ್ರವೇ ಕಂಡಿತು. ಆಮೆಯ ಕವಚವನ್ನು ಬದಿಗೆ ಸರಿಸಿ ಅದರೊಳಗಿನಿಂದ ಸೂರ್ಯದೇವನಂತೆ ಕಂಗೊಳಿಸುವ ಬಾಲಕನೊಬ್ಬ ಹೊರಬಂದಂತಾಯಿತು. ಆ ಬಾಲಕ ತುಸುವೂ ಸದ್ದು ಮಾಡದೆ ಅಡುಗೆ ಮನೆಯತ್ತ ನಡೆದ. ಈ ನೋಟ ಕಂಡ ರಾಣಿಗೆ ಅರೆಕ್ಷಣ ಅದನ್ನು ನಂಬುವುದೇ ಕಠಿಣವೆನಿಸಿತಾದರೂ ನಂತರ ಕಳ್ಳ ಹೆಜ್ಜೆಗಳನ್ನಿಡುತ್ತ ಅಡುಗೆ ಮನೆಯಲ್ಲಿರಿಸಿದ್ದ ಆಹಾರವನ್ನು ಬಾಲಕ ಭರಭರನೆ ತಿನ್ನುತ್ತಿದ್ದುದನ್ನು ಕಂಡು ಸಂತೋಷ ಸಾಗರದಲ್ಲಿ ತೇಲಿದಳು. ಈ ಆನಂದದೋನ್ಮಾದದಲ್ಲಿಯೂ ಅವಳ ಮಿದುಳು ಚುರುಕುತನದಿಂದ ಕೆಲಸ ಮಾಡಿತು. ಕೂಡಲೇ ತನ್ನ ಕೋಣೆಗೋಡುತ್ತ ಬಂದವಳೇ ಅವಳು ಬಾಲಕ ಮರಳುವುದರೊಳಗೆ ಆಮೆಯ ಕವಚನವನ್ನು ಸುಟ್ಟು ಹಾಕಿದಳು.

ಅಡುಗೆ ಮನೆಯಿಂದ ಬಾಲಕ ಬಂದೊಡನೆ ಅತ್ಯಂತ ಹರುಷದಿಂದ ಅವನನ್ನು ಅಪ್ಪಿಕೊಂಡವಳೇ, "ಕಂದಾ, ಆಮೆಯ ಕವಚದಲ್ಲೇಕೆ ಅಡಗಿರುತ್ತಿದ್ದೆ? ಅದನ್ನು ನಾನೇ ಸುಟ್ಟು ಹಾಕಿದೆ. ನಿನಗೆ ಕೋಪವೇ? ಇದೇ ರೂಪದಲ್ಲಿ ಉಳಿದು ನನ್ನ ಹೃದಯಕ್ಕೆ ನೀನು ಸಂತಸವನ್ನೀಯಲಾರೆಯಾ?" ಎಂದು ರಾಣಿ ತನ್ನ ಹೃದಯವನ್ನೇ ಮಗನೆದುರು ಬಿಚ್ಚಿದಳು.

## ನಿದ್ರೆ ಬರುತ್ತಿಲ್ಲವೆ?

ನೀವು ನಿದ್ರಾರಾಹಿತ್ಯದಿಂದ ಬಳಲುತ್ತೀರಾ? ಹಾಗೆಂದು ನಿದ್ರೆ ಮಾತ್ರೆಗಳಿಗೆ ಮೊರೆ ಹೊಕ್ಕಿದ್ದೀರಾ? ಇದು ಅಪಾಯಕರವೆಂದು ಗೊತ್ತಿದ್ದೂ ಬೇರೆ ದಾರಿಯೆ ಇಲ್ಲವೆಂದು ಅವುಗಳನ್ನು ಬಳಸುತ್ತಿದ್ದೀರಾ? ಹಾಗಾದರೆ ಇಲ್ಲೊಂದು ಸಂತಸದ ಸುದ್ದಿ. ಲ್ಯಾವೆಂಡರ್ ಎಣ್ಣೆ ಇದೆಯಲ್ಲ, ಅದನ್ನು ಮೂಸಿದರೆ ಸಾಕು, ಗಾಢವಾದ ನಿದ್ರೆ ಬರುತ್ತದೆಂದು ಸಂಶೋಧನೆಗಳು ಸಿದ್ಧಪಡಿಸಿವೆ. ಅಲ್ಲದೆ ನೀವು ಕಿರಿಯ ವಯಸ್ಸಿನವರಾಗಿದ್ದಷ್ಟೂ ಇದರ ಪರಿಣಾಮ ಹೆಚ್ಚು ತೀಕ್ಷ್ಣ! ಏಕೆಂದರೆ, ವಯಸ್ಸಾದಂತೆಲ್ಲ ಮನುಷ್ಯನಲ್ಲಿ ಘ್ರಾಣಿಸುವ ಶಕ್ತಿ ಕುಂದುತ್ತದೆ.

✿ ಕೆ. ಗಣೇಶ್

"ಅಮ್ಮಾ ನೀನು ಮಾಡಿದ್ದು ಮೂರ್ಖತನದ ಕೆಲಸವೇ ಆಯಿತು. ಇನ್ನೂ ಕೆಲ ಸಮಯ ಗೌಪ್ಯವಾಗಿರಬೇಕೆಂದು ನನ್ನ ವಿಚಾರವಿತ್ತು. ಮಿಂಚಿ ಹೋದ ಮಾತಿಗಾಗಿ ಚಿಂತಿಸಿ ಫಲವಿಲ್ಲ. ಈಗ ಮಾಡಬಾರದ್ದನ್ನು ನೀನು ಮಾಡಿಬಿಟ್ಟಿರುವಿ. ಈಗ ನನ್ನ ಮೈ, ಮುಖಗಳಿಗೆಲ್ಲ ಕಾಡಿಗೆಯನ್ನು ಬಳಿದು ಇನ್ನೂ ಕೆಲ ಸಮಯ ಪೆಟ್ಟಿಗೆಯಲ್ಲಿ ನನ್ನನ್ನು ಬಚ್ಚಿಟ್ಟುಬಿಡು," ಎಂದು ಬಾಲಕ ಉತ್ತರಿಸಿದ.

ಅರೆಮನಸ್ಸಿನಿಂದಾದರೂ ತಾಯಿ ಮಗನ ಮಾತಿಗೊಪ್ಪಲೇಬೇಕಾಯಿತು. ಮಗನ ವಿಚಾರಗಳೇನೆಂಬುದನ್ನು ತಿಳಿಯಲು ಮನಸ್ಸಾದರೂ ಸದ್ಯ ಕೇಳದಿರುವುದೇ ವಿಹಿತವೆಂದುಕೊಂಡು ಸುಮ್ಮನಾದಳು.

ಅಷ್ಟರಲ್ಲಿ ಶಿವನು ನಾರದನನ್ನು ಕರೆದು, "ಮಹರ್ಷಿ, ನಿನಗೊಂದು ಕಾರ್ಯವನ್ನು ನಾನೊಪ್ಪಿಸಬೇಕಾಗಿದೆ. ಮಲ್ಲಿಕಾರ್ಜುನದ ಅರಸ ವೆಂಕಟರಾಜನ ಹಿರಿಯ ರಾಣಿಯ ಮಗನಿಗೆ ವಿದ್ಯೆಯ ಲವಲೇಶವೂ ಇಲ್ಲ. ನೀನು ಅವನಲ್ಲಿಗೆ ಹೋಗಿ ನಾಲ್ಕು ವೇದ, ಶಾಸ್ತ್ರ, ವಿಜ್ಞಾನ, ಕಲೆ ಹಾಗೂ ಮನುಸ್ಮೃತಿಗಳನ್ನು ಹೇಳಿಕೊಡಬೇಕಲ್ಲದೆ ಅವನಿಗೆ ದೈವೀದೃಷ್ಟಿ ಪ್ರಾಪ್ತವಾಗಲೆಂದು ಪಂಚಾಕ್ಷರ ಮಂತ್ರವನ್ನು ಕಲಿಸಬೇಕು. ತಿಳಿಯಿತೆ?" ಎಂದು ಹೇಳಿದನು.

ಅದಕ್ಕೊಪ್ಪಿ ನಾರದನು ಪೆಟ್ಟಿಗೆಯಲ್ಲಿ ಅಡಗಿಕೊಂಡಿರುತ್ತಿದ್ದ ರಾಜಕುಮಾರನನ್ನು ಕಂಡು ಶಿವನ ಆಜ್ಞೆಯಂತೆ ಸಕಲ ವಿದ್ಯೆಯನ್ನೂ ಅನುಗ್ರಹಿಸಿದನು.

ಹೀಗಿರುತ್ತಲೊಂದು ದಿನ ವೆಂಕಟರಾಜನು ತನ್ನಿಬ್ಬರು ಮಕ್ಕಳನ್ನು (ಕಿರಿಯ ರಾಣಿಯ ಪುತ್ರರು) ಕರೆದು, "ಕುಮಾರರೇ, ನೀವಿಷ್ಟೊಂದು ಅಪರೂಪವಾಗಿ ಬೆಳೆಯುತ್ತಿರುವದನ್ನು ಕಂಡು ನನಗೆ ಅಪಾರ ಆನಂದವಾಗಿದೆ. ಮಕ್ಕಳ ಸರ್ವಶ್ರೇಷ್ಠ ಕರ್ತವ್ಯವೆಂದರೆ ತಂದೆಯ ಹೃದಯಕ್ಕೆ ಆನಂದವೀಯುವುದೇ ಅಲ್ಲವೆ?" ಎಂದು ಕೇಳಿದನು.

"ಹೌದು ತಂದೆಯವರೆ! ತಮ್ಮ ಇಚ್ಛೆಯೇನೆಂಬುದನ್ನು ನಮಗೆ ತಿಳಿಸಿದರೆ ಅದನ್ನು ನೆರವೇರಿಸಲು ನಾವು ತಕ್ಷಣ ಸಿದ್ಧರಾಗಿದ್ದೇವೆ," ಎಂದು ಇಬ್ಬರೂ ಒಕ್ಕೊರಲಿನಿಂದ ನುಡಿದರು.

"ಆಗಲಿ, ನನ್ನ ಮಾತು ಕೇಳಿದಾಗ ನೀವು ನಕ್ಕುಬಿಡಲಿಕ್ಕಿಲ್ಲವಷ್ಟೆ? ಉತ್ತರ ದಿಕ್ಕಿನಲ್ಲಿ ಹಿಮಾಲಯ ಪರ್ವತವಿದೆ. ಅದರಲ್ಲಿಯ ಎಲ್ಲಕ್ಕೂ ಎತ್ತರವಾದ ಶಿಖರದ ಮೇಲೆ ಮಹಾ ಸೌಂದರ್ಯವತಿಯಾದ ಯುವತಿಯೊಬ್ಬಳಿದ್ದಾಳೆ. ಅವಳನ್ನು ಮದುವೆಯಾಗಬೇಕೆಂದು ನನ್ನ ಮನಸ್ಸಾಗಿದೆ. ನೀವಾಕೆಯನ್ನು ನನಗೆ ತಂದೊಪ್ಪಿಸುವಿರಾ?" ಎಂದು ಪ್ರಶ್ನೆ ಹಾಕಿದನು.

"ತಮ್ಮ ಆಶೀರ್ವಾದವಿರಲಿ ತಂದೆ! ತಮ್ಮ ಇಚ್ಛೆಯನ್ನು ಪೂರಯಿಸಲು ನಾವು ಈಗಲೇ ಪ್ರಯಾಣ ಬೆಳೆಸುತ್ತೇವೆ," ಎಂದು ಹೇಳಿ ಅವರಿಬ್ಬರೂ ತಾಯಿ-ತಂದೆಗಳಿಂದ ಆಶೀರ್ವಾದ ಪಡೆದು ಕಾರ್ಯಕ್ಕಣಿಯಾದರು.

ಹಿರಿಯ ರಾಣಿಯ ಮಗನಿಗೆ ದೈವೀದೃಷ್ಟಿಯಿಂದಾಗಿ ಇದೆಲ್ಲ ಕೂಡಲೇ ವೇದ್ಯವಾಯಿತು. ಅಲ್ಲದೆ ತನ್ನ ಸೋದರರಿಗೆ ಆ ಕಾರ್ಯವನ್ನು ಪೂರ್ಣಗೊಳಿಸುವುದೂ ಅಸಾಧ್ಯವೆಂದು ಅವನಿಗೆ ತಿಳಿಯಿತು. ಆಗ ಸೋದರರಿಗೆ ಸಹಾಯಮಾಡಿ ತನ್ನ ತಂದೆಯ ಇಚ್ಛೆಯನ್ನು ನೆರವೇರಿಸುವದೇ ತನ್ನ ಕರ್ತವ್ಯವೆಂದು ಅವನು ಬಗೆದನು. ಈ ವಿಷಯವನ್ನೆಲ್ಲ ತಾಯಿಗೆ ಅರುಹಿ, ಅವಳ ಒಪ್ಪಿಗೆ ಹಾಗೂ ಆಶೀರ್ವಾದಗಳನ್ನು ಪಡೆದುಕೊಂಡು, ಮೈಯೆಲ್ಲ ಕಪ್ಪು ಬಣ್ಣ ಬಳಿದುಕೊಂಡು, ಹರಕು ಬಟ್ಟೆಗಳನ್ನು ಧರಿಸಿಕೊಂಡು ಸೋದರರ ಬೆನ್ನ ಹಿಂದಿನಿಂದಲೇ ನಡೆದನು.

ಅವನು ತಮ್ಮ ಹಿಂದೆ ಬರುತ್ತಿರುವುದನ್ನು ರಾಜಕುಮಾರರಿಬ್ಬರೂ ಕಂಡರಾದರೂ ಅವನ ರೂಪ ನೋಡಿ ಅವನಾವನೋ ವನಚರನಿರಬೇಕೆಂದು ಬಗೆದರು.

(ಮುಂದುವರಿಯುವದು)

# ಹೊಳೆವ ನಕ್ಷತ್ರದ ಬೆಳಕ ಹಿಡಿದು

ಕಾಣಿಸುವ ನಕ್ಷತ್ರ ಇರಬೇಕೆಂದಿಲ್ಲ
ಉರಿದು ಹೋದವೂ ಕೆಲವೊಮ್ಮೆ ಕಾಣುತ್ತವೆ
ಗಗನ ದೂರದ ಬೆಳಕು ನಮಗೆ ತಟ್ಟುವಲ್ಲಿ
ಜೀವ ಮರಣದ ಆಟಗಳೇ ನಡೆಯುತ್ತವೆ!

ಇರದ ಜೀವವೊಂದು ಬೆಳಕಾಗಿ ಕಾಣುವಾಗ
ಇದ್ದೂ ಕಾಣದವರಿಗೊಂದು ಸೋಜಿಗ
ಸತ್ತ ಮೇಲಾದರೂ ಕಾಣಿಸಬಹುದೆಂಬ ಆಸೆಯಲಿ
ಇರುವ ಕನಸಿಗೆ ನಕ್ಷತ್ರದ ಕವಚ!
ಕತ್ತಲಲಿ ನಿರುಕಿಸುವ ತಾರಾ ಜಂಗುಳಿಯಲಿ
ಜೀವವೆಷ್ಟು ಪ್ರೇತವೆಷ್ಟು ಗೊತ್ತಿದೆಯೆ?
ಜನ ಜಂಗುಳಿಯಲೇ ಗಣತಿ ನಡೆದಿಲ್ಲವಾಗಿ
ತಾರಾಗಣತಿಗೆ ಸಮಯವಿದೆಯೆ?

ಸತ್ತ ಮೇಲೂ ಕಾಣಬೇಕೆಂದಲ್ಲಿ
ಅದು ಪರಲೋಕದ ಕಣ್ಣುಗಳಿಗೆ ಮಾತ್ರ
ಇದ್ದ ಲೋಕದಲಿ ನಿಶ್ಯಬ್ಧವಾದ ಮೇಲೆ
ಯಾರಿಗೆ ಬೇಕು ಪರಲೋಕದ ಸತ್ರ
ಸತ್ತ ಮೇಲೆ ನಕ್ಷತ್ರವಾಗುವರು
ಎಂದು ಅಜ್ಜ ಹೇಳುತ್ತಿದ್ದುದು ನೆನಪಿದೆಯೆ?
ಸತ್ತ ಮೇಲೂ ಸಾಯುವ ಲೋಕಕ್ಕೇ ಹೋದ
ಅಜ್ಜಿಯ ಅರಿವು ಬೆಳಕಿನಲ್ಲಿದೆಯೆ?

ನಕ್ಷತ್ರ ಕಾಲದಲಿ ಹುಟ್ಟುವ ಜನಕೆ
ದಿನದಿನದ ನಕ್ಷತ್ರ ಸರಿಯಿದ್ದರೆ ಸಾಕು
ಜಾತಕವ ಹಿಡಿದು ಆಕಾಶಕೆ
ಬೆನ್ನು ಹಾಕುವ ಮೊದಲು
ನಕ್ಷತ್ರ ಸಂತತಿ ಕನ್ನಡಿಯಲಿ
ನೋಡಿಕೊಂಡರೂ ಸಾಕು
ಹೊಳೆವ ನಕ್ಷತ್ರ ಇದ್ದರೇನು ಇಲ್ಲದಿದ್ದರೇನು
ಕಾರ್ಗತ್ತಲಲಿ ದಾರಿ ತೋರುವತನಕ
ಕಳೆವ ಯಾರೂ ಇದ್ದರೇನು ಬಿಟ್ಟರೇನು
ಎಳೆಯ ಕಂಗಳಿಗೆ ನಾಳೆಯ ದಾರಿಯಾಗದನಕ



* ಜಿ.ಕೆ. ರವೀಂದ್ರಕುಮಾರ್

☞ ಹರಟೆ

# ರಿಮೋಟ್ ಕಂಟ್ರೋಲ್



❋ ಹಾ. ಮ್ಯ. ಸೂರಿ.

ಮೊನ್ನೆ ಒಂದು ಮದುವೆ ಮನೇಲಿ ನಾನು, ವೆಂಕ, ಶೀನಿ, ನಾಣಿ ಎಲ್ಲಾ ವಿನೋದವಾಗಿ ಮಾತುಕತೆಯಲ್ಲಿ ತಲ್ಲೀನರಾಗಿದ್ದೆವು. ಮದುವೆ ಮಾಡಿಸಿದ್ದ ಪುರೋಹಿತರಾದ ಸುಬ್ಬಾ ಜೋಯಿಸರು ನನ್ನ ಪಕ್ಕದಲ್ಲಿ ಜಮಖಾನೆಯ ಮೇಲೆ ತಲೆಗೆ ದಿಂಬು ಹಾಕಿಕೊಂಡು ಅರೆ ನಿದ್ರೆಯಲ್ಲಿದ್ದರು. ನಮ್ಮ ವಿನೋದ ಮಾತುಗಳನ್ನು ಆಲಿಸುತ್ತಾ ತಮ್ಮ ಅರೆನಿದ್ರೆಗೆ ಪದೇ ಪದೇ ಭಂಗ ತಂದುಕೊಂಡು ತಾವೂ ಅದರಲ್ಲಿ ಭಾಗವಹಿಸುತ್ತಿದ್ದರು.

ಒಂದು ಮಗು ಜಪಾನಿನಿಂದ ತಂದಿದ್ದ ಆಟಿಕೆಯ ಕಾರಿನ ಮೇಲಿನ ಆಂಟೆನ ಹೊರಗೆಳೆದುಕೊಂಡು ತನ್ನ ಕೈಲಿದ್ದ ರಿಮೋಟ್ ಕಂಟ್ರೋಲ್ ಸಾಧನದಿಂದ ಕಾರನ್ನು ಅತ್ತ ಇತ್ತ ಅಡ್ಡಾಡಿಸುತ್ತಿತ್ತು. ಅದು ನಮ್ಮೆಲ್ಲರ ಗಮನ ಸೆಳೆಯಿತು.

"ಜಪಾನಿನವರು ಬಲು ಬುದ್ಧಿವಂತರು. ಎಂಥಾ ಒಳ್ಳೆ ರಿಮೋಟ್ ಕಂಟ್ರೋಲ್! ನೋಡ್ರಪ್ಪಾ, ಕಾರನ್ನು ಹೇಗೆ ಹಿಂದೆ ಮುಂದೆ ಚಲಿಸುವಂತೆ ಮಾಡಿದ್ದಾರೆ," ಎಂದ ನಾಣಿ.

ಇನ್ನು ಶೀನ ಸುಮ್ಮನೆ ಕೂಡ್ರೋ ಪೈಕೀನೇ! ಖಂಡಿತ ಅಲ್ಲ. "ದೂರದರ್ಶನದ ಪೆಟ್ಟಿಗೆ ಒಳಗೆ ಇಂಥದೇ ರಿಮೋಟ್ ಕಂಟ್ರೋಲ್ ಅಳವಡಿಸಿದ್ದಾರೆ. ಮನೇಲಿ ದೂರದಲ್ಲೇ ಕುಳಿತು ಟಿ.ವಿ. ಹಚ್ಚಬಹುದು. ಆರಿಸಬಹುದು," ಎಂದ ಶೀನ.

"ಆ ಟಿ.ವಿ. ರಿಮೋಟ್ ಕಂಟ್ರೋಲಿನಿಂದ ಚಾನಲ್ ಬೇರೆ ಬದಲಿಸಬಹುದು, ಸೌಂಡ್ ಹೆಚ್ಚು ಕಡಿಮೆ ಮಾಡಬಹುದು. ಎಂತಹ ಸೋಜಿಗದ ವಿಜ್ಞಾನದ ವಿನ್ಯಾಸ," ಎಂದು ವೆಂಕ ಹೇಳಿದ.

ಆಗಲೇ ನಮ್ಮ ಪುರೋಹಿತರು ನಗುತ್ತಾ "ಅದೆಲ್ಲ ಸರಿ ಕಣ್ರಯ್ಯಾ, ನೀವೇನೋ ಟಿ.ವಿ. ನೋಡ್ತೀರಿ, ಚಾನೆಲ್ ಬದಲಾಯಿಸ್ತೀರಿ, ಶಬ್ದ ಹೆಚ್ಚು ಕಡಿಮೆ ಮಾಡ್ತೀರಿ, ಇಂತಹ ನಿಮ್ಮ ರಿಮೋಟ್ ಕಂಟ್ರೋಲನ್ನೇ ಕಂಟ್ರೋಲ್ ಮಾಡಿ ಅದು ಕೆಲಸ ಮಾಡದ ಹಾಗೆ ಮಾಡೋ ರಿಮೋಟ್ ಕಂಟ್ರೋಲ್ ಗೊತ್ತೇನ್ರಯ್ಯಾ!" ಎಂದರು.

"ಅರೆರೆ! ನಮಗೇ ಗೊತ್ತಿಲ್ಲದ ಅದೆಂತ ಹದ್ದು?" ಎಂದು ಬಾಯಿಬಿಟ್ಟು ಕೇಳಿದ ನಾಣಿ.

"ಕೆ.ಇ.ಬಿ. ಯೋರು ಕಣ್ರಯ್ಯಾ! ಅವರೇನಾದ್ರೂ ಕರೆಂಟು ತೆಗೆದ್ರೆ ನಿಮ್ ಟಿ.ವಿ., ರಿಮೋಟ್ ಕಂಟ್ರೋಲ್ ಎಲ್ಲಾ ನೆಗೆದು ಬೀಳತ್ತಲ್ಲಪ್ಪಾ!" ಎಂದು ನಕ್ಕು ಚಟಾಕಿ ಹಾರಿಸಿದರು ಜೋಯಿಸರು.

"ಭಲೆ ಭಲೇ ಸುಬ್ಬಾ ಜೋಯಿಸರೇ, ನಿಮಗೆ ಈ ರಿಮೋಟ್ ಕಂಟ್ರೋಲ್ ಬಗ್ಗೆ ಏನೇನೂ

ಗೊತ್ತಿಲ್ಲ ಅಂತಿದ್ದೆ. ನೀವೂ ಪರವಾಗಿಲ್ಲ,'' ಎಂದೆ ನಾನು.

"ಅಷ್ಟೇ ಏನ್ರಯ್ಯಾ, ಅದಕ್ಕಿಂತ ದೊಡ್ಡದಾದ, ಕೆಡದ, ಅದ್ಭುತವಾದ, ಚಮತ್ಕಾರವಾದ, ಶಬ್ದ ಮಾಡದ, ಸುವ್ಯವಸ್ಥೆಯಲ್ಲಿ ಯಾವಾಗಲೂ ಕೆಲಸ ಮಾಡುವ ಇನ್ನೊಂದು ಭಾರೀ ರಿಮೋಟಿದೆ. ಆಟದ ಕಾರು ಓಡಿಸೋ ರಿಮೋಟಿದೆ. ಟಿ.ವಿ.ಗೆ ರಿಮೋಟು ಅಳವಡಿಸ್ತೀರಿ. ಕೆ.ಇ.ಬಿ.ಯೋರು ಅದಕ್ಕೂ ಒಂದು ತರಹ ರಿಮೋಟು ಹಾಕಿ ತಮ್ಮ ಕೈ ಚಳಕ ತೋರಿಸ್ತಾರೆ. ಇವೆಲ್ಲವುಗಳನ್ನೂ ಮೀರಿ ಇಡೀ ವಿಶ್ವದ ಆಗುಹೋಗುಗಳನ್ನೆಲ್ಲಾ ಕಂಟ್ರೋಲ್ ಮಾಡೋ ಹೆವಿ ಡ್ಯೂಟಿ ರಿಮೋಟು ಕಂಟ್ರೋಲರ್ ಆ ಮೇಲಿರೋ "ಭಗವಂತ'', "ದೇವರು



ನಿಮ್ಮಲ್ಲಿ ಯಾರಿಗಾದ್ರೂ ಗೋತ್ತೇನ್ರಯ್ಯಾ?'' ಎಂದು ಸವಾಲು ಹಾಕಿದರು ಜೋಯಿಸರು.

ನಾವೆಲ್ಲ ಗೋಣು ಆಡಿಸಿ, "ಗೊತ್ತಿಲ್ಲ'' ಎಂದು ಒಪ್ಪಿದೆವು.

"ನೀವೆಲ್ಲ ಇನ್ನೂ ಎಳೆ ನಿಂಬೆಕಾಯಿ ಕಣ್ರಯ್ಯಾ ಕಣ್ರಯ್ಯಾ!'' ಎಂದು ಚಿಟಕಿ ನಶ್ಯ ತಮ್ಮ ಮೂಗಿಗೇರಿಸಿಕೊಂಡರು.

ಅವರ ಚಿಂತನಕ್ಕೆ ನಾವೆಲ್ಲ ತಲೆದೂಗದೆ ಇರಲಿಲ್ಲ.

●

# ಸ್ಪರ್ಧೆ ತಂದ ಪೇಚು

✷ ಬಾ.ರಾ. ಗೋಪಾಲ

ಮೈಸೂರಿನ ಮಹಾರಾಜಾ ಕಾಲೇಜಿನಲ್ಲಿ ಬಿ.ಎ. ಪದವಿ ತರಗತಿಗಳು ಆರಂಭವಾಗಿ ೧೪೨ ವರ್ಷಗಳು ಸಂದಿವೆ ಎಂಬುದನ್ನು ಪತ್ರಿಕೆಗಳಲ್ಲಿ ಓದಿದಾಗ ಪುಲಕಗೊಂಡೆ. ನಾಲ್ಕು ದಶಕಗಳ ಹಿಂದೆ ನಾನೂ ಆ ಕಾಲೇಜಿನಲ್ಲಿ ವಿದ್ಯಾರ್ಥಿಯಾಗಿದ್ದೆ. ಉದ್ದಾಮ ಪಂಡಿತರಾದ ಕುವೆಂಪು, ಡಿ.ಎಲ್. ನರಸಿಂಹಾಚಾರ್ಯ, ಯಮುನಾಚಾರ್ಯ, ಡಾ. ಪುರುಷೋತ್ತಮ್, ಡಾ. ಎನ್. ಶ್ರೀಕಂಠಶಾಸ್ತ್ರಿ, ಡಾ. ಎಂ.ವಿ. ಕೃಷ್ಣರಾವ್, ಇಂದಿಗೂ ನಮ್ಮೊಡನಿರುವ ಪ್ರಾಧ್ಯಾಪಕರಾದ ಸಿ.ಡಿ. ನರಸಿಂಹಯ್ಯ ಇವರುಗಳು ಅಂದು ಅಲ್ಲಿ ಪ್ರಾಧ್ಯಾಪಕರಾಗಿದ್ದವರು. ಈಗಲ್‌ಟನ್, ಎಂ.ವಿ. ಗೋಪಾಲಸ್ವಾಮಿ, ಎಸ್.ವಿ. ರಂಗಣ್ಣ, ಪಿ.ಎಲ್.ಡಿಸೌಜಾ ಅಂದು ಕಾಲೇಜಿನ ಪ್ರಾಚಾರ್ಯರಾಗಿದ್ದವರು. ಕಾಲೇಜಿನ ವಿದ್ಯಾರ್ಥಿ ಸಂಘ ಚಟುವಟಿಕೆಗಳ ಆಗರವಾಗಿತ್ತು.

ಆಗ ಕಾಲೇಜಿನಲ್ಲಿ- ಇತರತ್ರ ಅಂತರ ಕಾಲೇಜುಗಳು, ಅಂತರ ವಿದ್ಯಾರ್ಥಿನಿಲಯಗಳ, ವಾರ್ಷಿಕ ಸಮಾರಂಭಗಳಲ್ಲಿ ಚರ್ಚಾಸ್ಪರ್ಧೆ, ಆಶು ಭಾಷಣ ಸ್ಪರ್ಧೆಗಳು ಬಹಳ ಆಕರ್ಷಕವಾಗಿದ್ದವು. ಎರಡು ಮೂರು ವರ್ಷ ಅಲ್ಲಿನ ಕನ್ನಡ, ಇಂಗ್ಲೀಷ ಭಾಷೆಗಳ ಚರ್ಚಾಸ್ಪರ್ಧೆಗಳಲ್ಲಿ ನಾನು ಭಾಗವಹಿಸುತ್ತಿದ್ದೆ. ಇಂಗ್ಲೀಷ್ ಸ್ಪರ್ಧೆಗಳಲ್ಲಿ, ಸಾಮಾನ್ಯವಾಗಿ ಬಹುಮಾನಗಳು ನನ್ನ ಪಾಲಿಗೆ ಬರುತ್ತಿದ್ದವು. ಕನ್ನಡ ಸ್ಪರ್ಧೆಗಳಲ್ಲಿ ಡಾ. ಹಾ.ಮಾ. ನಾಯಕರು ಆಗ ಅಗ್ರಗಣ್ಯರಾಗಿದ್ದರು. ಮೊದಲನೆಯ ಬಹುಮಾನ ಅವರಿಗೇ ಮೀಸಲು. ಇಬ್ಬರೂ ಕೂಡಿ ಸ್ಪರ್ಧೆಗಳಲ್ಲಿ ಭಾಗವಹಿಸುತ್ತಿದ್ದೆವು.

ಇದನ್ನು ಪ್ರಸ್ತಾಪಿಸಿರುವುದರ ಕಾರಣ ಬೇರೆಯೇ! ೧೯೫೩ರಲ್ಲಿ ಅಂತಾರಾಷ್ಟ್ರೀಯ ವಿಶ್ವ ವಿದ್ಯಾಲಯ ಸೇವಾ ಸಂಘದ ವಾರ್ಷಿಕ ಸಮ್ಮೇಳನವನ್ನು ಮೈಸೂರು ವಿಶ್ವವಿದ್ಯಾಲಯವು ಆತಿಥೇಯ ವಿಶ್ವವಿದ್ಯಾಲಯವಾಗಿ ಆಹ್ವಾನಿಸಿತ್ತು. ಅಲ್ಲಿನ ಕಾರ್ಯಗಳ ಹೊಣೆ ಹೊರಲು ವಿದ್ಯಾರ್ಥಿಯಾದವ ಸ್ಥಳೀಯ ಕಾರ್ಯದರ್ಶಿ ಇರಬೇಕಿತ್ತು. ಪ್ರಾಧ್ಯಾಪಕ ಮಂಜುನಾಥರು ಉಪಕುಲಪತಿಗಳು. ಬೆಂಗಳೂರಿನ ಸೆಂಟ್ರಲ್ ಕಾಲೇಜ್ ವಿಶ್ವವಿದ್ಯಾಲಯದ ಒಂದು ಅಂಗ. ಅಲ್ಲಿ ಪ್ರಾಧ್ಯಾಪಕರಾಗಿದ್ದ ಉಪಕುಲಪತಿಗಳು ಮೈಸೂರಿಗೆ ಬಂದಿದ್ದರೂ ವಾರಕ್ಕೆ ಎರಡು ದಿನಗಳಾದರೂ ಬೆಂಗಳೂರಿನಲ್ಲಿರುತ್ತಿದ್ದರು- ಆಗ ಅಲ್ಲಿ ಬಹುಶಃ ಪಾಠಪ್ರವಚನಗಳಲ್ಲಿ ನಿರತರಾಗಿದ್ದರು.

ವಿಶ್ವವಿದ್ಯಾಲಯ ಪ್ರತಿನಿಧಿಯಾಗಿ ಆಯ್ಕೆ ಮಾಡಲು ವಿಶ್ವವಿದ್ಯಾಲಯಕ್ಕೆ ಬೆರಳೆಣಿಕೆಯಷ್ಟು ಕಾಲೇಜುಗಳಲ್ಲಿ ಚರ್ಚಾಸ್ಪರ್ಧೆಗಳನ್ನೇರ್ಪಡಿಸಿದ್ದರು. ಹೇಗೊ ಏನೋ ನಾನು ಆಯ್ಕೆಯಾಗಿದ್ದೆ. ಆ ವೇಳೆಗೆ ಸ್ವಲ್ಪಮಟ್ಟಿಗೆ (ಕೆಟ್ಟ ?) ಹೆಸರನ್ನು ಪಡೆದಿದ್ದ ನಾನು ಅವರ ಗಮನ ಸೆಳೆದಿದ್ದೆ. ಅವರಿಗೆ ಲೇಖಕರು ಕಳುಹಿಸಿಕೊಡುತ್ತಿದ್ದ, ಇತಿಹಾಸಕ್ಕೆ ಸಂಬಂಧಿಸಿದ ಪುಸ್ತಕಗಳನ್ನು ನನಗೆ ಕೊಟ್ಟು, ಅವುಗಳನ್ನು ಓದಿ ಅಭಿಪ್ರಾಯ ತಿಳಿಸಬೇಕೆನ್ನುತ್ತಿದ್ದರು. ಆ ಮಟ್ಟಿಗೆ ಅವರೊಂದಿಗೆ ಸ್ವಲ್ಪಮಟ್ಟಿನ ಪರಿಚಯವಾಗಿತ್ತು. ಆದರೆ ಆ ಕಾಲದಲ್ಲಿ ಅಧ್ಯಾಪಕರಿಗೆ ವಿದ್ಯಾರ್ಥಿಗಳು ಹೆದರುತ್ತಿದ್ದರು. ಇನ್ನು ಪ್ರಾಧ್ಯಾಪಕರ ಮಾತೇ ಬೇಡ. ಅವರು ಕಾಲೇಜಿನ ಮೊಗಸಾಲೆಗಳಲ್ಲಿ ಕಾಣಿಸಿಕೊಳ್ಳುತ್ತಿದ್ದಂತೆಯೇ ವಿದ್ಯಾರ್ಥಿಗಳು ಪರಾರಿ! ಇಂತಹ ಸಂದರ್ಭದಲ್ಲಿ ಉಪಕುಲಪತಿಗಳು ಕರೆಯುತ್ತಿದ್ದಾರೆ ಎಂದಕೂಡಲೇ ನಡುಕ ಆರಂಭವಾಗುತ್ತಿತ್ತು. ನಾಲ್ಕು ಮಾತುಗಳು, 'ಇಲ್ಲಿ ಪುಸ್ತಕ ಇದೆ ನೋಡು, ಅಭಿಪ್ರಾಯ ತಿಳಿಸು,' ಬರಖಾಸ್ತ್!

ಈ ಪರಿಸ್ಥಿತಿಯಲ್ಲಿ ನಾನು ವಿಶ್ವವಿದ್ಯಾಲಯದ ಪರವಾಗಿ ಸ್ಥಳೀಯ ಕಾರ್ಯದರ್ಶಿಯಾಗಿ ಆ ಸಮ್ಮೇಳನದಲ್ಲಿ ಭಾಗವಹಿಸಬೇಕೆಂದಾಗ, ಆಗುವುದಿಲ್ಲವೆಂದೆ. ಆ ಕಾಲದಲ್ಲಿ ಮೊದಲೇ ನಿಗದಿಗೂ

ಳಿಸಿದ್ದಂತೆ ಜುಲೈ ೧ ರಂದು ಎಂ.ಎ. ಪರೀಕ್ಷೆಗಳ ಆರಂಭ. ಆಗಸ್ಟ್ ೧ರಂದು ಮೌಖಿಕಪರೀಕ್ಷೆ. ಯಾವ ಕಾರಣದಿಂದಲೂ ವ್ಯತ್ಯಯವಿಲ್ಲ. ನಾನು ಆ ಸಮ್ಮೇಳನದಲ್ಲಿ ಸುಮಾರು ಮೂರು ವಾರಗ ಳಿಗೂ ಹೆಚ್ಚಾಗಿ- ಅದೂ ಮೇ-ಜೂನ್ ತಿಂಗಳುಗ ಳಲ್ಲಿ- ಭಾಗವಹಿಸಬೇಕಿತ್ತು. ಪರೀಕ್ಷೆಯ ತಯಾರಿ ಹೇಗೆ? ಹೆದರಿಕೆಯಿಂದಲೇ ಒಲ್ಲೆ ಎಂದೆ. 'ನೀನು ಒಳ್ಳೆಯ ವಿದ್ಯಾರ್ಥಿ ಎಂದು ಕೇಳಿದ್ದೇನೆ. ಚರ್ಚಾ ಸ್ಪರ್ಧೆಗಳಲ್ಲಿ ಗೆದ್ದಿದ್ದೀಯೆ! ನೀನು ಭಾಗವಹಿಸಲೇ ಬೇಕು'ಎಂಬ ಆಣತಿ. ಬರಖಾಸ್ತ್!

ಈಗ ಮುಂದೇನು? ಎಂಬ ಪ್ರಶ್ನೆ ಬಂತು. ಉಪಕುಲಪತಿಗಳಿಗೆ ಸಮೀಪವರ್ತಿಗಳೂ ನನ್ನ ಅಧ್ಯಾಪಕರೂ ಆಗಿದ್ದ ಭರತರಾಜಸಿಂಗರ ಮೊರೆ ಹೊಕ್ಕೆ. ಅವರು ತಮ್ಮ ನಿಸ್ಸಹಾಯಕತೆಯನ್ನು ಸೂಚಿಸಿದರು. ಏನು ಮಾಡಲಿ? ಬೆಂಗಳೂರಿನಲ್ಲಿ ಆಗ ಪ್ರಸಿದ್ಧವ್ವಾಗಿದ್ದ ಕೋಶಿ ಹೊಟೇಲಿನವರು ಊಟದ ಜವಾಬ್ದಾರಿ ಹೊತ್ತಿದ್ದರು. ಯಾವ ಪ್ರತಿ ನಿಧಿ ಮಾಂಸಾಹಾರಿ, ಯಾರು ಶಾಕಾಹಾರಿ, ದನದ ಮಾಂಸ ತಿನ್ನದವರು ಯಾರು, ಹಂದಿಯ ಮಾಂಸ ತಿನ್ನದವರು ಯಾರು? ಇವುಗಳ ವಿವರಗಳೆಲ್ಲ ನನಗಿತ್ತರು. ಆದರಂತೆ ಊಟದ ಸಮಯದಲ್ಲಿ ಒಬ್ಬೊಬ್ಬ ಪ್ರತಿನಿಧಿಯ ಹಿಂದೆಯೂ ನಿಂತು ಕೋಶಿಯವರು ಸೂಚಿಸಿದ್ದ ಸಂಕೇತಪದ ಬಳಸಿ ಸೂಚಿಸಬೇಕಿತ್ತು. ಡಾ. ಹೇಸ್ಟಿಂಗ್ ಎಂಬ ವೈದ್ಯ ರನ್ನು ಒಳಗೊಂಡಂತೆ ಪ್ರಪಂಚದ ಬೇರೆ ಬೇರೆ ಕಡೆಗಳಿಂದ ಸುಮಾರು ೧೦೦ ಜನ ಪ್ರತಿನಿಧಿಗಳು ಸಮ್ಮೇಳನದಲ್ಲಿ ಭಾಗವಹಿಸಿದ್ದರು. ಡಾ. ಹೇಸ್ಟಿಂಗ್ ಸಮ್ಮೇಳನದ ವೈದ್ಯಾಧಿಕಾರಿಗಳೂ ಆಗಿದ್ದರು. ಆ ಮಾಂಸಾಹಾರಗಳನ್ನು ನೋಡಿ ನೋಡಿ ನನ್ನ ಊಟದ ರುಚಿಯೇ ಹೋಗಿತ್ತು.

ಸಮ್ಮೇಳನದ ಕೊನೆಯ ದಿನಗಳು. ನನಗೆ ಪರೀಕ್ಷೆಗೆ ಬಹುಶಃ ಒಂದು ವಾರ ಉಳಿದಿತ್ತು. ಪರೀಕ್ಷೆಯನ್ನು ನೆನೆದು ಎದೆ ಡವ ಡವ ಎಂದು ಹೊಡೆದುಕೊಳ್ಳುತ್ತಿತ್ತು. ಹೀಗಿದ್ದಾಗ ಇದ್ದಕ್ಕಿದ್ದಂತೆ ಅಪೆಂಡಿಸೈಟಿಸ್‌ಗೆ ತುತ್ತಾದೆ. ಕೆ.ಆರ್. ಆಸ್ಪತ್ರೆಯಲ್ಲಿ ಆಗ ವಿದ್ಯಾರ್ಥಿಗಳಿಗಾಗಿ ಒಂದು ಕೊಠಡಿಯನ್ನು ಮೀಸಲು ಇರಿಸಲಾಗಿತ್ತು. ಡಾ. ಹೇಸ್ಟಿಂಗ್ಸ್ ನನ್ನನ್ನು ಅಲ್ಲಿಗೆ ಕರೆದುಕೊಂಡು ಹೋದರು. ಸುಪ್ರಸಿದ್ಧ ಶಸ್ತ್ರವೈದ್ಯರಾಗಿದ್ದ ಆದಿಕೇಶವುಲು ಸಿಗಲಿಲ್ಲ. ನೋವು ಕಡಿಮೆಯಾಗಲು ಹೇಸ್ಟಿಂಗ್ಸ್‌ರವರೇ ಔಷಧೋಪ ಚಾರ ನಡೆಸಿದರು. ನನಗಂತೂ ಪರೀಕ್ಷೆಯದೇ ಹೆದರಿಕೆ. ರಾತ್ರೋರಾತ್ರಿ ಆಸ್ಪತ್ರೆಯಿಂದ ಓಡಿ ಮಹಾರಾಜಾ ಕಾಲೇಜ್ ಹಾಸ್ಟೆಲಿನ ನನ್ನ ಕೊಠಡಿಗೆ ಸೇರಿಕೊಂಡೆ. ಆದರೆ ಹೇಸ್ಟಿಂಗ್ಸ್‌ರವರು ಮರುದಿನ ಮುಂಜಾನೆ ಮತ್ತೆ ಆಸ್ಪತ್ರೆಗೆ ಸಾಗಿಸಿದರು. ಸಮ್ಮೇ ಳನದ ಕಛೇರಿಯ ಅಧಿಕಾರಿಗಳಲ್ಲೊಬ್ಬರಾಗಿದ್ದ ಒಬ್ಬ ಮಹಿಳೆ (ನನಗೆ ನೆನಪಿದ್ದಂತೆ, ಶ್ರೀಮತಿ ವರ್ಜೀನಿಯ ಹಾರ್ಟ್)ನನ್ನನ್ನು ಕಾಣಲು ಬಂದಾಗ ಅತ್ತುಬಿಟ್ಟೆ. 'ನನಗೆ ಕೆಲವು ಪುಸ್ತಕಗಳು ಬೇಕಾಗಿವೆ. ನನ್ನ ಕೊಠಡಿಯಲ್ಲಿವೆ,'ಎಂದೆ. ಅರ್ಧ ಗಂಟೆಯೊ ಳಗಾಗಿ ಸೇವಕನೊಡನೆ ಹಲವಾರು ಪುಸ್ತಕಗಳನ್ನು ಹೊರೆಸಿಕೊಂಡು ಬಂದಳು. 'ನಿನಗೆ ಬೇಕಾದ್ದು ತೆಗೆದುಕೋ, ಎಲ್ಲಾ ಇಲ್ಲಿಯೇ ಇರಲಿ,'ಎಂದರು. ಡಾ. ಆದಿಕೇಶವುಲು ಬರಲಿಲ್ಲ, ನನಗೆ ಆಸ್ಪತ್ರೆ ಯಿಂದ ಬಿಡುಗಡೆಯಾಗಲಿಲ್ಲ. ನನ್ನ ಪರೀಕ್ಷೆಗೆ ಏನಾದರೂ ಬೇರೆ ವ್ಯವಸ್ಥೆ ಮಾಡಲಾದೀತೆ? ಎಂದು ಅಂದಿನ ಕುಲಸಚಿವರಿಗೆ ಮನವಿ ಸಲ್ಲಿಸಿದೆ. 'ಆಗದು'ಎಂದರು. ಉಪಕುಲಪತಿಗಳೂ ಇರಲಿಲ್ಲ. ಆದರೆ ನಂತರ ಮೈಸೂರಿಗೆ ಹಿಂದಿರುಗಿದ ಅವರು ನನ್ನನ್ನು ಕಾಣಲು ಬಂದರು. ಚಿಕ್ಕಂದಿನಿಂದ ನನ್ನ ಆರೋಗ್ಯ ಅಷ್ಟಕ್ಕಷ್ಟೆ. ಈಗ ಸರಿಯಾದ ಊಟ ಇತ್ಯಾದಿಗಳಿಲ್ಲದೆ ಬಳಲಿದ್ದೆ. ಆ ಮಾನಸಿಕ ದುಃಸ್ಥಿ ತಿಯಲ್ಲಿ ಉಪಕುಲಪತಿಗಳ ಬಳಿ 'ಜೋರಾಗಿ' ಮಾತನಾಡಿದೆ. 'ನೀವೇ ಇದಕ್ಕೆ ಹೊಣೆ,'ಎಂದೆ. ಸುಮ್ಮನಿದ್ದರು.

ಆದರೆ ಮರುದಿನ ಎರಡು ದಿನಗಳ ನಂತರ ಆರಂಭವಾಗುವ ಪರೀಕ್ಷೆಯಲ್ಲಿ ನನಗಾಗಿ ಆಸ್ಪತ್ರೆ ಯಲ್ಲಿಯೇ ಪ್ರತ್ಯೇಕವಾದ ಏರ್ಪಾಡು ಮಾಡಲಾ ಗಿದೆ ಎಂದು ತಿಳಿಸಿದರು. ಬರೆಯುವ ಅವಧಿ ಮೂರು ಗಂಟೆಗಳಷ್ಟು. ನಡು ನಡುವೆ ವಿಶ್ರಾಂತಿ ಪಡೆಯಬೇಕಿದ್ದಲ್ಲಿ ಆ ಕಾಲದ ಗಣನೆ ಇಲ್ಲ! ಇದು ಬಹುಶಃ ಅವರು ಡಾ. ಹೇಸ್ಟಿಂಗ್ಸ್‌ರವರೊಡನೆ

ಚರ್ಚಿಸಿದ ಬಳಿಕ ಮಾಡಲಾದ ಏರ್ಪಾಡು. ಎರಡು ದಿನಗಳ ನಂತರ ಪರೀಕ್ಷೆ ಆರಂಭ. ಮೊದಲ ದಿನ ಪ್ರಾಧ್ಯಾಪಕ ಸಿ.ಡಿ. ನರಸಿಂಹಯ್ಯ ಪ್ರಶ್ನೆ ಪತ್ರಿಕೆ ತಂದರು. ಕಟ್ಟುನಿಟ್ಟಾದ ಪ್ರಾಧ್ಯಾಪಕರು. ಮಾತೇ ಇಲ್ಲ. ಎರಡನೆಯ ದಿನ ಭರತರಾಜಸಿಂಗರು. ಚಿಕ್ಕ ವಯಸ್ಸಿನಲ್ಲಿಯೇ ಉಪಪ್ರಾಧ್ಯಾಪಕರಾಗಿ ಆಯ್ಕೆಗೊಂಡವರು. 'ನಿನ್ನ ಬಗೆಗೆ ಎಲ್ಲ ತಿಳಿದಿದೆ. ಪುಸ್ತಕಗಳ ನೆರವು ಬೇಕಾದರೂ ಪಡೆದುಕೋ, ಅಂತೂ ಬರಿ,' ಎಂದರು. ಬಹುಶಃ ೩ ಗಂಟೆಗಳಿಗೂ ಮೀರಿ ಅಲ್ಲಿರಲು ಅವರಿಗೆ ಆಗುತ್ತಿರಲಿಲ್ಲ. ಹೇಗೋ ಬರೆದು ಮುಗಿಸಿದೆ. ಮೂರನೆಯ ದಿನ ಇನ್ನೊಬ್ಬ ಇಂಗ್ಲೀಷ್ ಪ್ರಾಧ್ಯಾಪಕರಾಗಿದ್ದ ಓ.ಕೆ. ನಂಬಿಯಾರ್‌ರವರು ಇನ್ವಿಜಿಲೇಟರ್! ಅವರದೂ ಅದೇ ಧೋರಣೆ. ಅಂದಿನ ಪರೀಕ್ಷೆಯ ವಿಷಯ ವಿಜಯನಗರದ ಇತಿಹಾಸ. ನನಗೆ ಒಳ್ಳೆಯ ಸಮಯದಲ್ಲಿ ತಯಾರಿ ನಡೆಸಲಿಲ್ಲವೆಂಬ ಅಳುಕು. ಪರಿಣಾಮವಾಗಿ ಭಯ ಆರಂಭವಾಯಿತು. ಹೇಗೋ ಮುಗಿಸಿದೆ. ಆದರೆ ಆ ವೇಳೆಗೆ ಬಹಳ ದಣಿದಿದ್ದೆ. ಡಾ. ಆದಿಕೇಶವಲು ಬಂದರು. 'ಇದು ಹುಚ್ಚಾಟ, ಇವನು ಹೀಗೆ ಬಳಲಬಾರದು,' ಎಂದರು. ನಾಲ್ಕನೆಯ ದಿನದ ಪರೀಕ್ಷಾ ವಿಷಯ ಭಾರತ ಸ್ವಾತಂತ್ರ್ಯದ ಇತಿಹಾಸ. ವಿಷಯ ಅಗಾಧ. ರಾತ್ರಿ ಸ್ವಲ್ಪ ಹೊತ್ತು ಪುಸ್ತಕಗಳನ್ನು ಜಾಲಾಡಿಸಿದ್ದೆ. ಓದುವುದು ತುಂಬಾ, ಆದರೆ ಓದಿಲ್ಲವಲ್ಲ ಎಂಬ ಭಯ. ಮರುದಿನ ಮುಂಜಾನೆ ಜ್ವರ, ಮೈ ನಡುಕ. ಎದ್ದು ಕುಳಿತುಕೊಳ್ಳಲೂ ಆಗುತ್ತಿರಲಿಲ್ಲ. ಡಾ. ಆದಿಕೇಶವಲು ಬಂದರು. 'ಬುದ್ಧಿ ಇಲ್ಲ ನಿನಗೆ, ಮತ್ತೊಮ್ಮೆ ನೋವು ಕಾಣಿಸಿಕೊಳ್ಳುವವರೆವಿಗೂ ಇಲ್ಲಿಯೇ ಬಿದ್ದಿರು' ಎಂದರು. 'ಪರೀಕ್ಷೆ?' ಎಂದೆ. 'ಹಾಳಾಗು' ಎಂದರು.

ಪರೀಕ್ಷೆ ಆರಂಭವಾಯಿತು. ಅದೇ ನಿಃಶಕ್ತಿ, ಬರೆಯಲಾಗಲಿಲ್ಲ. ಡಾಕ್ಟರನ್ನು ಕರೆಸಿದರು. ಅವರು ಬಂದು ಸೂಜಿ ಚುಚ್ಚಿದರು ಅಷ್ಟೆ. ಮೈ ಮರೆವು. ಆ ಸಮಯದಲ್ಲಿ ನಾನು ಪರೀಕ್ಷೆಯಿಂದ ಹಿಂದೆಗೆದುಕೊಳ್ಳುತ್ತಿರುವುದಾಗಿ ಬರೆದು ನನ್ನ ಸಹಿ ಹಾಕಿಸಿ ಹೊರಟರು. ಒಂದು ವರ್ಷ ಕಳೆದುಕೊಂಡೆ.

ಈ ಸಂದರ್ಭದಲ್ಲಿ ಒಂದು ಮಾತು. ಉಪಕುಲಪತಿಗಳು ಕೈಗೊಂಡ ನಿರ್ಧಾರ ಸರಿಯೆ? ಇವನಿಗೇಕೆ ಈ ವಿಶೇಷ ಸೌಲಭ್ಯ? ಎಂಬ ಮಾತುಗಳೂ ಹೊರಟವು. ಅವರು ನನ್ನನ್ನು ನಂತರ ಕರೆಸಿದ್ದರು. ಹೀಗೆ ಹೇಳುತ್ತಿದ್ದಾರೆ ಎಂದರು. ಆದರೆ, 'ನೀನು ಬೇಡವೆಂದರೂ ಬಲವಂತವಾಗಿ ಆ ಸಮ್ಮೇಳನದಲ್ಲಿ ಭಾಗವಹಿಸುವಂತೆ ಮಾಡಿದ್ದು ನನ್ನ ಹೊಣೆ. ಅದರಿಂದ ನಿನಗೆ ನಷ್ಟವಾಯಿತು. ಯಾರು ಏನಾದರೂ ಅನ್ನಲಿ, ನನ್ನ ತಪ್ಪನ್ನು ತಿದ್ದಿಕೊಳ್ಳುವ, ನಿನಗೊಂದು ಅವಕಾಶ ನೀಡುವ ದೃಷ್ಟಿಯಿಂದ ಹೀಗೆ ಮಾಡಿದೆ,' ಎಂದರು. ಬೇರಾವ ಸೌಲಭ್ಯಗಳನ್ನೂ ನನಗೆ ನೀಡಲಿಲ್ಲ. 'ಒಂದೆರಡು ಉಪನ್ಯಾಸಕ ಹುದ್ದೆಗಳು ಖಾಲಿ ಇದ್ದಾಗ ಅರ್ಜಿ ಸಲ್ಲಿಸು,' ಎಂದರು. ಆದರೆ ಆಗ ಪ್ರಾಧ್ಯಾಪಕರಿಗೇ ಹೆಚ್ಚಿನ ಪ್ರಾಮುಖ್ಯತೆ. ಕಾರಣಾಂತರಗಳಿಂದ ನನ್ನ ಪ್ರಾಧ್ಯಾಪಕರು ನನ್ನ ಹೆಸರನ್ನು ಅನುಮೋದಿಸಲಿಲ್ಲ! ನನಗೆ ಹುದ್ದೆಯೂ ದೊರಕಲಿಲ್ಲ.

ಇನ್ನೊಂದು ಮಾತು ಹೇಳಿ ಈ ಹಳೆಯ ನೆನಪಿಗೆ ತೆರೆ ಹಾಕುತ್ತೇನೆ. ಅಂತಾರಾಷ್ಟ್ರೀಯ ವಿಶ್ವವಿದ್ಯಾಲಯ ಸಂಘದ ಆಡಳಿತ ಮಂಡಲಿ ಸಭೆ ಸೇರಿ ಅಮೆರಿಕದ ಇತಿಹಾಸ ಓದಲು, ಅದರ ಬಗ್ಗೆ ನಂತರ ಸಂಶೋಧನೆ ಮಾಡಲು ನನಗೆ ವಿದ್ಯಾರ್ಥಿವೇತನ ನೀಡಿತು. ನನಗೂ ಇದಕ್ಕೂ ಏನು ಸಂಬಂಧ? ನಮ್ಮ ಇತಿಹಾಸದಲ್ಲಿಯೇ ನನಗೆ ವಿಶೇಷ ಆಸಕ್ತಿ. ಆದುದರಿಂದ ನಾನದನ್ನು ನಿರಾಕರಿಸಿದೆ. ಉಪಕುಲಪತಿಗಳು ಕರೆಸಿ ಕಾರಣ ಕೇಳಿದರು. ವಿವರಿಸಿದೆ. ಅವರಿಗೆ ಸಂತೋಷವಾಯಿತು. ನಂತರ ಆ ವೇತನಕ್ಕೆ ವೀರೇಂದ್ರ ಅಗರ್‌ವಾಲ ಎಂಬುವರನ್ನು ಆಯ್ಕೆ ಮಾಡಿದಂತೆ ನೆನಪು. ಇವರು ನಂತರ ಮುಂದೆ ಬಂದರು. ಪಾರ್ಲಿಮೆಂಟಿನ ಸದಸ್ಯರೂ ಆದರು. ಒಂದೆರಡು ಕಾಗದಗಳನ್ನೂ ಬರೆದಿದ್ದರು. ಬಹುಶಃ ಸಿ.ಡಿ.ಎನ್. ರವರೊಬ್ಬರೇ ಈಗ ಉಳಿದಿರುವವರು ಸಾಕ್ಷಿಯಾಗಿ. ನನ್ನಲ್ಲಿರುವ ***Encounter in Asia*** ಎಂಬ ಪುಸ್ತಕ, ಅದರಲ್ಲಿನ ಚಿತ್ರಗಳು ಮೂಕ ಸಾಕ್ಷಿಗಳು. ●

# ರಥೋತ್ಸವ

✷ ಭಾರತಿ ಕುಲಕರ್ಣಿ

"ಕಾವೇರಿ, ಎಲ್ಲಾ ಸಾಮಾನು ಕಟ್ಟಿಕೊಂಡು ಆತೇನು?" ಎಂದು ರಂಗಣ್ಣ ಕೇಳಿದರು. ಕಾವೇರಿಯದು ಯಾವಾಗಲೂ ಉದಾಸೀನ ಉತ್ತರ. "ಸಾಮಾನು ಅನ್ಲಿಕ್ಕೆ ಏನು ಮಹಾ? ನನ್ನವೆರಡು ಸೀರೆ, ನಿಮ್ಮವೆರಡು ಪಂಚೆ, 'ಒಂದಿಷ್ಟು ಅವಲಕ್ಕಿ; ನಮಗೇನು ಮಕ್ಳಾ ಮರೀನಾ.... ಅದೂ ಬೇಕು, ಇದು ಬೇಕೂಂತ ಸಿಕ್ಕಾಪಟ್ಟೆ ಸಾಮಾನು ಕಟ್ಟೋದಕ್ಕೆ?"



ಕಾವೇರಕ್ಕನ ಉತ್ತರದಿಂದ ರಂಗಣ್ಣನೂ ನೊಂದುಕೊಂಡರು.

"ಕಾವೇರಿ, ಒಂದು ಮಾತು ಹೇಳ್ತೀನಿ ಕೇಳು. ನೋಡು, ಪ್ರಾಣದೇವಪುರಕ್ಕೆ ನಾನೊಬ್ನೇ ಹೋಗಿ ಬರ್ತೀನಿ. ನೀನು ಹೆಂಗಸು, ಕಾಲ್ನಡಿಗೆ, ಉಪವಾಸ-ವನವಾಸ, ಬಿಸಿಲು-ಬೇಗೆ, ಇವೆಲ್ಲಾ ನಿಂಗ್ಯಾಕೆ? ಬೇಡಿಕೊಂಡೋನು ನಾನು, ನಾನೊಬ್ನೇ ಹೋಗಿ ಬರ್ತೀನಿ ರಥೋತ್ಸವಕ್ಕೆ....."

"ರೀ, ಮಕ್ಕಳಿಗಾಗಿ ಎಂಥೆಂಥಾ ಯಜ್ಞಯಾಗಾದಿಗಳನ್ನು ಮಾಡಿದವ್ರು ಇದ್ದಾರೆ. ಅಂಥಾದ್ರಲ್ಲಿ ನಾನು ನಡೆದುಕೊಂಡು ಬರೋದು ಏನು ಮಹಾ?ಏನೇ ಆಗ್ಲಿ, ನಾನು ಬರುವವಳೇ"ಎಂದು ಕಾವೇರಕ್ಕನಿಂದ ಹಟದ ಉತ್ತರ ಬಂತು.

ಮದುವೆಯಾಗಿ ಎಂಟು ವರ್ಷ ಕಳೆದರೂ ಕಾವೇರಕ್ಕನ ಮಡಿಲು ತುಂಬಿರಲಿಲ್ಲ. ಅದೊಂದು ಕೊರಗು ಬಿಟ್ಟರೆ, ಈ ದಂಪತಿಗಳು ತಕ್ಕಮಟ್ಟಿಗೆ ಸುಖಿಗಳೆಂದೇ ಹೇಳಬಹುದು. ರಂಗಣ್ಣನವರಿಗೆ ಒಂದು ಹಳೆಯದಾದ ಮನೆ ಹಾಗೂ ಎರಡೆಕರೆ ಜಮೀನು ಇತ್ತು. ವೈದಿಕ ವಿದ್ಯೆಯನ್ನೂ ಚೆನ್ನಾಗಿ ತಿಳಿದಿದ್ದ ರಂಗಣ್ಣನವರಿಗೆ ಅದರಿಂದಲೂ ಸಾಕಷ್ಟು ಆದಾಯವಿತ್ತು. ಕಾವೇರಕ್ಕನೂ ಇದ್ದುದರಲ್ಲೇ ಅಚ್ಚುಕಟ್ಟಾಗಿ ಸಂಸಾರ ತೂಗಿಸಿಕೊಂಡು ಹೋಗುತ್ತಿದ್ದರು.

ಮಕ್ಕಳಿಗಾಗಿ ಈ ದಂಪತಿಗಳು ಮಾಡದ ವ್ರತವಿಲ್ಲ. ಉಪವಾಸ ವನವಾಸಗಳಿಗಂತೂ ಲೆಕ್ಕವೇ ಇಲ್ಲ. ಕೊನೆಗೆ ಯಾರೋ, ಪ್ರಾಣದೇವಪುರದ ಪ್ರಾಣದೇವರ ಸೇವೆಯನ್ನು ಮಾಡಿನೋಡಿ ಎಂದು ಸೂಚಿಸಿದ್ದರು. ಅಲ್ಲದೆ ಯೋಗಾಯೋಗವೂ ಕೂಡಿ ಬಂದಿರಬಹುದು, ಇಚ್ಛೆ ನೆರವೇರಿತು.

ಹೀಗಾಗಿ ಗಂಡ-ಹೆಂಡತಿ ಬರಿಗಾಲಲ್ಲಿ ಹತ್ತು ಕಿಲೋಮೀಟರ್ ದೂರ ನಡೆದು, ಇನ್ನೆರಡು ದಿನದಲ್ಲಿ ದವನದ ಹುಣ್ಣಿಮೆ ಹನುಮಜಯಂತಿಯಂದು ನಡೆಯಲಿರುವ ಪ್ರಾಣದೇವರ ರಥೋತ್ಸವದಲ್ಲಿ ಪಾಲ್ಗೊಳ್ಳಲು ಪ್ರಾಣದೇವಪುರಕ್ಕೆ ಹೊರಡಲು ನಿರ್ಧರಿಸಿದ್ದರು.



ಬಿಸಿಲು ಏರಿದಂತೆ ಬರಿಗಾಲಲ್ಲಿ ನಡೆಯಲು ಆಗುವದಿಲ್ಲವೆಂದು ರಥೋತ್ಸವದ ಹಿಂದಿನ ದಿನ ನಸುಕಿನ ನಾಲ್ಕು ಗಂಟೆಗೇ ಪ್ರಯಾಣ ಹೊರಟಿದ್ದರು ಕಾವೇರಕ್ಕ ಹಾಗೂ ರಂಗಣ್ಣ. ಅಲ್ಲಲ್ಲಿ ಬೇರೆ ಊರಿನ ಯಾತ್ರಿಕರೂ ಇವರ ಜೊತೆಗೆ ಕೂಡಿದ್ದರು. ಊರು ತಲುಪುವಷ್ಟರಲ್ಲಿ ಕಾವೇರಕ್ಕ ಹಣ್ಣಾಗಿಬಿಟ್ಟಿದ್ದರು. ಅಂಗಾಲ ತುಂಬ ಬೊಬ್ಬೆ ಎದ್ದು ನೀರು ಕೂಡ ಸೇವಿಸದೇ ಗುಡಿಯ ಕಟ್ಟೆಯಮೇಲೆ ಮಲಗಿಬಿಟ್ಟಿದ್ದರು ಕಾವೇರಕ್ಕ. ಇಡೀ ದಿನ ಹೊಟ್ಟೆಗೆ ಏನೂ ತೆಗೆದುಕೊಳ್ಳಲಿಲ್ಲ. ಅವರ ಅವಸ್ಥೆ ಕಂಡ ರಂಗಣ್ಣ, ಮರುದಿನ ಹೆಂಡತಿ ರಥೋತ್ಸವದುದ್ದಕ್ಕೂ ಉರುಳು ಸೇವೆ ಮಾಡುವದು ಬೇಡವೆಂದರು. ಆದರೆ ಕಾವೇರಕ್ಕ ಕೇಳಬೇಕಲ್ಲ? ರಥೋತ್ಸವದ ದಿನ ತಣ್ಣೀರಲ್ಲಿ ಮಿಂದು ಒದ್ದೆ ಬಟ್ಟೆಯಲ್ಲೇ ಪ್ರಾಣದೇವರ ರಥೋತ್ಸವದಗುಂಟ ಉರುಳುಸೇವೆ ನಡೆಸಿದ್ದರು. ರಥವನ್ನು ಎಳೆದೆಳೆದ ಹಾಗೇ ಇವರು ಅದರ ಮುಂದೆಯೇ ಉರುಳುತ್ತುರುಳುತ್ತ ಸಾಗಿದ್ದರು. ರಸ್ತೆಯಲ್ಲಿಯ ಚೂಪಾದ ಸಣ್ಣ ಕಲ್ಲುಗಳು, ಗಾಜಿನ ಚೂರುಗಳು ಮೈತುಂಬಾ ಪರಚಿ ರಕ್ತ ಜಿನುಗುತ್ತಿತ್ತು. ಮತ್ತೆ ರಥ ಯಥಾಸ್ಥಾನಕ್ಕೆ ಬಂದು ನಿಲ್ಲು

ವವರೆಗೂ ಇವರ ಸೇವೆ ನಡೆದೇ ಇತ್ತು. ರಂಗಣ್ಣನೋ ಗಂಡಸು; ಅವರಿಗೆ ಇದೆಲ್ಲಾ ಸಹಿಸುವ ಶಕ್ತಿಯೂ ಇತ್ತು.

ಪ್ರಾಣದೇವರಿಗೆ ಏನು ಸೇವೆ ಸಲ್ಲಿಸಿದರೂ, ಅದಕ್ಕೆ ಫಲ ಸಿಕ್ಕೇ ಸಿಕ್ಕುತ್ತದೆಂಬ ವಿಶ್ವಾಸವಿಟ್ಟುಕೊಂಡು ಬಂದಿದ್ದರು ಈ ದಂಪತಿಗಳು.

** ** **

ಅದರಂತೆಯೇ · ಮರುವರ್ಷವೇ ಕಾವೇರಕ್ಕ ಗಂಡು ಮಗುವಿನ ತಾಯಿಯಾದರು. ಮಗುವಿಗೆ 'ಪ್ರಾಣೇಶ'ಎಂದೇ ಹೆಸರಿಟ್ಟರು. ಪ್ರಾಣೇಶ ಹುಟ್ಟುವ ಮೊದಲು ವರ್ಷದಿಂದ ಹಿಡಿದು ಇಂದಿನವರೆಗೂ, ಕಾವೇರಕ್ಕ ಹಾಗೂ ರಂಗಣ್ಣ ಪ್ರತಿವರ್ಷ ಪ್ರಾಣದೇವಪುರದ ರಥೋತ್ಸವದಲ್ಲಿ ಪಾಲ್ಗೊಳ್ಳುವದನ್ನು ತಪ್ಪಿಸಿರಲಿಲ್ಲ. ಪ್ರಾಣೇಶನ ನಂತರ ಒಂದೇ ವರ್ಷಕ್ಕೆ ಹನುಮೇಶ, ಮತ್ತೆ ಎರಡು ವರ್ಷಕ್ಕೆ ಮುಖ್ಯಪ್ರಾಣ ಹುಟ್ಟಿದರು. ಕಾವೇರಕ್ಕನಿಗೀಗ ಸ್ವರ್ಗಕ್ಕೆ ಮೂರೇ ಗೇಣು.

ಬಲು ಅಕ್ಕರೆಯಿಂದ ಮಕ್ಕಳನ್ನು ಬೆಳೆಸಿದರು ತಂದೆ-ತಾಯಿ. ಮಕ್ಕಳಿಗೆ ಸ್ವಲ್ಪತೊಂದರೆಯಾದರೂ ಆಂಜನೇಯ ಸ್ವಾಮಿಗೆ ಹರಕೆ ಹೊರುತ್ತಿದ್ದರು ಕಾವೇರಕ್ಕ. ಎಂಥ ಕಷ್ಟಕಾರ್ಪಣ್ಯಗಳು ಬಂದರೂ ಪ್ರತಿವರ್ಷ ರಥೋತ್ಸವಕ್ಕೆ ಹೋಗುವುದನ್ನು ಮಾತ್ರ ತಪ್ಪಿಸಿರಲಿಲ್ಲ. ಈಗ ಸ್ವಲ್ಪ ಸ್ವಲ್ಪವೇ ಬದಲಾವಣೆ ಆಗತೊಡಗಿತ್ತು. ವಾಹನಗಳ ಅನುಕೂಲತೆಯಾದ್ದರಿಂದ ಬರಿಗಾಲಿನಲ್ಲಿ ನಡೆದು ಹೋಗುವದನ್ನು ಬಿಟ್ಟಿದ್ದರು.

ಈಗ ಮಕ್ಕಳು ದೊಡ್ಡವರಾಗಿದ್ದಾರೆ. ಇದ್ದ ಎರಡೆಕರೆ ಹೊಲ ಮಾರಿ ತಮ್ಮ ಮಕ್ಕಳಿಗೆ ಅವರ ಯೋಗ್ಯತೆಗನುಸಾರವಾಗಿ ಶಿಕ್ಷಣ ಕೊಡಿಸಿದ್ದರು ರಂಗಣ್ಣ. ಮೂವರು ಮಕ್ಕಳೂ ಕೆಲಸದ ಮೇಲೆ ಬೇರೆ ಬೇರೆ ಊರುಗಳಲ್ಲಿ ಇದ್ದಾರೆ. ಮೂವರಿಗೂ ಮದುವೆಯಾಗಿ ಮಕ್ಕಳಾಗಿವೆ. ಹೊಲಮಾರಿ ಬಂದ ದುಡ್ಡಿನಲ್ಲಿ ಮುಕ್ಕಾಲು ಭಾಗ ಮಕ್ಕಳ ಶಿಕ್ಷಣಕ್ಕೆ ಖರ್ಚಾದರೂ, ಉಳಿದ ಒಂದು ಭಾಗದಲ್ಲೇ ಹೇಗೋ ಸಂತೃಪ್ತ ಜೀವನ ಸಾಗಿಸುತ್ತಿದ್ದಾರೆ ರಂಗಣ್ಣ-ಕಾವೇರಕ್ಕ.

ಮಕ್ಕಳು ಬರಲಿ ಬಿಡಲಿ, ರಂಗಣ್ಣ ಹಾಗೂ ಕಾವೇರಕ್ಕ ಮಾತ್ರ ರಥೋತ್ಸವವನ್ನು ಇದುವರೆಗೂ ತಪ್ಪಿಸಿಲ್ಲ. ತಾಯಿ-ತಂದೆ ತಮ್ಮ ಹತ್ತಿರ ಬಂದು ಇರಲು ಮಕ್ಕಳು ಕರೆಯುತ್ತಾರೆ. ಆದರೆ "ಕೈಕಾಲು ಗಟ್ಟಿಯಿರುವಾಗ ಇನ್ನೊಬ್ಬರನ್ನು ಅವಲಂಬಿಸಬಾರದು"ಎನ್ನುವುದು ರಂಗಣ್ಣನದು ಯಾವಾಗಲೂ ಒಂದೇ ಉತ್ತರ.

ಮಕ್ಕಳೇ ಹಬ್ಬ ಹುಣ್ಣಿಮೆಗೆಂದು ಬಂದು ತಮ್ಮ ಹೆಂಡಿರು ಮಕ್ಕಳೊಂದಿಗೆ ತಂದೆ-ತಾಯಿಯರ ಜೊತೆ ನಾಲ್ಕುದಿನ ಇದ್ದು ಹೋಗುತ್ತಿದ್ದರು.

ಎಲ್ಲ ತಾಯಂದಿರಿಗಿರುವಂತೆ ಕಾವೇರಕ್ಕನಿಗೂ ಮಕ್ಕಳ ಬಗ್ಗೆ ಬಹಳ ಹೆಮ್ಮೆ ಹಾಗೂ ಅತೀವ ಪ್ರೀತಿ. ಯಾವಾಗಲೂ ಮಕ್ಕಳ ಪಕ್ಷವನ್ನೇ ವಹಿಸಿಕೊಂಡು ಮಾತನಾಡುತ್ತಿದ್ದರು. "ಏನ್ರಿ? ಮಕ್ಕಳು ಅಷ್ಟು ಕರೀತಿದಾರಲ್ಲ, ಯಾಕ್ ಅವ್ರ ಹತ್ರಾನ ಹೋಗಿ ಇರಬಾರ್ದು?"

"ಕಾವೇರಿ, ನೀನೊಬ್ಬ ಹುಚ್ಚಿ, ಪ್ರಪಂಚ ಜ್ಞಾನ ಎಳ್ಳಷ್ಟೂ ಇಲ್ಲ ನಿಂಗೆ. ಮಕ್ಕಳ್ನ ಅತಿಯಾಗಿ ನಂಬಿರೋ ನಿಂಗೆ ಹೇಳೋದಕ್ಕಿಂತ ಬಿಡೋದೇ ವಾಸಿ.... ಸಮಾಜದಾಗ ನಡಿಯೋದನ್ನು ನಾನು ಹೇಳ್ತಾ ಇದ್ದೀನಿ.... ಒಟ್ಟಿನಮ್ಯಾಲೆ ನೀನು ಮಾತ್ರ ಮಕ್ಕಳ ಕೈಯಲ್ಲಿ ಸಿಗಬೇಡ...."

"ಛೀ, ಬಿಡ್ತು ಅನ್ರಿ, ನೀವಿರೋವಾಗ ನಂಗ್ಯಾತರ ಹಂಗು? ಪ್ರಪಂಚ · ತಲೆಕೆಳಗೆ ಆದ್ರೂ ನಂಗ್ಯಾವ ಭಯಾನೂ ಇಲ್ಲಾ ನಾನೇ ಮೊದ್ಲು 'ಗಾಡಿ' ಬಿಡ್ತೇನೆ...."

"ಕಾವೇರಿ, ನೀ ಮೊದಲು ಗಾಡೀ ಬಿಟ್ರೇನೇ ನಂಗೆ ಭಾಳ ಸಂತೋಷ. ಯಾಕಂದ್ರೆ ನಿಂಗೆ ಮಕ್ಕಳ ಮೇಲೆ ಭಾರೀ ನಂಬಿಕೆ, ವಿಶ್ವಾಸ...." ಎಂದರು ರಂಗಣ್ಣ.

ಆದರೆ ಕಾವೇರಕ್ಕ ಅಂಥ ದಡ್ಡ ಹೆಂಗಸೇನೂ ಅಲ್ಲ. ಮಕ್ಕಳ ಮೇಲಿನ ಪ್ರೀತಿ ಅಂತಕರಣ, ಮೋಹಕ್ಕೆ ಉಳಿದ ತಾಯಂದಿರಂತೆ ಅವರೂ

ಹೊರತಾಗಿರಲಿಲ್ಲ.

** ** **

ಆದರೆ ಮೊದಲು ಗಾಡೀ ಬಿಟ್ಟದ್ದು ರಂಗಣ್ಣ. ಮುಂದೆ ಒಂದೆರಡೆ ತಿಂಗಳಲ್ಲಿ ರಂಗಣ್ಣ ಹಾರ್ಟ್ ಅಟ್ಯಾಕ್ ಆಗಿ ತೀರಿಕೊಂಡರು. ಕಾವೇರಕ್ಕ ಹುಚ್ಚಿಯಂತೆ ನೆಲಕೆದರಿದರು. ಒಮ್ಮಿಂದೊಮ್ಮೆಲೆ ಹೀಗಾಗುತ್ತದೆಂದು ಅವರು ಕನಸಿನಲ್ಲೂ ನೆನಸಿರಲಿಲ್ಲ. ಬಂದಿದ್ದ ಬಂಧು ಬಳಗದವರೆಲ್ಲ ರಂಗಣ್ಣನವರ ದಿನಕರ್ಮಗಳನ್ನು ಮುಗಿಸಿ ಹೊರಟು ಹೋದಾಗ, ಉಳಿದವರೆಂದರೆ, ಕಾವೇರಕ್ಕನ ಮಕ್ಕಳು, ಮೊಮ್ಮಕ್ಕಳು, ಸೊಸೆಯಂದಿರು ಹಾಗೂ ಅವರ ಇಬ್ಬರು ತಮ್ಮಂದಿರು. ಕಾವೇರಕ್ಕ ಎಲ್ಲಿ ಇರಬೇಕೆಂಬ ಬಗ್ಗೆ ಚರ್ಚೆಯಾಯಿತು. ಈಗ ಒಬ್ಬೊಬ್ಬರೇ ಬಣ್ಣ ಬದಲಾಯಿಸತೊಡಗಿದರು. ಇದ್ದುದರಲ್ಲಿ ಹಿರಿಯ ಮಗ ಪ್ರಾಣೇಶನೇ ಎಷ್ಟೋ ವಾಸಿ. ಆತ ತಾಯಿಗೆ ಹೇಳಿದ,

"ಅಮ್ಮಾ ನೀನೊಬ್ಬೇ ಇಲ್ಲಿದ್ದು ಏನೂ ಮಾಡ್ತೀಯಾ ?ನಮ್ಮೆಲ್ಲರ ಜೊತೆಗೆ ಬಂದು ಇದ್ದು ಬಿಡು ನಾವು ಮೂರು ಜನಾ ಗಂಡುಮಕ್ಕಿದ್ದೂ ನಿನ್ನೊಬ್ಬಳನ್ನೇ ಬಿಟ್ಟು ಹೋದ್ರೆ ಜನಾನಾದ್ರೂ ಏನಂದಾರು ?"

"ಕಾವೇರಕ್ಕ, ಪ್ರಾಣೇಶ ಹೇಳುವದು ಸರಿಯಾಗೇ ಇದೆ ಒಬ್ಬೇ ಇಲ್ಲಿದ್ರೆ, ಎಷ್ಟು ತಾಪತ್ರಯ ಗೊತ್ತಾ? ಹೊತ್ತುವೇಳೆ ಹೀಗೇ ಇರ್ತದಂತೆ ಹೇಳೋಕೆ ಆಗತ್ತ?"ಎಂದು ಕಾವೇರಕ್ಕನ ಇಬ್ಬರೂ ತಮ್ಮಂದಿರು ಒಟ್ಟಿಗೇ ಹೇಳಿದರು.



ಕಾವೇರಕ್ಕನಿಗೆ ಈ ಊರಿನ ನೆಲ, ರಂಗಣ್ಣನವರೊಂದಿಗೆ ಇಷ್ಟು ದಿವಸ ಕಳೆದ ದಾಂಪತ್ಯ ಜೀವನ ಒಂದೊಂದಾಗಿ ನೆನಪಾದವು. ಅಲ್ಲದೆ ರಂಗಣ್ಣನವರು ಕೊನೆಗಳಿಗೆಯಲ್ಲಿ ಹೇಳಿದ ಮಾತುಗಳು ನೆನಪಾಗಿ, ಅವರು ಮಕ್ಕಳೊಂದಿಗೆ ಇರಲು ಸುತರಾಂ ಇಷ್ಟಪಡಲಿಲ್ಲ.

ಹನುಮೇಶ ಹಾಗೂ ಮುಖ್ಯಪ್ರಾಣ, ಈ ವಿಷಯ ತಮಗೇನೂ ಸಂಬಂಧವೇ ಇಲ್ಲವೇನೋ ಎಂಬಂತೆ ಕುಳಿತಿದ್ದರು.

ಮತ್ತೆ ಪ್ರಾಣೇಶನೇ ತಮ್ಮಂದಿರ ಕಡೆ ಹೊರಳಿ ಅವರಿಗೆ ಹೇಳಿದ:

"ಹೋಗ್ಲಿ ಬಿಡಿ, ಅಮ್ಮನ ಮನಸ್ಯಾಕೆ ನೋಯಿಸಬೇಕು? ಅವ್ವ ಇಲ್ಲೇ ಇರ್ಲಿ ನಾವು ಮೂವರೂ ಆಗಾಗ ಬಂದು, ಅವಳನ್ನು ನೋಡಿಕೊಂಡು ಹೋಗೋಣ. ಪ್ರತೀ ತಿಂಗ್ಳು ಇಂತಿಷ್ಟು ಅಂತಾ ಮೂವರೂ ಹಣ ಕಳಿಸಿದ್ರಾಯ್ತು.... ಏನಂತೀರಿ?"

ಹನುಮೇಶ ಬಲು ಮುಂಗೋಪಿ. ಹೆಂಡತಿಯ ಮಾತೇ ಆತನಿಗೆ ವೇದವಾಕ್ಯ.

"ನಮಗೆ ತಿಂಗ್ಳು ತಿಂಗ್ಳು ಕಳಿಸ್ಲಿಕ್ಕೆ ಆಗೋದಿಲ್ಲ ಹೊಟ್ಟೆ ಒಳಗ ಹೊಟ್ಟೆ. ಬೇಕಿದ್ರೆ ನಮ್ಮ ಜೊತೆಗೆ ಬಂದಿರ್ಲಿ. ಈ ಮನೇನ ಮಾರಿಬಿಡೋಣ. ಬಂದ ಹಣಾನ ಬೇಕಿದ್ರೆ ಅಮ್ಮನ ಹೆಸರಲ್ಲೇ ಇಡೋಣ ಅವಳು ನಮ್ಮ ಜೊತೆಗೆ ಬರೋದಕ್ಕೆ ಹಟ ಮಾಡಿದ್ರೆ, ಅವ್ವ ಮನಸ್ಸಿಗೆ ಬಂದಹಾಗೆ ಮಾಡಿಕೊಳ್ಳಲಿ. ಈ ಹಳ್ಳಿ, ಈ ಮಣ್ಣಿನ ಮನೆಯಲ್ಲಿ ಇದ್ದು ಅದೇನು ಸುಖಾಪಡ್ತಾಳೋ ಗೊತ್ತಿಲ್ಲ"ಎಂದ ಹನುಮೇಶ.

"ಹನುಮೇಶ ಹೇಳೋದ್ರಲ್ಲಿ ತಪ್ಪೇನಿದೆ? ಮಕ್ಕಳಿಗಿಂತ ಈ ಹಳೆಯ ಮಣ್ಣಿನ ಮನೆ, ಈ ಹಳ್ಳಿಗಾಡು ಇದೇ ಜಾಸ್ತಿ ಆಯ್ತಾ ಇವಳಿಗೆ? ನಾವು ಹೇಗೆ ನೋಡಿಕೊಳ್ತೀವಿ ಅನ್ನೋದು ಇವಳಿಗೇನು ಗೊತ್ತು? ಹೂವಿನಹಾಗೆ ಇಟ್ಕೊಳ್ತೇವೆ, ನೀವೇನೇ ಹೇಳ್ರಿ, ಅಪ್ಪನ ಹಾಗಲ್ಲ ಇವಳು, ಅಪ್ಪ, ಮಕ್ಳೂ ಅಂದ್ರೆ ಪ್ರಾಣ ಬಿಡ್ತಿದ್ರು...."

ಕಾವೇರಕ್ಕಗೆ ಮುಖ್ಯಪ್ರಾಣನ ಮಾತು ಕೇಳಿ ನಗಬೇಕೋ ಅಳಬೇಕೋ ತಿಳಿಯಲಿಲ್ಲ. ಆದರೂ ತಮಗರಿಯದೆಯೇ ಕಣ್ಣು ತುಂಬಿಬಂತು.

"ಹಾಗೆಲ್ಲಾ ದುಡುಕಿ ಮಾತಾಡಿ ಅಮ್ಮನ ಮನಸ್ಸು ನೋಯಿಸಬೇಡ ಮುಖ್ಯಪ್ರಾಣ, ಮೊದ್ಲೇ ಅವಳು ದುಃಖದಲ್ಲಿ ಇದ್ದಾಳೆ ನಮ್ಮನ್ನ ಬಿಟ್ರೆ ಈಗವಳಿಗೆ ಯಾರಿದ್ದಾರೆ? ಮಕ್ಳಾದ ನಾವೇ ಅವ್ವಿಗೆ ಆಧಾರವಾಗಿ ಅವಳು ಇರೋವರ್ಗ್ಗೂ ಚೆನ್ನಾಗಿ ನೋಡಿಕೊಳ್ಳೋದು ನಮ್ಮ ಕರ್ತವ್ಯ. ಈಗ ಸದ್ಯಕ್ಕಂತೂ ಎಲ್ರೂ ಊರಿಗೆ ಹೋಗಿ, ಇನ್ನೊಂದು ತಿಂಗ್ಳು ಬಿಟ್ಟು ಬರೋಣವಂತೆ. ಅಲ್ಲೀವರೆಗೂ ಅಮ್ಮನಿಗೂ ಎಲ್ಲಾ ವಿಚಾರಿಸೋದಕ್ಕೆ ಅವಕಾಶ ಸಿಕ್ಕಹಾಗೆ ಆಗುತ್ತೆ,"ಎಂದು ಪ್ರಾಣೇಶ ಮುಖ್ಯಪ್ರಾಣನ ಕಡೆ ತಿರುಗಿ ಶಾಂತವಾಗಿಯೇ ಹೇಳಿದ. ಆತ ತಮ್ಮಂದಿರಿಬ್ಬರಿಗೂ ಬುದ್ಧಿವಾದವನ್ನೂ ಹೇಳಿದಂತಿತ್ತು ಆ ಮಾತು.

"ಅಂದ್ರೆ? ನಮಗೆ ಬೇರೆ ಕೆಲ್ಸಾನೇ ಇಲ್ಲಾ ಅನ್ಕೊಂಡ್ಯಾ? ಮತ್ತೆ ಮತ್ತೆ ಬರೋಕೆ ಆಗೋದಿಲ್ಲ ನಮ್ಗೆ, ಏನಿದ್ರೂ ಇವತ್ತೊಂದು ತೀರ್ಮಾನ ಆಗ್ಲೇಬೇಕು"ಎಂದು ಖಂಡತುಂಡಾಗಿ ಹೇಳಿದ ಮುಖ್ಯಪ್ರಾಣ.

ತಾಯಿಗಾಗಿ ಒಂದು ದಿನದ ಮಟ್ಟಿಗೆ ಬಂದು ಹೋಗದಂಥಾ ಕೆಲಸವೇ? ಮಕ್ಕಳ ಮಾತುಗಳನ್ನೇ ಕೇಳುತ್ತ ಕುಳಿತಿದ್ದ ಕಾವೇರಕ್ಕನಿಗೆ ಮಾತೇ ಬೇಡವಾಯಿತು.

ಹೀಗೆ ಅಣ್ಣತಮ್ಮಂದಿರ ಮಾತು ಬೆಳೆಯುತ್ತ ಬೆಳೆಯುತ್ತ ಜಗಳ ಪ್ರಾರಂಭವಾಯಿತು. ಮಧ್ಯ ಮಧ್ಯ ಅವರ ಹೆಂಡಂದಿರೂ ಮಾತನಾಡಿ ಉರಿಯುವ ಜಗಳಕ್ಕೆ ತುಪ್ಪ ಸುರಿಯತೊಡಗಿದ್ದರು.

ದೇವರು ತಮಗೆ ಈ ಗತಿ ತಂದಿಡುತ್ತಾನೆಂದೂ, ತಮ್ಮ ಮಕ್ಕಳು ಹೀಗೆ ಇರಬಹುದೆಂದೂ, ಕಲ್ಪನೆಯನ್ನೂ ಮಾಡಿರಲಿಲ್ಲ ಕಾವೇರಕ್ಕ. ತಮ್ಮ ಸೌಭಾಗ್ಯವನ್ನೇ ಕಳೆದುಕೊಂಡು ಒಂದು ಮೂಲೆಯಲ್ಲಿ ಅಳುತ್ತಾ ಕುಳಿತಿದ್ದರಾದರೂ, ತಮ್ಮ ಸಲುವಾಗಿಯೇ ಇಷ್ಟೆಲ್ಲಾ ಹಗರಣ ನಡೆಯುತ್ತಿರುವಾಗ ತಾವು ಇನ್ನು ಬಾಯಿ ಮುಚ್ಚಿಕೊಂಡು ಕೂಡುವದು ಸರಿಯಲ್ಲ ಅನ್ನಿಸಿತವರಿಗೆ. ಮಕ್ಕಳನ್ನು ಸಮಾಧಾನಪಡಿಸಲು ಪ್ರಯತ್ನಿಸಿದರು:

"ನೋಡಿ ಮಕ್ಕಳೇ, ನೀವು ನನ್ನ ಸಲುವಾಗಿ ಜಗಳವಾಡೋದೂ ಬೇಡ, ಹಣ ಕಳಿಸುವದೂ ಬೇಡ; ನಾನಿರೋವರ್ಗೂ ಈ ಮನೆಯನ್ನು ಮಾರುವದೂ ಬೇಡ. ನಾನು ಈ ಮನೆಯಲ್ಲೇ ಸಾಯ್ತೀನಿ. ನಂತರ ನೀವು ಬೇಕಾದ್ದು ಮಾಡಿಕೊಳ್ಳಿ.ನಾನಿಲ್ಲಿ ಹೇಗೋ ಜೀವಿಸಿಕೊಂಡು ಇರ್ತೀನಿ. ನಂಗಾಗಿ ಕಚ್ಚಾಡದೇ ನಾಳೆ ನಿಶ್ಚಿಂತೆಯಿಂದ ಎಲ್ಲರೂ ನಿಮ್ಮ ನಿಮ್ಮ ಊರಿಗೆ ಹೊರಡಬಹುದು."

ಇಂಥ ಮಕ್ಕಳ ಜೊತೆಗೆ ಹೋಗಿರುವದೆಂದರೆ, ಹಗ್ಗ ಕೊಟ್ಟು ಕೈಕಟ್ಟಿಸಿಕೊಂಡಂತೆ, ಅನ್ನಿಸಿತವರಿಗೆ. ಮಕ್ಕಳು ಮೂವರೂ ಸಿಟ್ಟಿನಿಂದ ಹೊರನಡೆದು ಬಿಟ್ಟರು.

ಈಗ ಕಾವೇರಕ್ಕನ ತಮ್ಮಂದಿರು ಪಿಸು ಧ್ವನಿಯಲ್ಲಿ ಅಕ್ಕನಿಗೆ ಹೇಳಿದರು, "ಕಾವೇರಕ್ಕ, ಹೆಣ್ಣು ಮೊದ್ಲು ತಂದೆ ಹತ್ರ, ನಂತರ ಗಂಡ, ಆ ಮೇಲೆ ಮಕ್ಕಳ ಹತ್ತಿರ ಅಂತ ಶಾಸ್ತ್ರಾನೇ ಇದೆ. ನಮ್ಮನ್ನ ಕೇಳಿದ್ರೆ ಮಕ್ಕಳ ಹತ್ತಿರ ಹೋಗಿರೋದೇ ಒಳ್ಳೇಯದು. ನಾಳೆ ನಿಂಗೆ ಆಪತ್ತು ಅನಿವಾರ್ಯ. ಜಡ್ಡು-ಜಾಪತ್ತು ಏನೇ ಆದ್ರೂ ಮಕ್ಳೇ ಮಾಡಬೇಕು ತಾನೆ? ಈಗವರನ್ನ ಸಿಟ್ಟಿಗೆಬ್ಬಿಸಿ, ನೀನು ಅವರ ಜೊತೆಗೆ ಹೋಗ್ದೇ ಇಲ್ಲೇ ಒಬ್ಳೇ ಇರ್ತೀನಂದ್ರೆ, ನಾಳೆ ನಿಂಗೆ ಗುಟುಕು ನೀರೂ ಬಿಡುವವರಲ್ಲಾ ಅವರು. ಇದ್ರಮ್ಯಾಲೆ ನಿನ್ನಿಷ್ಟ."

"ಇವತ್ತೊಂದು ರಾತ್ರಿ ನಂಗೂ ವಿಚಾರಿಸೋದಕ್ಕೆ ಅವಕಾಶ ಕೊಡ್ರಿ..." ಎಂದರು ಕಾವೇರಕ್ಕ.

ರಾತ್ರಿ ಕಾವೇರಕ್ಕ ಹಾಸಿಗೆಯಲ್ಲಿ ಕುಳಿತೇ ನಾನಾ ಮೂಲೆಗಳಿಂದ ವಿಚಾರಿಸಿದರು. ಮನಸ್ಸು ತೃಪ್ತಿಯಾಗುವವರೆಗೂ ಅತ್ತರು. ಆದರೆ ಅವರ ಅಳುವನ್ನು ಕೇಳುವವರಾರು? ಒಬ್ಬರೇ ಇರುವದು ಒಳ್ಳೆಯದು ಅನ್ನಿಸಿದರೂ, ಕೈಕಾಲು ಬಿದ್ದ ಮೇಲಾದರೂ ಮಕ್ಕಳನ್ನು ಆಶ್ರಯಿಸಲೇ ಬೇಕಲ್ಲವೇ? ರಂಗಣ್ಣ ಆಗಾಗ, ಮಕ್ಕಳ ಕೈಯಲ್ಲಿ ಸಿಗಬೇಡವೆಂದು ಹೇಳುತ್ತಿದ್ದ ಮಾತು ಕಿವಿಯಲ್ಲಿ ಪ್ರತಿಧ್ವನಿಸುತ್ತಿತ್ತು. ಆದರೆ ಮಾಡುವದೇನು? ತಮಗೆ ಮಕ್ಕಳ ಬಣ್ಣ ಈಗ ಗೊತ್ತಾಗತೊಡಗಿದೆ. ತನ್ನ ತಮ್ಮಂದಿರು ಹೇಳುವ ಮಾತೂ ಸರಿಯಾದದ್ದೆ. ಅಂತೂ ಒಬ್ಬಳೇ ಜೀವನ ಸಾಗಿಸುವದು ಯಾವ ರೀತಿಯಲ್ಲೂ ಸಮಂಜಸವಲ್ಲ ಎಂದು ಕೊನೆಯ ನಿರ್ಧಾರಕ್ಕೆ ಬಂದರು. ಈಗ ಮಕ್ಕಳ ಹತ್ತಿರ ಹೋಗಿರುವಂಥ ಅನಿವಾರ್ಯ ಪ್ರಸಂಗ ಒದಗಿಬಂದಿತ್ತು.

ಅಂತೂ ಎಲ್ಲರೂ ಸೇರಿ ಈಗ ಇದ್ದ ಮನೆಯನ್ನು ಮಾರಿ, ಬಂದ ಹಣವನ್ನು ಕಾವೇರಕ್ಕನ ಹೆಸರಿನಲ್ಲಿ ಬ್ಯಾಂಕಿನಲ್ಲಿ ಇಡುವುದೆಂಬ ಒಮ್ಮತದ ಅಭಿಪ್ರಾಯಕ್ಕೆ ಬಂದರು. ಆದರಿಂದ ಬಂದ ಬಡ್ಡಿಯಿಂದ ಕಾವೇರಕ್ಕ ಏನೂ ಮಾಡಬಹುದು. ಹೇಗೂ ಮೂವರು ಮಕ್ಕಳು. ಕಾವೇರಕ್ಕ ಒಬ್ಬೊಬ್ಬ ಮಗನ ಮನೆಯಲ್ಲಿ ನಾಲ್ಕು ನಾಲ್ಕು ತಿಂಗಳು ಇರುವದು ಎಂದಾಯಿತು.

ಒಟ್ಟಿಗೆ ಮನೆಯ ಹರಕುಮುರುಕು ವಸ್ತುಗಳೂ ಪಾಲಾದವು. ಕಿರಿಯವನ ಹೆಂಡತಿ ಸುನೀತಾ ಅಂತೂ ಹರಕು ಬುಟ್ಟಿ, ಜರಡಿ, ಗುಡಾರಕ್ಕೂ ಜಗಳವಾಡಿದಳು. ಕಾವೇರಕ್ಕ ಊಹಿಸದಿದ್ದ, ಊಹಿಸಲಾರದ ಘಟನೆಗಳು ನಡೆದು ಅವರ ಮನಸ್ಸು ಕಹಿಯಾಗಿಬಿಟ್ಟಿತು.

ಇದೇ ಸಂದರ್ಭದಲ್ಲಿ ಕೊನೆಯ ಸೊಸೆ ಸುನೀತಾ ಕಾವೇರಕ್ಕನ ತಮ್ಮಂದಿರ ಕಡೆಗೆ ತಿರುಗಿ ಅಂದಳು:

"ಮಾವ ಅವ್ರೆ, ಪಾಲು ಮಾಡೋವಾಗ ನೀವೇ ಇಬ್ರೂ ಇದ್ದೀರಾ, ಅತ್ತೆಯನ್ನು ನಾಲ್ಕು ತಿಂಗಳು ಅಂದ್ರೆ, ಕೊರೆದಹಾಗೆ ನಾಲ್ಕು ತಿಂಗ್ಳು ಇಟ್ಟುಕೊಳ್ಳೋಳು ನಾನು, ಒಂದು ದಿನಾನೂ ಹೆಚ್ಚಿಗೆ ಇಟ್ಟುಕೊಳ್ಳುವವಳಲ್ಲ..."

"ಬಿಡು ಕಣಮ್ಮ, ಏನಂತ ಮಾತಾಡ್ತೀಯಾ? ಘಟವಾಣಿ ಹೆಣ್ಣು ನೀನು, ಬಾಯಿ ಮುಂದಾಗಿ ಹುಟ್ಟೀಯಂತ ಕಾಣಸ್ತದೆ. ಏನೋ, ಮೂರು ಜನಾ ಗಂಡು ಮಕ್ಕಳು, ನಾಲ್ಕು ನಾಲ್ಕು ತಿಂಗ್ಳು ಇರ್ಲಿ ಅಂದೆವು, ಅದನ್ನೇ ದೊಡ್ಡದು ಮಾಡಬೇಡ. ನಿಮ್ಮತ್ತೆಯ ಗುಣಾ ನಿಮಗೇನು ಬಂದೀತು?" ಎಂದರು ಕಾವೇರಕ್ಕನ ಇಬ್ಬರೂ ತಮ್ಮಂದಿರು. ಅವರಿಬ್ಬರಿಗೂ ಬಹಳ ಸಿಟ್ಟು ಬಂದಿತ್ತು. ಈಗ ಸುನೀತಾ ಸ್ವಲ್ಪಮೆತ್ತಗಾದಂತೆ ಕಂಡಳು.

"ಮಾವನವರೇ, ಚೇಷ್ಟೇ ಮಾಡ್ದೆ...." ಎಂದಳು.

"ಈಗ ಚೇಷ್ಟೆ, ನಾಳೆ ಅದೇ ವಿಪರೀತಕ್ಕೆ ಹೋಗ್ತದೆ.. ಅದೇನೇ ಇರ್ಲಿ, ಒಟ್ಟಿನ ಮೇಲೆ ನಿಮ್ಮ ಅತ್ತೆಯನ್ನು ಚೆನ್ನಾಗಿ ನೋಡಿಕೊಳ್ರಿ ಆಯ್ತು. ಅದು ಸೊಸೆಯಂದಿರಾದ ನಿಮ್ಮ ಕೈಯಲ್ಲೇ ಇದೆ" ಎಂದರು

ಗುರುರಾಯರು.

"ಮಾವಾ ಅವ್ರೆ, ಸುನೀತಾ ಹೇಳಿದ್ರಲ್ಲಿ ತಪ್ಪೇನಿದೆ? ಮಾತನಾಡಿದ ಮೇಲೆ ಮುಗಿದು ಹೋಯ್ತು... ಪಾಲು ಅಂದ್ರೆ ಪಾಲು..." ಎಂದು ಈ ಸಾರಿ ಎರಡನೆಯ ಸೊಸೆ ಶಾಲಿನಿ ಕೂಡ ಧ್ವನಿಗೂಡಿಸಿದಳು.

ಮರುದಿನ ಎಲ್ಲರೂ ಊರಿಗೆ ಹೊರಟರು. ಕಾವೇರಕ್ಕ ಮೊದಲು ಹಿರಿಯ ಮಗ, ನಂತರ ಎರಡನೆಯ, ಆಮೇಲೆ ಮೂರನೆಯ ಮಗನ ಮನೆಯಲ್ಲಿ ಇರುವದು ಎಂದಾಯಿತು.

ಮನಸ್ಸು ಗಟ್ಟಿಮಾಡಿಕೊಂಡು ಮನಸ್ಸಿಲ್ಲದ ಮನಸ್ಸಿನಿಂದ ಹೊರಟಿದ್ದ ಕಾವೇರಕ್ಕ, ತನ್ನೂರಿನ ಜನ, ಜನರ ಬಾಂಧವ್ಯ, ರಂಗಣ್ಣನವರೊಂದಿಗೆ ಕಳೆದ ದಿನಗಳು ಎಲ್ಲವನ್ನೂ ನೆನೆಯುತ್ತ 'ಗೋಳೋ' ಎಂದು ಅತ್ತರು. ಊರಿನಿಂದ ಹೆಜ್ಜೆ ಕೀಳಲೇ ಆಗುತ್ತಿಲ್ಲ ಅವರಿಗೆ. ಊರಿನ ಸುಮಾರು ಜನ ಅವರನ್ನು ಕಳಿಸಿಕೊಡಲು ಬಸ್‌ಸ್ಟ್ಯಾಂಡ್‌ವರೆಗೂ ಬಂದಿದ್ದರು. ಬಸ್ಸು ಹತ್ತುವವರೆಗೂ ಹತ್ತಲೋ ಬೇಡವೋ ಅನ್ನುವಂತೆ ಕಾವೇರಕ್ಕ ಒದ್ದಾಡುತ್ತಿದ್ದರು.

ಮುಂದೆ ಹದಿನೈದು ದಿನದಲ್ಲಿ ಮೂವರೂ ಮಕ್ಕಳು ಬಂದು, ಹಳ್ಳಿಯ ತಮ್ಮ ಮನೆಯನ್ನು ಮಾರಿ, ಬಂದ ಹಣವನ್ನು ಕಾವೇರಕ್ಕನ ಹೆಸರಿನಲ್ಲಿ ಬ್ಯಾಂಕಿನಲ್ಲಿ ಇಟ್ಟರು.

ಪ್ರಾಣೇಶನೇನೋ ತಾಯಿಯನ್ನು ಚೆನ್ನಾಗಿ ನೋಡಿಕೊಳ್ಳುತ್ತಲಿದ್ದ. ಅವನ ಹೆಂಡತಿ ಶಾರದಾ ಕೂಡ ಅಂಥ ಕೆಟ್ಟ ಹೆಂಗಸೇನೂ ಅಲ್ಲ. ಪ್ರಾಣೇಶ ಪೋಸ್ಟಿನಲ್ಲಿ ಕ್ಲರ್ಕ್. ಮೇಲಾಗಿ ಸಾಲಾಗಿ ಮೂರು ಹೆಣ್ಣು ಮಕ್ಕಳ ನಂತರ ಆವಳಿ ಗಂಡು ಮಕ್ಕಳು. ದೊಡ್ಡ ಸಂಸಾರ. ಬಂದ ಸಂಬಳದಲ್ಲಿ ತಿಂಗಳು ಕಳೆಯುವದೇ ಕಷ್ಟವಾಗುತ್ತಿತ್ತು. ಎಲ್ಲದಕ್ಕೂ ಪರದಾಟ.

ಮಡಿ-ಮೈಲಿಗೆ, ದೇವರು-ದಿಂಡಿರು ಎಲ್ಲವೂ ಈ ಮಗನ ಮನೆಯಲ್ಲಿ ಆಗುತ್ತಿದ್ದರೂ ಏನೋ ಅಸಮಾಧಾನ, ಏನೋ ಒದ್ದಾಟ ಕಾವೇರಕ್ಕನಿಗೆ.




ತಾನೂ ಒಬ್ಬಳು ಊಟಕ್ಕೆ ದಂಡವಾಗಿದ್ದೇನೇನೋ ಅನ್ನಿಸಿತವರಿಗೆ. ಇಲ್ಲಿಗೆ ಬಂದಾಗಿನಿಂದ ಒಂದ್ಹೊತ್ತು ಊಟದ ಹೊರತು ರಾತ್ರಿಯ ಫಲಹಾರವನ್ನೂ ಬಿಟ್ಟುಬಿಟ್ಟಿದ್ದರು.

ನಾಲ್ಕು ತಿಂಗಳು ಪ್ರಾಣೇಶನ ಮನೆಯಲ್ಲಿ ಕಳೆದ ಕಾವೇರಕ್ಕ ಮರುದಿನವೇ ಎರಡನೆಯ ಮಗ ಹನುಮೇಶನ ಮನೆಗೆ ಬಂದಿಳಿದರು. ಈತನದು ಪುಟ್ಟ ಸಂಸಾರ.

ಗಂಡ-ಹೆಂಡತಿ ಹಾಗೂ ಐದು ವರ್ಷದ ಒಬ್ಬನೇ ಮಗ. ಹನುಮೇಶನದು ರೆವಿನ್ಯೂ ಇಲಾಖೆಯಲ್ಲಿ ಕೆಲಸ. ಬಂದ ಪಗಾರ ಸೀದಾ ಬ್ಯಾಂಕಿನಲ್ಲಿ ಜಮೆಯಾಗಿ, ಗಿಂಬಳದಲ್ಲೇ ಸಂಸಾರ ಸಾಗುತ್ತಿತ್ತು. ಅಲ್ಲದೆ ಶಾಲಿನಿಯ ತವರು ಮನೆಯೂ ಗಟ್ಟಿಕುಳದ್ದು.

ಈತನ ಮನೆಯಲ್ಲಿ ಕೊರತೆ ಎಂಬುದು ಇರಲಿಲ್ಲವಾದರೂ, ಹನುಮೇಶನ ಸಿಡುಕು ಸ್ವಭಾವ ಸಹಿಸಲಸಾಧ್ಯವಾಗುತ್ತಿತ್ತು. ಬಾಯಿಗೆ ಬಂದಂತೆ ಮಾತನಾಡಿಬಿಡುತ್ತಿದ್ದ. ಸೊಸೆಯೂ ಅಂಥವಳೇ ಸೇರಿ ಸರಿಯಾಗಿ ಚಪ್ಪಾಳೆಯಾಗುತ್ತಿತ್ತು.

ಮನೆಯ ತುಂಬಾ ಆಧುನಿಕತೆ. ಆದರೂ ಹನುಮೇಶನಿಗೆ ದೇವರು-ದಿಂಡಿರು, ಹಿರಿಯರು ಅಂದರೆ ಎಲ್ಲಿಲ್ಲದ ಭಕ್ತಿ. ಎಲ್ಲಿ ಯಾವುದೇ ಕಾರ್ಯಕ್ರಮವಿರಲಿ, ಈತ ತನ್ನ ಕೈಲಾದಷ್ಟು ಧನ ಸಹಾಯ ಮಾಡಿ ಸೇವೆಯಲ್ಲಿ ಪಾಲ್ಗೊಳ್ಳುತ್ತಿದ್ದ.

*********

ಬೆಂಗಳೂರಿನಲ್ಲಿರುವ ಕೊನೆಯ ಮಗ ಮುಖ್ಯಪ್ರಾಣನ ಮನೆಯಲ್ಲೂ ಅಷ್ಟೇ. ಗಂಡ-ಹೆಂಡತಿ ಇಬ್ಬರೂ ಕೆಲಸಕ್ಕೆ ಹೋಗುವವರು, ಮನೆಯಂತೂ ಕಸದ ತೊಟ್ಟಿಗಿಂತ ಕಡೆ. ಅವರಿಬ್ಬರೂ ಸಂಜೆ ಮನೆಗೆ ಹಿಂತಿರುಗುವವರೆಗೂ ಕೆಲಸ ಕಾವೇರಕ್ಕನಿಗೆ. ಮೊಮ್ಮಕ್ಕಳನ್ನು ನೋಡಿಕೊಳ್ಳುವದೂ ಅವಳ ಪಾಲಿಗೆ ಬರುತ್ತಿತ್ತು.

ಮೊದಲಿನಿಂದಲೂ ಕಾವೇರಕ್ಕ ಕೆಲಸಕ್ಕೆ ಹಿಂತೆಗೆದವರಲ್ಲ. ಇಷ್ಟು ಮಾಡಿದರೂ, ಸೊಸೆ ಹೋಗಲಿ, ಮಗಕೂಡ, 'ಅಮ್ಮ ಹೇಗಿದ್ದೀಯಾ?' ಎಂದು ಕೇಳುತ್ತಿರಲಿಲ್ಲ.

ಮೂವರೂ ಅಣ್ಣ ತಮ್ಮಂದಿರ ನಡುವೆ ಒಡಕು ಹುಟ್ಟಲು, ತನ್ನನ್ನು ಕೂಡ ಹಂಚಿಕೊಂಡು ತಾನು ಈ ಸ್ಥಿತಿಗೆ ಬರಲು, ಮುಕ್ಕಾಲುಪಾಲು ಈ ಮುಖ್ಯಪ್ರಾಣನ ಹೆಂಡತಿ ಸುನೀತಾಳೇ ಕಾರಣವೆಂದು ಆಗಾಗ ಕಾವೇರಕ್ಕ ಮನಸ್ಸಲ್ಲೇ ಅಂದುಕೊಂಡು ನಿಟ್ಟುಸಿರು ಬಿಡುತ್ತಿದ್ದರು. ರಾತ್ರಿ ಆಯಾಸದಿಂದ ಮಲಗುವಾಗ "ಕಾವೇರಿ, ನಿನಗೆ ಪ್ರಪಂಚ ಜ್ಞಾನ ಎಳ್ಳಷ್ಟೂ ಇಲ್ಲಾ, ಮಕ್ಳು ಮಕ್ಳು ಅಂತಾ ಬಡಕೊಳ್ತಿಯಲ್ಲಾ, ಅವು ಹತ್ರಾನೇ ಹೋಗಿ ಇರು, ಆಗ ಗೊತ್ತಾಗುತ್ತೆ ಅವ್ರ ಮುಖವಾಡ" ಎಂಬ ಗಂಡನ ಮಾತೇ ನೆನಪಿಗೆ ಬರುತ್ತಿತ್ತು.

*****

ಹೀಗೆ ಕಾವೇರಕ್ಕನ ಜೀವನ ನಾಲ್ಕು ನಾಲ್ಕು ತಿಂಗಳು ಒಬ್ಬೊಬ್ಬ ಮಗನ ಮನೆಯಲ್ಲಿ ಸಾಗಿತ್ತು. ಈಗವರು ಹಿರಿಯವ ಪ್ರಾಣೇಶನ ಮನೆಯಲ್ಲಿದ್ದಾಗ ಅವನ ಹಿರಿಯ ಮಗಳು ಮೈನೆರೆದಳು. ಅಜ್ಜಿಯಾದ ತಾವೂ ಮೊಮ್ಮಗ್ಳಿಗೆ ಏನಾದರೂ ಕೊಡಬೇಡವೇ? ಮನೆಮಾರಿದ ಹಣದಲ್ಲಿಯ ಒಂದು ಸಾವಿರ ರೂ. ತೆಗೆಸಿ, ಹಿತ್ತಾಳೆ ಬೆಂಡೋಲೆ ಹಾಕಿಕೊಳ್ಳುತ್ತಿದ್ದ ಮೊಮ್ಮಗ್ಳಿಗೆ ಪುಟ್ಟದಾದ ಕಿವಿಯ ರಿಂಗ್ ಮಾಡಿಸಿಕೊಟ್ಟರು. ಅದೇ ಒಂದು ದೊಡ್ಡ ಹಗರಣವಾಗಿ ಬಿಟ್ಟಿತು.

ಹಣಕ್ಕಾಗಿ ಮೂವರೂ ಮಕ್ಕಳಲ್ಲಿ ಕಚ್ಚಾಟ ಪ್ರಾರಂಭವಾಗಿ, ಎಳ್ಳು-ನೀರು ಬಿಡುವವರೆಗೆ ಹೋಯಿತು. ಹೀಗಾಗಿ ಕಾವೇರಕ್ಕ ತಮ್ಮ ಹಣವನ್ನು ಮೂವರಿಗೂ ಸಮಪಾಲು ಹಂಚಿಬಿಟ್ಟರು.

ಹಣ ಇದ್ದರೆತಾನೇ ಹೊಡದಾಟ ಬಡಿದಾಟ? ಈಗ ಕಾವೇರಕ್ಕ ಎಲ್ಲವನ್ನೂ ಕಳೆದುಕೊಂಡಾಗಿತ್ತು.

ಇದ್ದಕ್ಕಿದಂತೆಯೇ ಹನುಮೇಶನ ಪತ್ರ ಬಂದಿತು. ತನಗೆ ಕೃಷ್ಣಾಪುರದಿಂದ ಪ್ರಾಣದೇವಪುರಕ್ಕೆ ವರ್ಗವಾಗಿ, ತಾನಾಗಲೇ ಅಲ್ಲಿ ಮನೆ ಮಾಡಿದ್ದೇನೆಂದು ಬರೆದಿದ್ದ. ಅಣ್ಣ-ಅತ್ತಿಗೆಯ ಹೆಸರಾಗಲಿ ಪುಟ್ಟ ಮಕ್ಕಳ ಹೆಸರಾಗಲಿ ಅದರಲ್ಲಿ ಇರಲಿಲ್ಲ. ಆ ಪತ್ರ ಓದಿ ಪ್ರಾಣೇಶ ತಾಯಿಯ ಎದುರು ಕೂಗಾಡಿದ್ದ.

ಅದೇನೇ ಇರಲಿ, ಕಾವೇರಕ್ಕನ ಪಾಲಿಗೆ ಒಂದೇ ಒಂದು ಸಂತೋಷದ ಸುದ್ದಿಯೆಂದರೆ ಹನುಮೇಶನಿಗೆ ಪ್ರಾಣದೇವಪುರಕ್ಕೆ ವರ್ಗವಾದದ್ದು. ಇನ್ನು ತಾವು ರಥೋತ್ಸವದಲ್ಲಿ ಪಾಲ್ಗೊಳ್ಳಲು ಯಾವ ತೊಂದರೆಯೂ ಇಲ್ಲ. ವಾಹನ ಸೌಕರ್ಯವಾದ್ದರಿಂದ ಈಗ ಕಾಲ್ನಡಿಗೆ ಬಿಟ್ಟಿದ್ದರಾದರೂ, ಬೇರೆಯವರ ಮನೆಯಲ್ಲಿ ವಸತಿ, ತಣ್ಣೀರಿನ ಸ್ನಾನದ ಸಮಸ್ಯೆಯೇ ಇನ್ನು ತಮಗಿಲ್ಲ ಅಂದುಕೊಂಡರು.

ಅವತ್ತು ರಾತ್ರಿ ಮಲಗಿದ ಕಾವೇರಕ್ಕನಿಗೆ ನಿದ್ದೆ ಬರಲೊಲ್ಲದು. ಮಗನ ಮನೆ ಪ್ರಾಣದೇವರ ಗುಡಿಯ ಹತ್ತಿರವೇ ಇರಬಹುದೆ? ಸಮೀಪವಿದ್ದರಂತೂ ತೀರಿಯೇಹೋಯಿತು. ತಾವು ಆದಷ್ಟು ಸಮಯ ಪ್ರಾಣದೇವರ ಸೇವೆಯಲ್ಲೇ ಕಳೆಯಬಹುದು ಎಂದು ಏನೇನೋ ಅಂದುಕೊಂಡರು.

ಮರುದಿನ ಎದ್ದಾಗಿನಿಂದ ಇಡೀ ದಿನ ಲೆಕ್ಕಾಚಾರದ ಗುಂಗಿನಲ್ಲೇ ಕಳೆದರು. ಹೇಗೂ ನಾಲ್ಕು ತಿಂಗಳಾಗುತ್ತ ಬಂದಿತ್ತು. ಪ್ರಾಣೇಶನ ಮಕ್ಕಳಿಗೆ ಅಜ್ಜಿ ಅಂದರೆ ಬಲು ಪ್ರೀತಿ. 'ಅಜ್ಜಿ'ನೀನು ಎಲ್ಲಿಗೂ ಹೋಗೋದು ಬೇಡ... ಇಲ್ಲೇ ಇದ್ದು ಬಿಡು"

ಅನ್ನುತ್ತಿದ್ದವು. ಕಾವೇರಕ್ಕನೂ ಇದ್ದುಬಿಡಬಹುದಿತ್ತು. ಆದರೆ ಈಗ ಕೈಯೂ ಬರಿದು. ಮೊದಲೆ ಮನೆ ತುಂಬಾ ಹೊಟ್ಟೆಗಳು, ಮೇಲಾಗಿ ಬರು ಹೋಗುವ ಜನರ ಹಾವಳಿ. ತನ್ನದೂ ಹೊಟ್ಟೆ ಸೇರಿ ಮಗನಿಗೆ ಭಾರವಾಗಬಾರದೆಂಬ ತಾಯಿಯ ಕರುಳು.

ಯಾಕೋ ಈ ಸಾರಿ ಪ್ರಾಣೇಶನಿಗೂ ತಾಯಿಯನ್ನು ಎಲ್ಲಿಗೂ ಕಳಿಸಬಾರದೆನ್ನಿಸಿತು.

"ಅಮ್ಮಾ ಇಷ್ಟು ಜನಾ ಇರೋ ಮನೇಲಿ ನೀನೊಬ್ಬ್ಳು ಭಾರ ಆಗ್ತೀಯಾ? ಯಾಕೋ ಈ ಸರ್ತಿ ನಿನ್ನ ಕಳಿಸ್ಲಿಕ್ಕೆ ನನ್ನ ಮನಸ್ಸು ಒಂಚೂರೂ



ಒಪ್ತಾಇಲ್ಲಾ..."

"ಹಂಗಲ್ಲಾ, ಪ್ರಾಣೇಶಾ... ನಂಗಾದ್ರೂ ಹೋಗ್ಲಿಕ್ಕೆ ಮನಸ್ಸಿದೆ ಅಂದುಕೊಂಡ್ಯಾ? ಈಗಿನ ಕಾಲದಾಗ ಒಬ್ರಿಗೊಬ್ರು ಭಾರ... ನನ್ನ ಪೂರ್ಣ ಭಾರ ನಿನ್ನ ಒಬ್ಬನ ಮೇಲೆ ಹೊರೆಸಲಿಕ್ಕೆ, ನನ್ನ ಜೀವ ಒಪ್ತದಾ ನೀನೇ ಹೇಳು?" ಎನ್ನುತ್ತಾ ಕಾವೇರಕ್ಕ ಕಣ್ಣೊರೆಸಿಕೊಂಡರು.

ಗಂಡ ಇದ್ದಾಗ ತಾವು ಹಾಕುತ್ತಿದ್ದ ಲೆಕ್ಕಾಚಾರವೆಲ್ಲಾ ಬುಡಮೇಲಾಗಿ ಹೋಗಿತ್ತು.

"ಮತ್ತೆ ಬರ್ತಾರೆ ಬಿಡಿ, ಅವ್ರಿಗೂ ಒಂದೇ ಕಡೆ ಇದ್ರೆ ಬೇಜಾರಾಗೋದಿಲ್ವಾ?" ಎಂದಳು ಸೊಸೆ ಶಾರದಾ.

ಮಗನಿಗಿರುವ ಕರುಳು ರಕ್ತ ಸಂಬಂಧ, ಹೊರಗಿನ ಹೆಣ್ಣಾದ ಈಕೆಗೇನು ಬಂದೀತು?

ಕಾವೇರಕ್ಕ ಹೊರಟುನಿಂತಾಗ, "ಅಜ್ಜೀ, ಬೇಗ್ನೇ ಬಂದು ಬಿಡಜ್ಜಿ" ಎಂದು ಐದೂ ಮೊಮಕ್ಕಳೂ ಅಜ್ಜಿಯನ್ನು ತಬ್ಬಿಕೊಂಡವು.

ಈ ಪಾಲು-ಪಂಚಾಯತಿ, ಏನೂ ಅರಿಯದ ಮುಗ್ಧ ಕಂದಮ್ಮಗಳಿಗೇನು ಗೊತ್ತಾಗುತ್ತದೆ?

"ಹೇಗೂ, ನಿಮ್ಮ ಕಾಕಾ ಪ್ರಾಣದೇವಪುರದಲ್ಲೇ ಈ ಸರ್ತಿ ಇದ್ದಾನೆ, ನಾನೂ ಅಲ್ಲೇ ಇರ್ತೀನಿ, ನೀವೂ ಎಲ್ಲಾರೂ ರಥೋತ್ಸವಕ್ಕೆ ಬನ್ರಿ ಹಾಂ...." ಅಂದರು ಕಾವೇರಕ್ಕ.

ಸಂಬಂಧವನ್ನೇ ಕಡಿದುಕೊಳ್ಳುತ್ತಾ ಹೊರಟಿರುವ ಹನುಮೇಶ ಇವರೆಲ್ಲರನ್ನೂ ಕರೆದರೆತಾನೇ ಬರುವದು? ಇದೇನೂ ಅರಿಯದ ವಿಷಯವಲ್ಲ ಅವರಿಗೆ.

*******

ಹನುಮೇಶನ ಮನೆಗೆ ಬಂದಿಳಿದ ಕಾವೇರಕ್ಕನಿಗೆ ಈ ಸಾರಿ ಸಮಯ ಕಳೆಯುವ ಪ್ರಶ್ನೆಯೇ ಇರಲಿಲ್ಲ. ಹೇಗೂ ದೇವಸ್ಥಾನವಿತ್ತಲ್ಲ ಮನೆಯ ಹತ್ತಿರ. ಸೊಸೆ ಶಾಲಿನಿ ಕೂಡ ಅಕ್ಕಿಬೇಳೆ ಅಳೆದು ಕೊಡುವ ದುಷ್ಟ ಸ್ವಭಾವದ ಹೆಂಗಸು. ಏನೋ ಒಂದು ಬೇಯಿಸಿಟ್ಟರೆ ಆಯಿತು. ಸೇರಿದರೆ ಕಾವೇರಕ್ಕ ತಿನ್ನುತ್ತಿದ್ದರು, ಇಲ್ಲದಿದ್ದರೆ ಸದಾ ತಲೆ ಕೆರೆಯುತ್ತ ದೇವಸ್ಥಾನದ ಕಟ್ಟೆಯ ಮೇಲೆ ಕುಳಿತಿರುತ್ತಿದ್ದ 'ಹುಚ್ಚಿ'ತಿರುಕವ್ವನಿಗೆ ಕೊಟ್ಟು ಬಿಡುತ್ತಿದ್ದರು. ಹುಚ್ಚಿ ತಿರುಕುವ್ವನೆಂದರೆ ಅದೇನೋ ಅನುಕಂಪ ಇವರಿಗೆ. ಸೊಸೆ, ಮಗ ಏನೇ ಕೊಟ್ಟರೂ ಅದರಲ್ಲಿ ಸ್ವಲ್ಪ ಮುಚ್ಚಿಟ್ಟು, ಅವರಿಗೆ ಗೊತ್ತಾಗದಂತೆ ತಿರುಕವ್ವನಿಗೆ ಕೊಡುತ್ತಿದ್ದರು. ಅವಳ ಮಕ್ಕಳೇ ತಿರುಕವ್ವ ಈ ಸ್ಥಿತಿಗೆ ಬರಲು, ಹುಚ್ಚಿಯಾಗಲು ಕಾರಣವೆಂದು ಆಮೇಲೆ ತಿಳಿಯಿತು.

*******

ಪ್ರತಿ ವರ್ಷದಂತೆ ಈ ವರ್ಷವೂ ಹನುಮ

ಜಯಂತಿಯಂದು ಪ್ರಾಣದೇವರ ರಥೋತ್ಸವ ಬಂದಿತು. ದೇವಸ್ಥಾನಕ್ಕೆ ಸುಣ್ಣ ಬಣ್ಣ ಬಳಿಯತೊಡಗಿದರು. ಈ ದವನದ ಹುಣ್ಣಿಮೆ, ರಥೋತ್ಸವ ಬಂತೆಂದರೆ ಊರಲ್ಲೆಲ್ಲಾ ಸಡಗರ, ಅಂದು ಎಲ್ಲೆಲ್ಲಿಂದಲೋ ಜನ ಬಂದು ಎಲ್ಲರ ಮನೆಯೂ ತುಂಬಿರುತ್ತಿತ್ತು. ಈ ವರ್ಷ ಕಾವೇರಕ್ಕ ಯಾವುದಕ್ಕೂ ಅಲೆಯಬೇಕಾಗಿರಲಿಲ್ಲ. ಮುಖ್ಯವಾಗಿ ಮಗನೇ ಈ ಊರಲ್ಲಿದ್ದಾನೆ. ಅಲ್ಲದೆ ಮನೆ ಕೂಡ ಗುಡಿಯ ಹತ್ತಿರವೇ ಇದೆ.

ರಥೋತ್ಸವದ ದಿನ ಮಾಡುವ ಅನ್ನಸಂತರ್ಪಣೆಗೆಂದು ಹನುಮೇಶ ಸಾಕಷ್ಟು ಹಣ ಹಾಗೂ ಆಹಾರ ಪದಾರ್ಥಗಳನ್ನು ದಾನವಾಗಿ ನೀಡಿದ್ದ. ಆ ದಿನ ತನ್ನ ತಂದೆಯ ಹೆಸರಿನಲ್ಲಿ, ಪ್ರಾಣದೇವರಿಗೆ ಸರ್ವಸೇವೆ ಮಾಡಿಸಲು ಸಾವಿರದೊಂದು ರೂಪಾಯಿ ನೀಡಿದ್ದ.ಈ ವಿಷಯಕ್ಕೆ ಶಾಲಿನಿ ಎಂದೂ ಅಡ್ಡ ಬರುತ್ತಿರಲಿಲ್ಲ. ತನಗೆ ಕಷ್ಟವಾಗಬಾರದು, ಗಂಡನ ಮನೆಯವರು ಬರಬಾರದು ಅಷ್ಟೇ ಅವಳಿಗೆ.

ರಥೋತ್ಸವಕ್ಕೆ ಬರಿ ಎಂಟು ದಿನ ಉಳಿದಿತ್ತು. ಮಗ-ಸೊಸೆ, ಏನೋ ಲೆಕ್ಕ ಹಾಕುತ್ತಿರುವದು ಗಮನಕ್ಕೆ ಬಂದಿತ್ತು ಕಾವೇರಕ್ಕನಿಗೆ. ಅವತ್ತು ರಾತ್ರಿ ಮಗ-ಸೊಸೆ ಊಟಕ್ಕೆ ಕುಳಿತಿದ್ದರು. ಮಗು ರೂಮಲ್ಲಿ ಮಲಗಿ ನಿದ್ದೆ ಹೋಗಿತ್ತು. ಸೊಪ್ಪನ್ನು ಆರಿಸುತ್ತಾ ಕಾವೇರಕ್ಕ ಅಲ್ಲಿಯೇ ಕುಳಿತಿದ್ದರು. ಹನುಮೇಶ ಪೀಠಿಕೆ ಹಾಕಿದ.

"ಅಮ್ಮ ನೀ ಇಲ್ಲಿಗೆ ಬಂದು ನಾಲ್ಕು ತಿಂಗಳಾಗ್ತಾ ಬಂತು."

ಕಾವೇರಕ್ಕ ಬಗ್ಗಿಸಿದ್ದ ತಲೆಯನ್ನು ಮೇಲೆತ್ತಿ ಹನುಮೇಶನನ್ನು ನೋಡುತ್ತಾ,

"ಹೌದು ಹನುಮೇಶಾ, ನಿನಗಿಂತ ಚನ್ನಾಗಿ ನೆನಪಿಟ್ಕೊಂಡಿರ್ತೀನಿ ನಾನು..." ಅಂದರು.

"ಹಾಗಾದ್ರೆ, ಬರುವ ಗುರುವಾರ ನೀನು ನಿನ್ನ ಸಣ್ಣ ಮಗನ ಮನೆಗೆ ಹೊರಡಬೇಕು ಅಲ್ವಾ?"

"ಹೌದು ಕಣಪ್ಪಾ, ಗುರುವಾರ ಒಂದು ಗಳಿಗೆಯೂ ಹೆಚ್ಚಿಗೆ ನಿಲ್ಲದ ಹಾಗೆ ಹೊರಡತಿದ್ದೆ... ಆದ್ರೆ, ಶನಿವಾರನೇ ರಥೋತ್ಸವ ಅಲ್ವೇನೋ... ಅದನ್ನ ಮುಗಿಸಿಕೊಂಡು, ರವಿವಾರ ನೀ, ಇರೂ ಅಂದ್ರೂ ಇರೋದಿಲ್ಲ....".

"ಅಮ್ಮ ಈಗ ಅದೇ ಬಂದಿರೋದು, ಹಿಂದೊಮ್ಮೆ ಶಾಲಿನೀಗೆ ಆರಾಂ ಇಲ್ಲಂದ್ರೂ ಎರಡು ದಿನ ಹೆಚ್ಚಿಗೆ ಇಟ್ಟುಕೊಳ್ಳದಹಾಗೆ ಕಳಿಸಿದ್ನಲ್ಲಾ ಆ ನಿನ್ನ ಹಿರಿಯ ಮಗಾ, ಅವನಿಂದಲೇ ನಾವೂ ಪಾಠ ಕಲೀತಾ ಇದ್ದೇವೆ... ಆ ವಿಷಯ ತೆಗೆದ್ರೆ ಶಾಲಿನಿಯ ಪಿತ್ತ ನೆತ್ತಿಗೇರುತ್ತೆ."

"ಹಾಗಲ್ಲ ಹನುಮೇಶಾ, ನೀನು ತಪ್ಪು ತಿಳ್ಕೊಂಡಿದ್ದೀಯಾ, ಶಾಲಿನೀಗೆ ತೀರಾ ಹುಷಾರು ಇಲ್ಲಾಂತ ತಿಳೀತು, ಇಂಥಾ ಸಮಯದಲ್ಲೂ ನಾನು ಮಾಡ್ದೇ ಇದ್ರೆ ನಾನಿರೋದು ಯಾತಕ್ಕೆ? ಅಂದುಕೊಂಡು, ನಾನೇ ಜುಲುಮೆಯಿಂದ ಬಂದೆನೇ ಹೊರ್ತು ಪ್ರಾಣೇಶ ಬೇಡಾ ಅಂತ್ಲೆ ಅಂದ. ಆತ ನಂಗೆ ಒಂದ್ಹಿಡಿ ಅನ್ನಾ ಹಾಕ್ಲಿಕ್ಕೆ ಎಂದೂ ಬೇಸರಪಟ್ಟುಕೊಂಡೋನಲ್ಲಾ... ಈ ವಿಷಯದಾಗ ಶಾರದಾಂದೂ ದೊಡ್ಡ ಗುಣ ಅನ್ನಬೇಕು..."

"ಹೌದೌದು, ಆತ ಎಷ್ಟೇ ಅಂದ್ರೂ ನೀನು ಬೇಡಿ ಬಯಸಿ ಹುಟ್ಟಿದ ಮುದ್ದಿನ ಮಗ, ಅವನನ್ಯಾಕೆ ನೀನು ಬಿಟ್ಟುಕೊಡ್ತೀಯಾ? ಇನ್ನು ಮುಖ್ಯಪ್ರಾಣ ಕಡೀ ಕಠ್ಠಾಣ, ನಡುವೆ ಹುಟ್ಟಿದ ನಾನ್ಯಾವ ಲೆಕ್ಕ ನಿಂಗೆ? ಬರೀ ಅವ್ರಿಬ್ರ ಬಗ್ಗೆ ಚಿಂತೆ ಮಾಡ್ತೀ ಹೊರ್ತು, ನಂಗೇನು ಮಾಡಿದೀಯಾ?"

"ಹಾಗೆಲ್ಲಾ ಅನ್ನಬೇಡವೋ ಮಗಾ, ನೀನು ಭಾಳ ಅಶಕ್ತ ಇದ್ದಿ ಸಣ್ಣವನಿದ್ದಾಗ.ಅವ್ರಿಬ್ಬರನ್ನೂ ಬಿಟ್ಟು ನಿನ್ನ ಮೇಲೇ ನಮ್ಮ ಕರುಳು ಸುರಿಸ್ತಾ ಇದ್ವಿ, ಅವ್ರಿಬ್ರೂ ನನ್ನ ಒಂದೊಂದು ಕಣ್ಣಾದ್ರೆ, ನೀನು ನನ್ನ ಜೀವಾನೋ ಹನುಮೇಶಾ," ಎನ್ನುವಾಗ ಕಾವೇರಕ್ಕನ ಗಂಟಲು ತುಂಬಿ ಬಂದಿತ್ತು.

ಇದುವರೆಗೂ ಸುಮ್ಮನೆ ಕುಳಿತಿದ್ದ ಶಾಲಿನಿ,

"ಪಾಲಿಸಿ ನೋಡ್ರಿ ಮುದಕಿಯದು..."ಎನ್ನುತ್ತಾ ಗಟಗಟ ನೀರು ಕುಡಿದಳು.

ನನ್ನ ಕರುಳಿನ ಕುಡಿಗಳ ಬಗ್ಗೆ ನಾನೇ ಪಾಲಿಸಿ ಮಾಡುತ್ತೇನೆಯೇ? ಕಾವೇರಕ್ಕನಿಗೆ ಅಲ್ಲಿ ಕೂಡುವದೂ ಬೇಡವಾಗಿ ಹೊರಗೆ ಕಟ್ಟೆಯ ಮೇಲೆ ಕೂಡಲು ಎದ್ದು ಹೊರಟರು.

"ಅಮ್ಮಾ ಎದ್ದು ಹೋಗಬೇಡಾ ಇರು, ಇನ್ನೊಂದಿಷ್ಟು ಮಾತಾಡೋದು ಇದೆ..."

ಮತ್ತೆ ಕುಳಿತರು ಕಾವೇರಕ್ಕ.

ಹನುಮೇಶ ಪಟಕ್ಕನೇ ಹೇಳಿದ:

"ಅಮ್ಮಾ ಬರೋ ಗುರುವಾರ ನೀನು ಇಲ್ಲಿಂದ ಹೊರಡು, ಬೇಕಾದ್ರೆ ಮತ್ತೆ ಶನಿವಾರ ವಾಪಸ್ ಬಾ, ಬೇಕಾದಷ್ಟು ಜನ ಬರ್ತಿರ್ತಾರೆ..."

"ಏನು? ಏನಂದಿ, ಗುರುವಾರ ಹೋಗಿ ಶನಿವಾರ ಬರಬೇಕಾ? ಬೆಂಗಳೂರು ಎಷ್ಟು ದೂರ ಇದೆ ಅಂತ ನಿಂಗೆ ಗೊತ್ತೇ ಇದೆ. ದಿನ ಬಿಟ್ಟು ದಿನ ಪ್ರವಾಸ ಮಾಡೋ ವಯಸ್ಸೇನೋ ನಂದು? ಒಂದಿನಾ ನಾ ಇಲ್ಲಿ ಹೆಚ್ಚಿಗೀ ಇದ್ರೆ ಏನಾಯ್ತೀಗ? ಮುಂದಿನ ಸಾರಿ ಬರೋವಾಗ, ಒಂದಿನ ಕಡಿಮೆ ಇಟ್ಕೊಂಡು ಬರ್ತೀನಿ ಆಯ್ತಾ?

ಅವರಿಗೂ ತಡೆದುಕೊಳ್ಳಲಾಗಿರಲಿಲ್ಲ. ಕಾವೇರಕ್ಕ ಒಂದೇ ಉಸುರಿನಲ್ಲಿ ಇಷ್ಟೆಲ್ಲಾ ಅಂದುಬಿಟ್ಟರು.

"ಇಂಥಾ ಮಾತಿಗೆ ಬರವೇನೂ ಇಲ್ಲಾ... ಪಾಲು ಮಾಡೋವಾಗ ಸುಮ್ನೇ ಕೂತುಕೊಂಡಿದ್ದೆಯಲ್ಲಾ? ಒಟ್ಟಿನ ಮೇಲೆ ಅವಧಿ ಅಂದ್ರೆ ಅವಧಿ, ಅವಧಿ ಮುಗಿದ ಮೇಲೆ ಒಂದೂ ಕ್ಷಣಾನೂ ಇರಬಾರ್ದು, ಆದಕ್ಕೂತಾರೆ ಮನುಷ್ಯತ್ವ ಅಂತಾ... ಅದೇ ನನ್ನಮ್ಮ ಆಗಿದ್ರೆ ಒಂದು ಕ್ಷಣಾ ಕೂಡ ಮಕ್ಕಳ ಹಂಗಿನಲ್ಲಿ ಇರ್ತಿರಲಿಲ್ಲ.... ನಿನ್ನಂಥೋರು ಇರೋದು ದಂಡಕ್ಕೆ...." ಎಂದು ಶಾಲಿನಿ ಇನ್ನೂ ಏನೇನೋ ಟೀಕಿಸಿ ಮಾತನಾಡಿದಳು.

ತಾನಾಗಿಯೇ ಇವರ ಜೊತೆಗೆ ಇರಲು ಇಷ್ಟಪಟ್ಟು ಬಂದಿದ್ದೇನೆಯೇ? ಕಾವೇರಕ್ಕನಿಗೆ ಅಳು ಬಂದುಬಿಟ್ಟಿತು.

"ಶಾಲಿನೀ, ಮನಸ್ಸು ನೋಯಿಸಬೇಡ್ವೇ ತಾಯಿ... ಹಪ್ಪಳ ಸಂಡಿಗಿ ಮಾಡಿಯಾದ್ರೂ ಹಳ್ಳೀಲೀ ನಾನು ಒಬ್ಬೇ ಇರಬಹುದಿತ್ತು. ಮಕ್ಳು ಮರೀ ಇದ್ರೂ, ಅನಾಥರಂತೆ ಒಬ್ಬೇ ಇರೋದು ಬೇಡಾಂತ ನಿಮ್ಮ ಜೊತೆಗೆ ಬಂದೆ. ಜನಾ ನಂಗೇನೂ ಅಂತಿರ್ಲಿಲ್ಲಾ, ...ಯಿನ್ನ ನೋಡಿಕೊಳ್ಳಲಾರ್ದ ಮಕ್ಳು ಅಂತಾ ನನ್ನ ಮಕ್ಕಳಿಗೆ ಅಂತಿದ್ರು, ಮಕ್ಕಳಿಗೆ ಏನೂ ಅನ್ನಿಸಬಾರದಂತಾ ಬಾಯಿಮುಚ್ಚಿಕೊಂಡು ಮಕ್ಳು ಹೇಳಿದ್ದಾಗೆ ಕೇಳಿದೆ. ಏನೋ ಹನುಮೇಶಾ, ಅವಳು ಇಷ್ಟೆಲ್ಲಾ ಅಂದ್ರೂ ಬಾಯಿ ಮುಚ್ಚಿಕೊಂಡು ಕುಳಿತಿದ್ದೀಯಲ್ಲೋ...."

"ಅಮ್ಮಾ ನಾ ಯಾರಿಗೆ ಹೇಳ್ಬೇಕೋ ತಿಳೀತಾ ಇಲ್ಲಾ. ಹೊರಗಿನ ವ್ಯವಹಾರ ರಾಶಿ ಇದೆ ನಂಗೆ, ಮನೀಗೆ ಬಂದ ತಕ್ಷಣ ನಿಂದೊಂದು ತರ್ಲೆ. ಮನೆ ವ್ಯವಹಾರವೆಲ್ಲಾ, ಶಾಲಿನೀದು. ಅವಳು ಹೇಗೆ ಹೇಳ್ತಾಳೋ ಹಾಗೆ ಕೇಳಿಬಿಡು ಆಯ್ತು..." ಎಂದ ಹನುಮೇಶ ಹೊರ ನಡೆದು ಕಟ್ಟೆಯ ಮೇಲೆ ಹೋಗಿ ಕುಳಿತುಬಿಟ್ಟ.

ಮಗನ ಮಾತು ಕೇಳಿ, ಕಾವೇರಕ್ಕ ಕಣ್ಣು ಬಾಯಿಬಿಟ್ಟರು.

ಮತ್ತೆರಡು ದಿನ ಕಳೆದರೂ ಮಗ-ಸೊಸೆ ತಮ್ಮ ನಿರ್ಧಾರ ಬದಲಿಸಲಿಲ್ಲ.

"ಹನುಮೇಶಾ, ಎಂಥೆಂಥವರೆಲ್ಲಾ, ಎಷ್ಟೆಷ್ಟು ಕಷ್ಟಪಟ್ಟು ಇಲ್ಲಿಗೆ ಬರ್ತಾರೆ... ಅಂಥಾದ್ರಲ್ಲಿ, ನಾನು ಇದೇ ಊರಾಗ ಇದ್ದುಕೊಂಡು ಹೋಗದಿದ್ರೆ ಏನು ಚಂದಾನೋ? ಮಗಾ, ನೀನಾದ್ರೂ ವಿಚಾರ ಮಾಡೋ, ಒಂದು ವೇಳೆ ನೀವು ಕುತ್ತಿಗೆ ಹಿಡಿದು ದಬ್ಬಿದ್ರೆ, ದೇವಸ್ಥಾನದ ಕಟ್ಟೆಯ ಮೇಲಾದ್ರೂ ಮಲಗ್ತೀನಿ, ರಥೋತ್ಸವ ಬಿಟ್ಟು ಹೋಗೋದಿಲ್ಲಾ..." ಎಂದು ಕಾವೇರಕ್ಕ ಶಾಂತವಾಗಿ, ಅಷ್ಟೇ ದೃಢ ನಿರ್ಧಾರದಿಂದ ಹೇಳಿದರು.

"ನಾನು ಹೇಳ್ಲಿಲ್ವಾ, ಈ ಮುದುಕಿ ಸಾಮಾನ್ಯದ್ದಲ್ಲಾಂತ... ಒಟ್ಟಿನ ಮೇಲೆ, ನಮ್ಮ ಮಾನ-ಮರ್ಯಾದಿ ಬೀದೀ ಪಾಲು ಮಾಡೇ ಈ ಊರು ಬಿಡಬೇಕಂತ ಮಾಡಿದ್ದಾಳೆ ಇವ್ರು. ನಾನೇ ತವರು ಮನೆಗೆ ಹೋಗಿಬಿಡ್ತೀನಿ. ಈ ಮುದಿಕಿನ್ನೇ ಇಟ್ಕೊಂಡು ಇರ್ರಿ..." ಎಂದು ಶಾಲಿನಿ ಅಳುತ್ತ

ರೂಮಿಗೆ ಹೊರಟುಹೋದಳು.

"ಅಮ್ಮಾ ನೀನಾದ್ರೂ ಸಣ್ಣಮಕ್ಳ ತರ ಯಾಕ ಹಟಾ ಮಾಡ್ತೀಯಾ? ವಯಸ್ಸಾದ ಮೇಲೆ, ಒಂದೊಂದೇ ಬಿಡ್ತಾ ಬರಬೇಕಾಗುತ್ತೆ, ಮೊದಲಿನ ಹಾಗೆ ಇರ್‍ತೇವಂದ್ರೆ ಹೆಂಗಾಗತ್ತೆ?..."

"ಹನುಮೇಶಾ, ನಾನು ಮೊದಲಿನ ಯಾವ ಆಶೇನೂ ಉಳಿಸಿಕೊಂಡಿಲ್ಲಾ, ಅಪ್ಪಿತಪ್ಪಿನೂ ಮೊದಲಿನ ಹಾಗೆ ಇರೋದಕ್ಕೆ ಬಯಸೋದಿಲ್ಲಾ, ಆದ್ರೆ ಈ ರಥೋತ್ಸವ ಒಂದು ಮಾತ್ರ ನನ್ನ ಉಸಿರಿರೋವರ್‍ಗೂ ತಪ್ಪಿಸೋದಿಲ್ಲಾ," ಎಂದರು ಕಾವೇರಕ್ಕ. ಹನುಮೇಶ ಹೆಂಡತಿಯನ್ನು ರಮಿಸಲು ರೂಮಿಗೆ ನಡೆದ.

ಮರುದಿನ ಸಂಜೆ ಎಂದಿನಂತೆ ದೇವಸ್ಥಾನಕ್ಕೆ ಹೋದ ಕಾವೇರಕ್ಕ ತಮ್ಮ ಮನೆಯಲ್ಲಿ ನಡೆದ ವಿಷಯವನ್ನು, ತಮ್ಮ ಓರಿಗೆಯವರೊಂದಿಗೆ ಹೇಳಿ ಕೊಂಡು ಮನಸ್ಸು ತೃಪ್ತಿಯಾಗುವವರೆಗೂ ಅತ್ತರು.

ಅಲ್ಲಿ ಕುಳಿತ ನಾಲ್ಕಾರು ಹೆಂಗಸರದೂ ತಲೆ ಗೊಂದರಂತೆ ಮಾತು ಹಾಗೂ ಅನೇಕ ಸಲಹೆ ಗಳು.

ಮರುದಿನ ಹನುಮೇಶನ ಪಿತ್ತ ನೆತ್ತಿಗೇರಿತ್ತು.

"ಊರಲ್ಲೆಲ್ಲಾ ಡಂಗುರ ಸಾರಿ, ನಮ್ಮ ಮಾನ-ಮರ್‍ಯಾದಿ ಹರಾಜ, ಹಾಕಬೇಕಂತ ಮಾಡಿ ದ್ದೀಯಾ? ಹೋಗು, ಯಾರು ನಿನ್ನ ಇಟ್ಕೋ ತಾರೋ ಅವ್ರ ಮನೇಲೇ ಇರು."

"ಅಂಥಾದ್ದೇನಾಯ್ತೋ ಮಗಾ....?"

"ಏನಾಗ್ಲಿಲ್ಲಾ ಕೇಳು? ನಿಮ್ಮಂಥೋರಿಗೆ ದೇವ ಸ್ಥಾನದ ಕಟ್ಟೆಯೊಂದು ದಂಡ ಪಾಪ ಅಂದೇ, ಮೈಮೇಲೆ ಬರ್‍ತಾ ಇದೆ, ಅದೇನೇ ಆಗ್ಲಿ, ಹೇಗೂ ನಮ್ಮನ್ನು ಊರಲ್ಲೆಲ್ಲಾ ಕೆಟ್ಟು ಮಾಡಿದ್ದೀಯಲ್ಲಾ, ಇನ್ಯಾತರ ಹೆದ್ರಿಕೆ? ಗುರುವಾರ ಬೆಳಿಗ್ಗೆ ಅನ್ನೋ ದ್ರಾಗ ಜಾಗ ಖಾಲೀ ಮಾಡು ತಿಳೀತಾ? ಯಾರು ಏನು ಮಾಡ್ತಾರೋ ನಾನೇ ನೋಡ್ತೀನಿ... ಇದಕ್ಕೆ ಇನ್ನೇನಾದ್ರೂ ಎರಡನೇ ಮಾತನಾಡಿದೀ ಅಂದ್ರೆ ಹುಷಾರ್..."ಎಂದಳು ಶಾಲಿನಿ. ಈಕೆ ಅತ್ತೆಗೆ ಅತ್ತೆ ಅನ್ನುವದಾಗಲಿ ಬಹುವಚನವನ್ನಾಗಲಿ ಬಿಟ್ಟೇ ಎಷ್ಟೋ ದಿನಗಳಾಗಿದ್ದವು.

"ನೋಡು ಕಣಪ್ಪಾ, ನೀವಿಬ್ರೂ ನನಗೆ ಬೇಕಾದ್ದು ಅನ್ನಿ.. ಚಿಂತೆಯಿಲ್ಲಾ, ಕರ್ತವ್ಯ ಅಂತ ನಾದ್ರೂ ಎರಡು ದಿನ ಹೆಚ್ಚಿಗೆ ಇರೋದಕ್ಕೆ ಅವಕಾಶ ಮಾಡಿಕೊಡ್ರಿ. ನಾ, ನಿಮ್ಮನ್ನು ಇನ್ನೇನೂ ಕೇಳೋದಿಲ್ಲ. ಹಿಂದೆ, ನಿಮ್ಮಪ್ಪ ನಾನು, ನಿಮ್ಮನ್ನು ಉರಿ ಬಿಸಿಲಾಗ, ತಲೀಮ್ಯಾಲೆ, ಬಗಲಾಗ ಹೊತ್ತು ಕೊಂಡು ಬರ್‍ತಿದ್ದು ಮರ್‍ತು ಬಿಟ್ಟಿಯೇನೋ?."

"ಮತ್ತೆ ಇಲ್ದೇ ಇರೋ ವಿಷಯ ಮಾತಾಡ ಬೇಡಾ ಅಂತಾ ಹೇಳ್ಲಿಲ್ಲೇನೇ ನಿಂಗೆ? ಕರ್ತವ್ಯ ಅಂತಾನೇ ನಾಲ್ಕು ತಿಂಗಳು ಅನ್ನಾ ಹಾಕ್ತಾ ಇದ್ದೀವಲ್ಲಾ, ಇಷ್ಟು ಯಾವ ಮಗಾ ಸೊಸೆ ಮಾಡ್ತಾರೆ? ಜಗತ್ತಿನಲ್ಲಿ ಯಾವ ತಾಯಿ-ತಂದೆ ಮಾಡ್ದೇ ಇದ್ದದ್ದನ್ನು ನೀವು ಮಾಡಿದ್ದೀರಾ?"ಎಂದ ಶಾಲಿನಿಯದು ವ್ಯಂಗ್ಯ ಮಾತುಗಳೇ ಆಗಿದ್ದವು.

ಕಾವೇರಕ್ಕ ಮಗನನ್ನು ಬೇಡಿಕೊಂಡು ಅತ್ತರು. ಇನ್ನು ಮಗ-ಸೊಸೆಯರ ಕಾಲು ಹಿಡಿಯುವ ದೊಂದೇ ಬಾಕಿ ಉಳಿದಿತ್ತು.

"ಇಷ್ಟೆಲ್ಲಾ ಧಾಂದಲೆ ಮಾಡೋ ಬದಲು, ಗುರುವಾರ ಹೋಗಿ ಶನಿವಾರ ಬಾ, ಈಗೇನೂ ಕಷ್ಟ ಇಲ್ಲ. ಬೆಂಗಳೂರಿನಿಂದ ಬೇಕಾದಷ್ಟು ಬಸ್ಸು ಗಳೂ ಇವೆ, ಶುಕ್ರವಾರ ರಾತ್ರ ಕೂತ್ರೆ ಶನಿವಾರ ಬೆಳಿಗ್ಗೆ ಅನ್ನೋದ್ರಲ್ಲೇ ದೇವಸ್ಥಾನದಲ್ಲಿ ಇರ್‍ತೀಯಾ, ನಾನು ಅಂತಾ ಇಷ್ಟೆಲ್ಲಾ ಹೇಳ್ತಾ ಇದ್ದೇನೆ, ನಿನ್ನ ಇನ್ನಿಬ್ರು ಮಕ್ಳು, ಒಂದು ತಾಸು ಸಹಿತ ಹೆಚ್ಚಿಗೆ ಇಟ್ಕೊಳ್ತಾ ಇರಲಿಲ್ಲ ನಿನ್ನ, ಇನ್ನೇನಾದ್ರೂ ಉಲ್ಟಾ ಪಲ್ಟಾ ಮಾತನಾಡಿದೀ ಅಂದ್ರೆ, ನಿನ್ನ ಹೆಡಮುರಿಗೆ ಕಟ್ಟಿ, ಬಸ್ಸಿನಾಗ ಒಗೆದು ಬರ್‍ಬೇಕಾಗ್ತದೆ..."ಎನ್ನುತ್ತಾ ಹನುಮೇಶ, ತಾಯಿ ಕುಳಿತಿದ್ದ ಕಡೆಗೆ ಬಸ್‌ಚಾರ್ಜಿ ಗಾಗುವಷ್ಟು ರೂಪಾಯಿ ನೋಟನ್ನು ಬೀಸಿ ಒಗೆದ.

******

ಮಂಗಳವಾರ ಸಂಜೆ ದೇವಸ್ಥಾನಕ್ಕೆ ಹೋದ ಕಾವೇರಕ್ಕ ಯಾರೊಂದಿಗೂ ಮನೆಯ ವಿಷಯ ಎತ್ತಲಿಲ್ಲ.

ಆದರೆ ಬುಧವಾರ ಸಾಯಂಕಾಲ ದೇವಸ್ಥಾನಕ್ಕೆ

ಹೋದಾಗ ಮಾತ್ರ ಮಂಗಳಾರತಿ ಕೊಡುತ್ತಿದ್ದ ಪೂಜಾರರು ಕೇಳಿದರು:

"ಏನ್ರೀ ಕಾವೇರಕ್ಕ, ನಾಳೆ ಊರಿಗೆ ಹೊರಟಿದ್ದೀರಂತೆ..."

'ಹೌದ್ರಿ' ಎನ್ನುತ್ತ ಕಾವೇರಕ್ಕ ಮಂಗಳಾರತಿ ತೆಗೆದುಕೊಂಡು ಕಣ್ಣಿಗೆ ಒತ್ತಿಕೊಂಡರು.

"ಅಲ್ಲಾರಿ ಕಾವೇರಕ್ಕ, ಊರಾಗ ಎಂಥಾ ದೊಡ್ಡ ಉತ್ಸವ, ಎಲ್ಲೆಲ್ಲಿಂದಾನೋ ಜನಾ ಬರ್‍ತಾರೆ, ಹಿಂದೆಲ್ಲಾ ನೀವು ಎಷ್ಟು ಕಷ್ಟಪಟ್ಟು ಬರ್‍ತಾ ಇದ್ರಿ, ಅಂಥಾದ್ರಲ್ಲಿ ಇದೇ ಊರಾಗ ಇದ್ದುಕೊಂಡು, ಹೋಗೋದಂದ್ರೆ ಏನ್ರಿ? ನಿಮ್ಗೆ ರಥೋತ್ಸವ ಬಿಟ್ಟು ಹೋಗೋದಕ್ಕಾದ್ರೂ ಮನಸ್ಸು ಹೇಗೆ ಬಂತೂರಿ?...." ಎನ್ನುತ್ತಾ ಪೂಜಾರಿಗಳು ಪ್ರಸಾದ ಕೊಡತೊಡಗಿದರು.

"ಹಾಗಲ್ಲಾ ಪೂಜಾರರ,..."ಎಂದ ಕಾವೇರಕ್ಕನ ಮಾತನ್ನು ಅರ್ಧದಲ್ಲೆ ತಡೆದು, "ನಂಗೆಲ್ಲಾ ಗೊತ್ತಿದೆ ಬಿಡ್ರಿ, ಎಲ್ಲರ ಮನೆ ದೋಸೇನೂ ತೂತೇ.... ಒಟ್ಟಿನ ಮೇಲೆ ನೀವು ರಥೋತ್ಸವ ಬಿಟ್ಟು ಎಲ್ಲಿಗೂ ಹೋಗಬೇಡಿ..."

ಎಲ್ಲರ ಮನೆಯ ದೋಸೆ ತೂತು, ಆದರೆ ತಮ್ಮ ಮನೆಯ ಹಂಚೇ ತೂತಾಗಿ ಬಿಟ್ಟಿದೆ ಅಂದುಕೊಂಡರು ಕಾವೇರಕ್ಕ.

"ಆ ಹನುಮಪ್ಪ ಹೇಗೆ ಮಾಡಿಸ್ತಾನೋ ಹಾಗೇ ಆಗ್ಲಿ..." ಎಂದು ಕೈಮುಗಿಯುತ್ತಾ, ಹಾಗೇ ಒಂದಿಬ್ಬರನ್ನು ಮಾತನಾಡಿಸುತ್ತಾ ದೇವಸ್ಥಾನದ ಮೆಟ್ಟಿಲಿಗೆ ಬಂದರು.

ಮೆಟ್ಟಿಲಿನ ಮೇಲೆ ಎಂದಿನಂತೆ ಹುಚ್ಚಿ ತಿರುಕವ್ವ ಕುಳಿತಿದ್ದಳು. ಒಂದು ಕ್ಷಣ ನಿಂತ ಕಾವೇರಕ್ಕ ತಿರುಕವ್ವನ ಹತ್ತಿರ ಬರುತ್ತ ಪಿಸುಗುಟ್ಟಿದರು, "ತಿರುಕವ್ವಾ, ನಾಳೆ ನಾನು ಊರಿಗೆ ಹೋಗ್ತೀನಿ... ಇಕಾ, ಈ ಅವಲಕ್ಕಿ ಬೆಲ್ಲಾ ತಿನ್ನು... ನಾ ಕೊಟ್ಟಿದ್ದೀನಿ ಅಂತಾ ಯಾರಿಗೂ ಹೇಳಬೇಡ," ಎಂದು ಉಡಿಗಚ್ಚೆಯಿಂದ, ಕಾಗದದಲ್ಲಿ ಕಟ್ಟಿದ ಅವಲಕ್ಕಿಯ ಪೊಟ್ಟಣವನ್ನು ತಿರುಕವ್ವನ ಬೊಗಸೆಯಲ್ಲಿ ಒಗೆದಳು.

ತಿರುಕವ್ವ ಭರ್‍ರನೆ ಹಾಳೆಯನ್ನು ಹರಿದು ಅವಲಕ್ಕಿ-ಬೆಲ್ಲ ನೋಡುತ್ತ ಹಲ್ಲು ಕಿಸಿದಳು.

"ನಾಳೆ, ನಾನೂ ಊರಿಗೆ ಹೋಗ್ತೇನಿ... ನಿಂಗs ಹಾಗೇ ಆಗ್ಬೇಕು... ನಾ ನಗಬೇಕ... ನಾ ನಗಬೇಕು..." ಎಂದು ಪರಪರನೆ ತಲೆ ಕೆರೆಯುತ್ತ ಅವಲಕ್ಕಿ ಬೆಲ್ಲವನ್ನು ಗಬಗಬನೇ ತಿನ್ನತೊಡಗಿದಳು.



"ಹುಚ್ಚು, ಹುಚ್ಚು ಮುಂಡೇದು, ಒಮ್ಮೊಮ್ಮೆ ಎಷ್ಟು ಚನ್ನಾಗಿ ಮಾತಾಡತ್ತೆ... ಎಷ್ಟು ಚಂದ ಅರ್ಥಾನೂ ಮಾಡಿಕೊಳ್ತದ, ಒಮ್ಮೊಮ್ಮೆ ಹುಚ್ಚಾಚ್ಚಾರ ಮಾತಾಡ್ತದೆ..."ಎಂದು ಕಾವೇರಕ್ಕ ತಮ್ಮಷ್ಟಕ್ಕೆ ತಾವೇ ವಟಗುಡುತ್ತಾ ಮೆಟ್ಟಿಲಿಳಿದರು.

ಎದುರಿಗೆ ಸಿದ್ಧವಾಗಿ ನಿಂತಿತ್ತು ಅಲಂಕರಿಸಲ್ಪಟ್ಟ ರಥ. ರಥದ ಹತ್ತಿರ ಬಂದ ಕಾವೇರಕ್ಕ, ರಥವನ್ನೇ ನೋಡುತ್ತ ಒಂದು ಕ್ಷಣ ಮೈಮರೆತವರು, ಮತ್ತೆ ವಾಸ್ತವಕ್ಕೆ ಬಂದರು. ರಥದ ಎರಡೂ ಗಾಲಿಗಳನ್ನು ಮುಟ್ಟಿ ಕಣ್ಣಿಗೊತ್ತಿಕೊಂಡರು. ಇನ್ನೂ ಉತ್ಸವ ಮೂರ್ತಿಯನ್ನು ಕೂಡಿಸದಿರದ ರಥಕ್ಕೇ ಒಂದೆರಡು ಪ್ರದಕ್ಷಿಣೆ ಹಾಕಿದರು. ಮನಸ್ಸಿನಲ್ಲೇ ಪ್ರಾಣ ದೇವರ ತೊಟ್ಟಿಲು ತೂಗಿ ನಮಸ್ಕಾರ ಮಾಡಿದರು.

ಅತ್ತ-ಇತ್ತ ನೋಡಿ ಯಾರಿಗೂ ಕಾಣದಂತೆ ಕಣ್ಣೊರೆಸಿಕೊಂಡರು.

ಮನೆಗೆ ಬಂದಾಗ ರಾತ್ರಿ ಒಂಭತ್ತರ ಮೇಲಾಗಿತ್ತು. ತಾವು ದಿನಾಲು ಮಲಗುವ ಸ್ಟೋರ್‌ರೂಮಿನಲ್ಲೇ ಇವತ್ತೂ ಹಾಸಿಗೆ ಹಾಸಿಕೊಂಡು ಉರುಳಿದರು. ಶಾಲಿನಿ ಜೋರಾಗಿ ಗಂಡನಿಗೆ ಹೇಳುತ್ತಿದ್ದುದು ಕೇಳಿಸಿತು:

"ಯಾಕೋ ಈ ಮುದುಕಿ, ಹೊರಡೋ ಲಕ್ಷಣ ಕಾಣ್ತಾ ಇಲ್ಲ, ಯಾರ್‍ಯಾರು ಮತ್ತೇನೇನು ತಲೆಯಲ್ಲಿ ತುಂಬಿದ್ರೋ? ಗಾಡಿ ಬಿಡ್ತಾಳೋ ಅಥ್ವಾ ಇಲ್ವೊ ಕೇಳಿ..."

ಹೆಂಡತಿಯ ಆದೇಶದಂತೆ ಹನುಮೇಶ ಬಂದು ಸ್ಟೋರ್‌ರೂಮಿನ ಬಾಗಿಲ ಚೌಕಟ್ಟನ್ನು ಎರಡೂ ಕೈಗಳಿಂದ ಹಿಡಿದು ನಿಂತು ಕೇಳಿದ,

"ನಾಳೆಗೇ ಹೊರಡೋ ತಯಾರಿ ಆಯ್ತಿಲ್ಲೋ ನಿಂದು...?"

ಕಾವೇರಕ್ಕ ಮಗನನ್ನೇ ದಿಟ್ಟಿಸಿ ನೋಡಿದರು. ಮಕ್ಕಳ ಬಗ್ಗೆ ಬಹಳ ಅಭಿಮಾನ ಹೆಮ್ಮೆ ಇಟ್ಟಿದ್ದರವರು. ಬಳಬಳ ಕಣ್ಣೀರು ಹರಿಯತೊಡಗಿತು.

"ಹೋಗ್ಲೇ ಬೇಕೇನೋ ಮಗಾ, ಮೊದ್ಲು ನಾನಂದ್ರೆ ಪ್ರಾಣ ಕೊಡ್ತೇನಿ ಅಂತಿದ್ದವನು ಈಗ ಯಾಕಿಷ್ಟು ಕಲ್ಲು ಹೃದಯಿ ಆಗೀಯಾ? ನನ್ನ ಕರುಳಿನ ಕೂಗಿಗೂ ನಿನ್ನ ಮನಸ್ಸು ಹೃದಯ ಕರಗ್ತಾ ಇಲ್ವೇನೋ? ಅಲ್ಲದೇ ಇವತ್ತು ಬೆಳಿಗ್ಗೆಯಿಂದ ಎದೇಲಿ ಯಾಕೋ ಸಣ್ಣಗೆ ನೋಯಿಸ್ತಾ ಇದೆ ಕಣೋ..."

ತಾಯಿಯ ಕಣ್ಣೀರಿಗೆ ಗಂಡ ಮತ್ತಲ್ಲಿ ಕರಗಿಬಿಡುವನೋ ಎಂದು ಥಟ್ಟನೇ ಮಧ್ಯೆ ಶಾಲಿನಿ ಪ್ರವೇಶಿಸಿದಳು.

"ನಾಟ್ಕ ಸಾಕು, ಹೋಗಬೇಕೇನು ಅಂತಾ ಇನ್ನೂ ಕೇಳ್ತಾ ಇದ್ದೀಯಲ್ಲಾ, ನಾಚ್ಕೆ ಮಾನ, ಮರ್‍ಯಾದಿ ಹಟ, ಛಲ ಇದ್ದೋರಾಗಿದ್ರೆ, ಚಿಕ್ಕವರಾದ ನಮ್ಮಿಂದ ಹೇಳಿಸಿಕೊಳ್ತಾ ಇರ್‍ಲಿಲ್ಲ... ನಾಳೆ ಇಷ್ಟೊತ್ತಿನಲ್ಲಿ ನೀನು ಬೆಂಗಳೂರಿನಲ್ಲಿ ಇರ್ತೀಯಾ, ನೆನಪಿಟ್ಕೋ..."

"ಯಾಕಮ್ಮಾ ಶಾಲಿನಿ, ಎಲ್ಲಾದ್ರಲ್ಲೂ ತಾಯಿ-ಮಗನ ಮಧ್ಯೆ ಬಂದು ಅಡ್ಡಗಾಲು ಹಾಕ್ತೀ?"

"ಹೌದೌದು! ನಾನೇ ಎಲ್ರಿಗೂ ಅಡ್ಡಗಾಲಾಗಿದ್ದೀನಿ... ನಾಳೆ ನೀನು ಹೋಗ್ಲಿಲ್ಲಾಂದ್ರೆ ನಾನೇ ಹೋಗಿಬಿಡ್ತೀನಿ..." ಎಂದ ಶಾಲಿನಿ ಅಪಮಾನದಿಂದ ಭುಸುಗುಡುತ್ತ ಮಲಗುವ ರೂಮಿಗೆ ಹೋಗಿಬಿಟ್ಟಳು.

ಮನಸ್ಸೂ ಸ್ವಲ್ಪ ಕರಗಿರಬಹುದೇನೋ? ಹನುಮೇಶ ಈಗ ಅಲ್ಲಿಯೇ ಹೊಸ್ತಿಲ ಮೇಲೆ ಕುಳಿತು ಹೇಳಿದ:

"ಅಮ್ಮಾ ಏನು ಮಾಡೋದು, ನೀನು ಹಡೆದವಳು, ಅವ್ಳು ಕಟ್ಟಿಕೊಂಡವಳು, ನಾನು ಯಾರ ಮಾತು ಕೇಳಲಿ ನೀನೇ ಹೇಳು? ಶಾಲಿನಿ ಸ್ವಭಾವ ನಿಂಗೆ ಗೊತ್ತೇ ಇದೆ. ನಾಳೆ ಅವ್ಳು ಕೆರೆ-ಭಾವಿ ಪಾಲಾದ್ರೆ ನಾನೇನು ಮಾಡ್ಲಿ ಹೇಳು? ಇಂಥಾ ವ್ಯಾಳೇದಾಗ ನಿನ್ನ ಕಳಿಸ್ಲಿಕ್ಕೆ ನಂಗೆ ಬುದ್ಧಿ ಇಲ್ಲಾ ಅನ್ಕೊಂಡ್ರಾ? ಶಾಲಿನೀನೂ ಒಳ್ಳೆಯವಳೇ, ನಿನ್ನ ಇನ್ನಿಬ್ರು ಸೊಸೆಂದ್ರೇ ಇಷ್ಟೆಲ್ಲಾಕ್ಕೂ ಕಾರಣ. ಮುಖ್ಯ ಪ್ರಾಣನ ಹೆಂಡತಿಯಂತೂ, ಮಾತೆತ್ತಿದ್ರೆ ಪಾಲು, ಅವಧಿ ಅಂತಾ ಒಂದು ಕ್ಷಣನಾದ್ರೂ ಹೆಚ್ಚಿಗೆ ಇಟ್ಕೋತಾಳಾ? ಇಂಥಾವೆಲ್ಲಾ ಅವಳನ್ನು ರೊಚ್ಚಿಗೆ ಎಬ್ಬಿಸಿ ಬಿಟ್ಟಿವೆ. ನಿನಗೆ ಹೋಗು ಅಂದ ಹಾಗೆ ಶಾಲಿನಿಗೆ ಹೋಗು ಅನ್ಲಿಕ್ಕೆ ಆಗ್ತದಾ? ನೀನೇ ಹೇಳು...?"

ರಾತ್ರಿಯಿಡಿ ನಿದ್ದೆ ಬರಲಿಲ್ಲ. "ಕಾವೇರಿ, ಮಕ್ಳು ನಮ್ಮವರಾಗಿರೋದು, ಹೆಂಡ್ತಿ ಬರೋವರೆಗೂ ಮಾತ್ರ," ಎಂಬ ಗಂಡನ ಮಾತೇ ನೆನಪಾಯಿತವರಿಗೆ.

ಎಂಥಾ ಅನುಭವಸ್ಥರು, ಎಂಥಾ ಪುಣ್ಯಜೀವಿ ತನ್ನ ಗಂಡ! ತಾನು ಮಾತ್ರ ಬೆಳ್ಳಗಿದ್ದದ್ದೆಲ್ಲಾ ಹಾಲೆಂದು ನಂಬಿದವಳು. ಜಗತ್ತಿನಲ್ಲಿ ಇಂಥ ಮಕ್ಕಳೂ ಇರುತ್ತಾರೆಯೇ ಅಥವಾ ತಮಗಷ್ಟೇ ಇಂತಹ ಮಕ್ಕಳು ಹುಟ್ಟಿದ್ದಾರೆಯೇ? ಮೊದಲೆಲ್ಲಾ ಯಾರಾದರೂ ತಮ್ಮ ಸುಖ-ದುಃಖ ಹೇಳಿಕೊಂಡು ಅತ್ತರೆ, ಅವರಿಗೆ ತಾವೇ ಸಾಂತ್ವನ ಹೇಳಿ ಏನಾ

ದರೂ ಸಲಹೆ ಕೊಡುತ್ತಿದ್ದರು. ಆದರೆ ತಮಗೇ ಇಂಥ ಪ್ರಸಂಗ ಬರಬಹುದೆಂಬ ಕಲ್ಪನೆ ಕೂಡ ಬಂದಿರಲಿಲ್ಲ ಆಗ.

ಯಾಕೋ ಎದೆಯಲ್ಲಿ ಒಂದು ತರಹದ ಸಣ್ಣ ನೋವು. ಮೆಲ್ಲನೇ ಎದೆ ನೀವಿಕೊಂಡರು. ಮಗನ ಹಂಗೇ ಬೇಡವೆಂದು, ತಾವು ಹಾಸಿಕೊಂಡಿದ್ದ ಹಾಸಿಗೆ, ತಲೆದಿಂಬನ್ನು ಒಂದು ಕಡೆ ಎತ್ತಿಟ್ಟು, ತಮ್ಮದೇ ಒಂದು ಸೀರೆಯನ್ನು ಮಡಿಚಿ ತಲೆದಿಂಬಾಗಿ ಇಟ್ಟುಕೊಂಡು ನೆಲದ ಮೇಲೆ ಉರುಳಿದರು. "ಪ್ರಾಣದೇವಾ, ಆಂಜನೇಯಸ್ವಾಮಿ, ಎಲ್ಲವನ್ನೂ ನಿನಗೇ ಬಿಟ್ಟಿದ್ದೇನೆಪ್ಪಾ, ನನ್ನ ಭಾರ ನಿನಗೇ ಸೇರಿದ್ದು, ಅದೇನು ಮಾಡ್ತಿಯೋ ಮಾಡು..." ಎಂದು ಮಲಗಿದ್ದಲ್ಲಿಂದಲೇ ಕೈಮುಗಿದು, ಸೀರೆಯ ಸೆರಗನ್ನು ಮೋರೆಗೆ ಮುಸುಕು ಹಾಕಿಕೊಂಡರು.

*******

ಬೆಳಗಿನ ಐದು ಗಂಟೆಗೆ ಅಲಾರಾಂ ಒಂದೇ ಸಮನೇ ಕಿರುಚಿಕೊಳ್ಳುತ್ತಿತ್ತು. ಶಾಲಿನಿ ಥಟ್ಟನೆದ್ದು ಅಲಾರಾಂ ಬಂದು ಮಾಡುತ್ತ ಗಂಡನನ್ನು ಎಬ್ಬಿಸಿದಳು. "ರೀ, ರೀ, ಏಳ್ರಿ, ಆಗ್ಲೇ ಐದು ಗಂಟೆ. ಆ ಮುದುಕಿನ್ನು ಎಬ್ಬಿಸಿ. ಪ್ರತಿದಿನಾ ನಾಲ್ಕು ಗಂಟೆ ಅನ್ನೋದ್ರಲ್ಲಿ ಎದ್ದುಬಿಟ್ಟು, ವಡವಡಾಂತ ಸುಪ್ರಭಾತ ಸುರು ಮಾಡಿಬಿಡೋದು, ಇವತ್ತು ಊರಿಗೆ ಹೋಗಬೇಕಲ್ವಾ, ಅದಕ್ಕೇ ಕಳ್ಳ ನಿದ್ದೆ ಮಾಡ್ತಾ ಇದೆ. ಅದೇನೂ ಕಡಿಮೆ ಇಲ್ವಾ, ಆಸಾಮಿ.. ರೀ, ಏಳ್ರಿ ಬೇಗ.. ಆ ಮುದಿಕಿನ್ನ ಎಬ್ಬಿಸಿ..."

ಹನುಮೇಶ ಎದ್ದು ಗಡಿಬಿಡಿಯಿಂದ ಲುಂಗಿ ಸುತ್ತಿಕೊಳ್ಳುತ್ತ ತಾಯಿ ಮಲಗಿದ ಸ್ಟೋರ್ ರೂಮಿನ ಮುಂದೆ ಹಾದು ಬಚ್ಚಲಿಗೆ ಹೊರಟವ ಸ್ಟೋರ್ ರೂಮಲ್ಲಿ ಇಣುಕಿ,

"ಬೇಗ ಎದ್ದು ತಯಾರಾಗು, ನಾನು ಕೈಕಾಲು ಮುಖ ತೊಳ್ಕೊಂಡು ಬರೋಷ್ಟರಲ್ಲಿ, ನಿನ್ನ ಗಂಟು ಮೂಟೆ ಕಟ್ಟಿರು. ತಿಳೀತಾ?" ಎಂದು ಜೋರಾಗಿ ಕೂಗುತ್ತ, ಬಚ್ಚಲಿಗೆ ಹೋಗಿ ಮುಖತೊಳೆದು ಬಂದರೂ ತಾಯಿಯು ಏಳದ ಸದ್ದಿಗೆ, ಸ್ಟೋರ್‌ರೂಮಿನ ಒಳಗೇ ಬಂದು, ತಾಯಿಯನ್ನು ಅಲುಗಾಡಿಸಿದ.

ಆದರೆ ಕಾವೇರಕ್ಕನ ಪ್ರಾಣಪಕ್ಷಿ ಹಾರಿಹೋಗಿ ಯಾವಾಗಲೋ ಪ್ರಾಣದೇವರ ಪಾದವನ್ನು ಸೇರಿತ್ತು. ಮಗನ ಮಾತನ್ನು ಅಕ್ಷರಶಃ ಪಾಲಿಸಿದ ಕಾವೇರಕ್ಕ ಈ ಜಗತ್ತಿನಿಂದಲೇ ಗಂಟುಮೂಟೆ ಕಟ್ಟಿಬಿಟ್ಟಿದ್ದರು.

"ಶಾಲೂ, ಶಾಲೂ, ಇಲ್ಲಿ ಬಾ ಇಲ್ಲಿ, ಬೇಗ ಬಾ ಇಲ್ಲಿ..."

ಗಂಡನ ಧ್ವನಿ ಎಂದಿನಂತಿರದ ಕಾರಣ, ಶಾಲಿನೀ ಗಡಬಡಿಸಿ ಬಂದಳು. ಬೆಳಗು ಹರಿಯುತ್ತಿದ್ದಂತೆಯೇ ಎಲ್ಲೆಡೆ ಸುದ್ದಿ ಹರಡಿ ಜನ ಜಮಾಯಿಸತೊಡಗಿದರು. ಹುಚ್ಚಿ ತಿರುಕವ್ವನೂ ಬಂದು ಕುಳಿತಳು.

ಶಾಲಿನಿ ಮಗುವಿಗೆ ಹಾಲು-ಬ್ರೆಡ್ ಕೊಟ್ಟು ಒಂದು ಕಡೆ ಕೂಡಿಸಿ ತಾನು ಅವನ ಹತ್ತಿರವೇ ಸುಮ್ಮನೇ ಕುಳಿತಿದ್ದಳು.

ಹನುಮೇಶ ಒಂದೇ ಸವನೇ ಅಳುತ್ತ ಕಣ್ಣು-ಮೂಗು ಒರೆಸಿಕೊಳ್ಳುತ್ತಿದ್ದ.

"ನಮ್ಮ ಅಮ್ಮ ಇಷ್ಟು ದಿಢೀರಾಗಿ ಹೋಗಿಬಿಡ್ತಾಳೆ ಅಂದುಕೊಂಡಿರಲಿಲ್ಲ. ಯಾತ್ರೆ, ತೀರ್ಥ ಅಂತಾ ಏನೆಲ್ಲಾ ಆಶೆಗಳನ್ನು ಇಟ್ಟುಕೊಂಡಿದ್ಲು ಯಾಕೋ ಒಂದಕ್ಕೂ ಸಮಯ ಕೂಡಿ ಬಂದಿರಲಿಲ್ಲ. ಬಹಳ ಪುಣ್ಯದ ಜೀವಿ ನನ್ತಾಯಿ- ಒಂದು ಗುಟುಕು ನೀರು ಕೂಡ ನಮ್ಮಿಂದ ತೆಗೆದುಕೊಳ್ದೇ ಹೋಗಿಬಿಟ್ಟು... ಹೀಗಾಗಿ, ಆಕೆಯ ದಿನಕರ್ಮಾನಾದ್ರೂ "ಮಾತೃಗಯಾ" ಅಥ್ವಾ "ಕಾಶಿ"ಯಲ್ಲಿ ಮಾಡೋಣಾಂತ ಈಗ್ಲೇ ನಿರ್ಧರಿಸಿಬಿಟ್ಟಿದ್ದೀನಿ... ಅಷ್ಟೂ ಮಾಡ್ದೇ ಇದ್ರೆ, ನಾವು ಮಕ್ಕಳಾಗಿ ಹುಟ್ಟಿ ಏನ್ ಪ್ರಯೋಜನ? ಈ ರೀತಿಯಾದ್ರೂ ಅವ್ವ ಆತ್ಮಕ್ಕೆ ಶಾಂತಿ ಸಿಗ್ಲಿ..."

ಅಲ್ಲಿ ಸೇರಿದ್ದ ಜನ ಒಬ್ಬರ ಮುಖ ಒಬ್ಬರು ನೋಡುತ್ತ ಹನುಮೇಶನನ್ನು ಸಮಾಧಾನಪಡಿಸುತ್ತಿದ್ದರೆ, ತಲೆ ಕೆರೆಯುತ್ತ ಅಲ್ಲಿಯೇ ಕುಳಿತಿದ್ದ ಹುಚ್ಚಿ ತಿರುಕವ್ವ ಮಾತ್ರ, "ಖೊಳ್, ಖೊಳ್"ಎಂದು ಜೋರಾಗಿ ನಗತೊಡಗಿದ್ದಳು. ●

# ಮುಹಮ್ಮದ ರಫಿ



## ಮಧುರ ಗಾನದ ಮೋಡಿಗಾರ

"ಮೈನೆ ಶಾಯದ್ ತುಮ್ಹೆ ಹೈ ಪಹಲೆ ಭೀ ಕಹೀಂ ದೇಖಾ ಹೈ"

"ಅಭಿ ನಾ ಜಾವೋ ಛೋಡಕರ್"

"ಐಸೆ ತೋ ನಾ ದೇಖೋ....."

ಮುಂತಾದ ಮಧುರ ಹಾಡುಗಳನ್ನು ಕೇಳಿ ಇಂತಹ ಮಧುರ ಗೀತೆಗಳನ್ನು ಎದೆತುಂಬಿ ಹಾಡಿದ ಮಹಮದ್ ರಫಿಯವರ ಪ್ರತಿಭೆಯನ್ನು ಮೆಚ್ಚಿ ತಲೆದೂಗದವರಿಲ್ಲ. ಮಹಮದ್ ರಫಿ ಹಾಡುವುದಕ್ಕಾಗಿಯೇ ಹುಟ್ಟಿದ್ದಾನೇನೋ ಎಂದು ತಿಳಿಯುವಷ್ಟರ ಮಟ್ಟಿಗೆ ಪ್ರತಿಯೊಂದು ಹಾಡಿಗೂ ಜೀವ ತುಂಬಿ ಹಾಡುತ್ತಾ ತನ್ನ ಧ್ವನಿಯ ಏರಿಳಿತಗಳಿಂದಲೇ ಅಸಂಖ್ಯಾತ ಕೇಳುಗರ ಮನಸೂರೆಗೊಂಡಿದ್ದ ಮಹಾನ್ ಗಾಯಕನೀತ. 'ಮಧುರ ಮಧುರವೀ ಮಂಜುಳ ಗಾನ' ಎಂಬ ಹಾಡಿನಂತೆ ತನ್ನ ಮಾಧುರ್ಯ ತುಂಬಿದ ಧ್ವನಿಯಿಂದಲೇ ಸಾವಿರಾರು ಮಂದಿ ಕೇಳುಗರ ಹೃದಯ ಸಾಮ್ರಾಜ್ಯದಲ್ಲಿ ಅಡಗಿ ಕುಳಿತಿದ್ದಾನವನು.

ಇಂತಹ ಹಿನ್ನೆಲೆಯ ರಫಿ ೧೬ ವರ್ಷಗಳ ಹಿಂದೆ ತಟಕ್ಕನೆ ಸಾವಿನ ಅರಮನೆಗೆ ತೇಲಿಹೋದಾಗ ಸಹಸ್ರಾವಧಿ ಅಭಿಮಾನಿಗಳು ಮೌನವಾಗಿ ಕಂಬನಿ ಮಿಡಿದಿದ್ದರು. ಮಾನವನಾಗಿ ರಫಿ ನಿಧನರಾಗಿದ್ದರೂ ಗಾಯಕನಾಗಿ ಆತ ಅಮರನಾಗಿದ್ದಾನೆ ಎಂದುಕೊಂಡು ರಫಿಯ ಹಾಡುಗಳನ್ನೇ ಕಂಗಳ ತುಂಬಾ ತುಂಬಿಕೊಂಡಿದ್ದಾಗ ಈತ ಹಾಡಿದ್ದ ಗಜಲ್ ಗೀತೆಯೋ, ಶಾಯರಿಯೋ ಅಥವಾ ಕಿಲಾಡಿ ಹಾಡುಗಳೋ ಅಲೆಅಲೆಯಾಗಿ ತೇಲಿ ಬರುತ್ತಿದ್ದಂತೆಯೇ ರಫಿಯ ಮುಗ್ಧ ಮುಗುಳ್ನಗೆ, ತುಂಟತನ, ಸಂತಸ ಎಲ್ಲವೂ ನೆನಪಾಗಿಬಿಡುತ್ತಿತ್ತು.

ಇಂದಿನ ಕರ್ಕಶ ಸಿನಿಮಾ ಸಂಗೀತದ ಆಕರ್ಷಣೆ ಕ್ಷಣಿಕ. ಆದರೆ ೫೦-೬೦ರ ದಶಕದಲ್ಲಿ ಹಾಗಿರಲಿಲ್ಲ. ಹಿಂದಿ ಚಿತ್ರರಂಗದ ತುಂಬಾ ಅಂದಿನ ದಿನಗಳಲ್ಲಿ ಮಹಾನ್ ಗಾಯಕರುಗಳ ಹಿಂಡೇ ಇತ್ತು. ವಿಷಾದ ಗೀತೆಗಳನ್ನು ಎದೆಯಾಳದ ದನಿಯಾಗಿಸಿ ಹಾಡುತ್ತಾ "ದುಃಖಿತರ ಕೊರಳು" ಎಂದೇ ಕರೆಸಿಕೊಂಡ ಮುಖೇಶ್, ಯಾವುದೇ ಗೀತೆಯನ್ನೂ ತಟಕ್ಕನೆ ಹಾಡಿಬಿಡುತ್ತಿದ್ದ ಮನ್ನಾಡೇ, ಹೇಮಂತ್‌ಕುಮಾರ್, ತಲತ್ ಮಹಮೂದ್‌ರು ಮಾತ್ರವಲ್ಲದೆ ನಾಯಕ-ಗಾಯಕ ಎರಡೂ ಆಗಿದ್ದ ಕಿಶೋರ್‌ಕುಮಾರ್ ಮುಂತಾದವರಿದ್ದರು. ಆದರೆ ಒಂದು ವಿಷಯದಲ್ಲಿ ಮಾತ್ರ ರಫಿ ಇವರೆಲ್ಲರನ್ನೂ ಹಿಂದೆ ಹಾಕಿಬಿಟ್ಟಿದ್ದರು. ಹೇಗೆಂದರೆ ಮುಖೇಶ್‌ರಂತಹ ಉತ್ತಮ ಗಾಯಕ ಕೂಡ ಒಂದು ಹಾಡಿನಿಂದ ಮತ್ತೊಂದು ಹಾಡು ಹೇಳಲು ಅಗತ್ಯವಿರುವ ಮೂಡ್, ರಿಹರ್ಸಲ್‌ಗೆಂದೇ ಹೆಚ್ಚಿನ ಸಮಯ ತೆಗೆದುಕೊಂಡರೆ, "ಹಂ ಬೇಖುದಿ ಮೆ ಉನ್‌ಕೋ ಪುಕಾರೇ ಚಲೇ ಗಯೇ...." ಎಂಬ ಗಜಲ್ ಹಾಡಿದ ಮರುನಿಮಿಷವೇ, "ಲಾಲ್ ಲಾಲ್ ಗಾಲ್ ಜಾನ್ ಪೇ ಲಾಗೂ" ಎಂಬ

❀ ಮೂಲ - ಪ್ರದ್ಯೌತ್ ಲಾಲ್
ಕನ್ನಡಕ್ಕೆ - ಎ.ಆರ್. ಮಣಿಕಾಂತ್

✷ (ಕೃಪೆ - ಏಶಿಯನ್ ಏಜ್)

ಹಾಡಿಗೂ ರಫಿ ಜೀವ ತುಂಬುತ್ತಿದ್ದರು. ಪ್ರತಿ ಹಾಡು ಹೇಳುವಾಗಲೂ ತನ್ನ ದನಿಯ ಏರಿಳಿತ ದಿಂದಲೇ ಹಾಡಿಗೊಂದು ನ್ಯಾಯ ಒದಗಿಸುತ್ತಿದ್ದ ರಫಿ ಒಂದರ್ಥದಲ್ಲಿ 'ಗಾಯಕ' ಮಾತ್ರವಾಗಿರದೆ ನಾಯಕನೇ ಆಗಿಬಿಡುತ್ತಿದ್ದರು.

ನಾಯಕರಿಗೆ, ಸಂಗೀತ ನಿರ್ದೇಶಕರಿಗೆ ಅವರದೇ ಆದ ಆಯ್ಕೆಗಳಿರುತ್ತವೆ. ಶಂಕರ್ ಜೈಕಿಷನ್‌ರಿಗೆ ಮುಖೇಶನ ಕಂಠಸಿರಿಯ ಬಗೆಗೆ ಅಪಾರ ಒಲವಿದ್ದರೆ ಸಂಗೀತ ನಿರ್ದೇಶನದ ರಾಜ ಎಂದೇ ಕರೆಸಿಕೊಂಡ ಸಲೀಲ್ ಚೌಧುರಿಗೆ ಮಹಮದ್ ರಫಿಯೆಂದರೆ ಅಚ್ಚುಮೆಚ್ಚು. ಗಾಯಕರುಗಳಾದ ಮುಖೇಶ್ ಮತ್ತು ತಲತ್ ಇಬ್ಬರೂ ಖ್ಯಾತನಾಮರೇ. ಆದರೆ ರಫಿ ಖ್ಯಾತರಲ್ಲಿ ಪ್ರಖ್ಯಾತನಾದವ ಎಂದು ಸಲೀಲ್ ಹೆಮ್ಮೆಯಿಂದ ಹೇಳುತ್ತಿದ್ದರು. ಸಲೀಲ್ ಚೌಧುರಿಯ ಈ ವರಸೆಯಿಂದ ರೇಗಿದ

ಎದೆತುಂಬ ಹಾಡಿದ ಗೀತೆಯೊಂದು ಕೇಳುಗನ ಮೆಚ್ಚುಗೆಗೆ ಪಾತ್ರವಾದರೆ ಅದನ್ನು ಹಾಡಿದ ಗಾಯಕನಿಗೆ ಖುಷಿ, ಸಂಭ್ರಮ. ಒಂದು ವೇಳೆ ಒಬ್ಬ ಗಾಯಕನ ಹಾಡನ್ನು ಮತ್ತೊಬ್ಬ ಗಾಯಕ ಪ್ರಶಂಸಿದರಂತೂ ಬದುಕು ಧನ್ಯ ಎಂಬಂತಹ ಕೃತಜ್ಞತಾ ಭಾವ. ಒಮ್ಮೆ ಖ್ಯಾತಗಾಯಕ ಪ್ರಶಸ್ತಿ ಪಡೆದ ಹಿಂದಿ ಚಿತ್ರರಂಗದ ರೋಮ್ಯಾಂಟಿಕ್ ಹಾಡುಗಾರನೆಂದೇ ಖ್ಯಾತಿ ಪಡೆದ ಕಿಶೋರ್‌ಕುಮಾರ್ ಫಿಲ್ಮ್‌ಫೇರ್ ಪತ್ರಿಕೆಯ ಸಂಪಾದಕರಿಗೆ ಪತ್ರವೊಂದನ್ನು ಕಳಿಸಿದ್ದ. ಆ ಪತ್ರದಲ್ಲಿ ಕಿಶೋರ್ ಕುಮಾರ್ ಸಂಪಾದಕರಿಗೆ ಬರೆದಿದ್ದಾದರೂ ಏನು ಗೊತ್ತೆ?

"ನಾನು ಮಹಮದ್ ರಫಿಯ ಅಭಿಮಾನಿ."

ಗಾಯಕನಿಗೆ ಇದಕ್ಕಿಂತಲೂ ಹೆಚ್ಚಿನ ಸಾರ್ಥಕತೆ ಬೇಕೆ?





ವರೊಬ್ಬರು, "ಸಲಿಲ್‌ದಾ, ನಿಮ್ಮ ಸಂಗೀತ ನಿರ್ದೇಶನವಿರುವ ಚಿತ್ರಗಳಲ್ಲೆಲ್ಲಾ ಮಹಮದ್ ರಫಿಗೇ ಅವಕಾಶ ಕೊಡ್ತೀರಲ್ಲ ಯಾಕೆ?"ಅಂದಿದ್ದಕ್ಕೆ ಮಾರಾಯರೇ, "ಕೊಯಿ ಸೋನೆ ಕಿ ದಿಲ್‌ವಾಲಾ, ಕೋಯಿ ಚಾಂದ್ ಕಿ ದಿಲ್‌ವಾಲಾ" ದಂತಹ ಹಾಡಿಗೆ ರಫಿಗಿಂತ ಉತ್ತಮ ಗಾಯಕ ನನಗೆಲ್ಲೂ ಕಾಣಿಸಲೇ ಇಲ್ಲ" ಎಂದು ನುಡಿದ ಸಲಿಲ್ ಟೀಕಾಕಾರರ ಬಾಯಿ ಮುಚ್ಚಿಸಿದರಂತೆ.

ಹಿಂದಿ ಚಿತ್ರರಂಗದಲ್ಲಿ ಖ್ಯಾತ ಹಿನ್ನೆಲೆಗಾಯಕರುಗಳ ಪಟ್ಟಿಮಾಡುತ್ತಾ ಹೋದರೆ ಕೆ.ಎಲ್. ಸೈಗಲ್‌ರಿಂದ ಆರಂಭಗೊಂಡ ಗಾಯಕರ ಪಟ್ಟಿಯಲ್ಲಿ ರಫಿ ತಟ್ಟನೆ ನೆನಪಾಗಿಬಿಡುತ್ತಾರೆ. ಕಾಲವಾದ ಹದಿನಾರು ವರ್ಷಗಳ ನಂತರವೂ ತಮ್ಮ ಹೃದಯಸ್ಪರ್ಶಿ ಹಾಡುಗಳಿಂದ, ವಿಶಿಷ್ಟ ವ್ಯಕ್ತಿತ್ವದಿಂದ ರಫಿ ಕೇಳುಗರ ಮನದಲ್ಲಿ ಸ್ಮರಣೀಯರಾಗಿ ಉಳಿದಿದ್ದಾರೆ.

ಮೊದಲೇ ಹೇಳಿದಂತೆ ಇಂದಿನ ಕರ್ಕಶ ಸಿನಿಮಾ ಸಂಗೀತದ ಆಕರ್ಷಣೆ ಕ್ಷಣಿಕ. ಆದರೆ ರಫಿಯ ಗಾಯನದ ಗುಂಗು ಶಾಶ್ವತ. ಸಂಗೀತ ಪ್ರೇಮಿಗಳಿರುವವರೆಗೂ ಅದು ಇರುವಂಥಾದ್ದೆ. ●

ಪೆದ್ದು ಮುಂಡೇದೇ....ಮಣ್ಣಿನ ಮಗನ ವೇಷ
ದಲ್ಲಿ ಹೋಗದೇ ಈ ವೇಷದಲ್ಲಿ ಸಂದರ್ಶನಕ್ಕೆ ಹೋಗೋದಾ?

# ಪ್ರಪಂಚದ ಅತಿದೊಡ್ಡ ಮೀನು ಮಾರುಕಟ್ಟೆ

## ಸ್ಕೀಜಿ: ಮತ್ಸ್ಯಾಹಾರಿಗಳ ಸ್ವರ್ಗ

✷ *ಮೋಹನ ಗ. ಹೆಗಡೆ, ಬಂದಗದ್ದೆ*

**ಕೇ**ವಲ ಸಮುದ್ರಾಹಾರಗಳ ಈ ಮಾರುಕಟ್ಟೆ ೫೬ ಎಕರೆಗಳಷ್ಟು ವಿಸ್ತಾರವಾದದ್ದು. ಇಲ್ಲಿ ೬೦,೦೦೦ ಜನ ದುಡಿಯುತ್ತಾರೆ. ೩೨ ಸಾವಿರ ವಿವಿಧ ವಾಹನಗಳು ಬೆಳಗಿನ ೩ ಗಂಟೆಗೆ ತಮ್ಮ ಕಾರ್ಯವನ್ನಾರಂಭಿಸುತ್ತವೆ.

ಪ್ರಪಂಚದಲ್ಲಿ ಸಸ್ಯಾಹಾರಿಗಳಿಗಿಂತಲೂ ಮಾಂಸಾಹಾರಿಗಳ ಸಂಖ್ಯೆ ಹೆಚ್ಚು. ಇದಕ್ಕಿಂತಲೂ ಮತ್ಸ್ಯಾಹಾರಿಗಳ ಸಂಖ್ಯೆ ಅಧಿಕ ಎಂದು ಒಂದು ಸಮೀಕ್ಷೆ ತಿಳಿಸುತ್ತದೆ. ಇದಕ್ಕೆ ತಕ್ಕಂತೆ ಜಗತ್ತಿನಲ್ಲಿ ಮೂರು ಅತಿದೊಡ್ಡ ಮೀನು ಮಾರುಕಟ್ಟೆಗಳನ್ನು ಹೆಸರಿಸಬಹುದು. ಒಂದನೆಯದು ಐವತ್ತಾರು ಎಕರೆಗಳಷ್ಟು ವಿಸ್ತಾರವಾದ ಜಪಾನಿನಲ್ಲಿಯ ಸ್ಕೀಜಿ **(Tsukiji)** ಮಾರುಕಟ್ಟೆ, ಎರಡನೆಯದು ಪ್ಯಾರಿಸ್ಸಿನ ''ರಂಗೇಸ್ ಮಾರುಕಟ್ಟೆ''ಯಾದರೆ ಮೂರನೆಯದು ನ್ಯೂಯಾರ್ಕನ ಫಲ್‌ಟನ್ ಮಾರುಕಟ್ಟೆ.

''ಟೋಕಿಯೋ ಸೆಂಟ್ರಲ್ ಹೋಲ್‌ಸೇಲ್ ಮಾರ್ಕೆಟ್''ಎಂದು ಕರೆಯಲಾಗುವ ಈ ಸ್ಕೀಜೀ ಮಾರುಕಟ್ಟೆಯನ್ನು ಜಪಾನೀಯರು ಟೋಕಿಯೋ ನೋ ಷೈಕೋಕೋ ಎಂದು ಕರೆಯುತ್ತಾರೆ. ಇದು ಪ್ಯಾರಿಸ್ಸಿನ ರಂಗೇಸ್ ಮಾರುಕಟ್ಟೆಗಿಂತ ಏಳು ಪಟ್ಟು ಹಾಗೂ ನ್ಯೂಯಾರ್ಕಿನ ಫಲ್‌ಟನ್‌ಗಿಂತ ಹನ್ನೊಂದು ಪಟ್ಟು ವಿಸ್ತಾರವಾಗಿದೆ.

ಇಲ್ಲಿ ಮೂರು ಗಂಟೆಗೇ ಬೆಳಗಾಗುತ್ತದೆ. ಟೋಕಿಯೋ ಉಪ ನಗರದ ಮೂಲೆಯಲ್ಲಿ ಇರುವ ಈ ಮಾರುಕಟ್ಟೆಗೆ ಸಾಕಷ್ಟು ಪ್ರಮಾಣದಲ್ಲಿ ಮಾಂಸ, ಅಣಬೆ, ಸಿಗಡಿ ಉಪ್ಪಿನಕಾಯಿ, ಬಟಾಟೆ, ಪೀಚ್ ಮುಂತಾದವು ಬರುತ್ತಿದ್ದರೂ ಮುಖ್ಯವಾಗಿ ಮಾರಾಟವಾಗುವುದು ಮತ್ಸ್ಯಾಹಾರಗಳೇ. ಇದರ ಸುತ್ತಮುತ್ತಲಿನ ಸುಮಾರು ೬೦ ಸಾವಿರಜನ ೩೨ ಸಾವಿರ ವಾಹನಗಳಲ್ಲಿ ಬೆಳಗಿನ ೨ ಗಂಟೆಗೆ ಮನೆಯಿಂದ ಹೊರಡುತ್ತಾರೆ. ಮಾರುಕಟ್ಟೆಗೆ ಬರುವ ವೇಳೆಗೆ ಅಸಂಖ್ಯ ಟ್ರಕ್‌ಗಳು ವಿವಿಧ ಕಡೆಗಳಿಂದ ಮಾರಾಟದ ವಸ್ತುಗಳನ್ನು ತರಲಾರಂಭಿಸುತ್ತಾ ಇವರನ್ನು ಕಾಯುತ್ತಿರುತ್ತವೆ.

ಈ ಮಾರುಕಟ್ಟೆಯಲ್ಲಿ ಆರು ಖಂಡಗಳ ಸುಮಾರು ೬೦ ದೇಶಗಳಿಂದ ವಿವಿಧ ಜಾತಿಯ ಸುಮಾರು ೪೦೦ ಬಗೆಯ ಸಮುದ್ರ ಆಹಾರಗಳು ಬರುತ್ತವೆ. ಅವುಗಳ ಷೈಕಿ ಟಾರ್‌ಪೆಡೊ **(Torpedo)** ಆಕಾರದ ನೀಲಿಮೀನುಗಳು ಹೆಸರಾದದ್ದು. ಶೂನ್ಯಕ್ಕಿಂತ ೭೬ ಡಿಗ್ರಿ ಕಡಿಮೆ ಉಷ್ಣಾಂಶಕ್ಕಿಳಿಸಿದ ತಣ್ಣನೆಯ ನೀರಿನಲ್ಲಿರುವ ರುಚಿಕಟ್ಟಾದ ಈ ಮೀನುಗಳನ್ನು ಬೋಸ್ಟನ್ನಿನಲ್ಲಿ ಶೀತನೀರಿನಲ್ಲಿ ಪ್ಯಾಕ್‌ಮಾಡಿ ಪ್ರಪಂಚದ ಅರ್ಧಭಾಗದ ಜನರಿಗೆ ಜೆಟ್ ವಿಮಾನದ ಮೂಲಕ ಮಧ್ಯಾಹ್ನದ ಅಡುಗೆಗೆ ತಲುಪಿಸುವ ಹೊಣೆ ಸ್ಕೀಜೀಯದು. ಇವುಗಳನ್ನು ನಯವಾದ ಕಟ್ಟಿಗೆಯ ಪೆಟ್ಟಿಗೆಯಲ್ಲಿ ಸರಿಯಾಗಿ ಪೇರಿಸಿ ಕಳಿಸಲಾಗುತ್ತದೆ. ಈ ಮೀನಿನ ಕೆಲ ಗ್ರ್ಯಾಂ ತೂಕದ ತುಂಡು ೧೧ ಡಾಲರುಗಳಷ್ಟು (ಸುಮಾರು ೩೮೫ ರೂಪಾಯಿಗಳು) ದುಬಾರಿ. ಆದರೆ ಇದಕ್ಕಿಂತ ದುಬಾರಿಯಾದದ್ದು ಚಪ್ಪಟೆ ಮೀನು. ಸಮೃದ್ಧ ಪ್ರಮಾಣದಲ್ಲಿ ಈ ಮಾರುಕಟ್ಟೆಯಲ್ಲಿ ಲಭ್ಯ. ಬೆಲೆ ಮಾತ್ರ ಎಷ್ಟೆಂದು ಕೇಳಬೇಡಿ!

ಪ್ರಪಂಚದಲ್ಲಿ ಶ್ರೇಷ್ಠವಾದ ಹಲವಾರು ಸಮುದ್ರ ಆಹಾರಗಳು ಇಲ್ಲಿಗೆ ಬರುತ್ತವೆ. ತೈವಾನ್‌ನಿಂದ ಈಲ್, ಓರೆಗಾನ್‌ದಿಂದ ಸಮುದ್ರ ಅರ್ಚಿನ್, ಅಥೆನ್ಸ್‌ದಿಂದ ಎಂಟು ಕೈಗಳ ಅಷ್ಟಪಾದಿ, ಕಾರ್ಟಾಜೆನಾದಿಂದ ಏಡಿಗಳು,

ಸ್ಕಾಂಟಿಯಾಗೋದಿಂದ ಸಾಲ್ಮನ್, ಟಾಸ್ಮಾನಿಯಾದಿಂದ ಟ್ಯೂನಾ ಮೀನುಗಳು ಹೀಗೆ ಹತ್ತು ಹಲವು ಜಾತಿಯ ಐವತ್ತು ಲಕ್ಷ ಪೌಂಡುಗಳಷ್ಟು ಸಮುದ್ರ ಆಹಾರಗಳು ಪ್ರತಿ ದಿನವೂ ಈ ಮಾರುಕಟ್ಟೆಯನ್ನು ಸೇರುತ್ತವೆ. ನಿರ್ದಿಷ್ಟ ಪ್ರಮಾಣದ ಕೆಲ ಸಮುದ್ರ ಆಹಾರಗಳು ಕಿಲೋಗ್ರಾಮಿಗೆ ಕೆಲವೇ ರೂಪಾಯಿಯಿಂದ ಹಿಡಿದು ಕಿಲೋಕ್ಕೆ ಸುಮಾರು ೬,೩೦೦ ರೂಪಾಯಿಗಳವರೆಗೆ ಬೆಲೆ ಹೊಂದಿವೆ.

**ಮಾರುಕಟ್ಟೆ ದಿನಚರಿ:** ಬೆಳಗಿನ ೬ ಗಂಟೆಗೆ ಇಲ್ಲಿ ಟ್ರಕ್‌ಗಳು, ಮೋಟಾರ್ ಸೈಕಲ್ಲುಗಳು, ವ್ಯಾನುಗಳು, ಕೈಗಾಡಿಗಳು ಹಾಗೂ ಎತ್ತಿನ ಗಾಡಿಗಳು ತಮ್ಮ ಕೆಲಸವನ್ನು ಆರಂಭಿಸುತ್ತವೆ. ಇವುಗಳ ಮಧ್ಯೆ ನಾಲ್ಕೈದು ಬುಟ್ಟಿಗಳ ತುಂಬ ಸಿಗಡಿ ಮೀನುಗಳನ್ನು ತುಂಬಿಕೊಂಡು ಸೈಕಲ್ ಮೇಲೆ ಸರ್ಕಸ್ಸಿನವರಂತೆ ಸರಾಗವಾಗಿ ಒಬ್ಬರ ಹಿಂದೆ ಒಬ್ಬರಂತೆ ಸಾಲಾಗಿ ಹೋಗುವಾಗ ಜನಸಾಮಾನ್ಯರು ನಡೆದುಹೋಗುವುದೂ ದುಸ್ತರ. ಒಂದು ಕ್ಷಣ ಕೂಡ ಒಂದೆಡೆ ನಿಲ್ಲಲೂ ಆಗದು. ಕೆಲವೊಮ್ಮೆ ಕೆಳಗೆ ಬಿದ್ದ ಸಮುದ್ರ ಆಹಾರಗಳು ಜನರ ಕಾಲಡಿ ಸಿಕ್ಕು ಜಿಬ್ಬಿಯಾಗುವ ಮೊದಲೇ ಮೂರುಗಾಲಿಗಳ ಕೈಗಾಡಿಗಳು ಎತ್ತಿಕೊಂಡು ಹೋಗುತ್ತವೆ. ಜಾಗ್ರತೆಯಾಗಿರದಿದ್ದರೆ ಅವು ನಿಮ್ಮ ಕಾಲನ್ನು ಕೆತ್ತಿಬಿಟ್ಟಾವು ಜೋಕೆ. ಅದಕ್ಕಾಗಿ ನಡೆದುಕೊಂಡು ಹೋಗುವವರು ತುಂಬ ಎಚ್ಚರಿಕೆಯಿಂದ ನಡೆದಾಡಬೇಕು.

ವಿವಿಧ ಜಾತಿಯ ಮೀನುಗಳು ಮಾರುಕಟ್ಟೆಗೆ ಬಂದು ಅವುಗಳ ವಾಸನೆ ಹರಡುವುದರ ಒಳಗೆ ಬಿಕರಿಯಾಗಿ ಬಿಡುವಷ್ಟು ಇಲ್ಲಿಯ ವ್ಯಾಪಾರ ಜೋರು. ಸ್ಕೀಜೀಪಟ್ಟಣವಾದರೂ ಅಭಿಮಾನಿಗಳಿಂದ ತುಂಬಿದ ಪಟ್ಟಣ. ತಮ್ಮ ಊರಿಗೆ ದೊರೆತ ಹೆಸರು ಹಾಗೆಯೇ ಉಳಿಯಬೇಕೆಂದು ಪ್ರತಿಯೊಬ್ಬರೂ ಶ್ರಮಿಸುತ್ತಾರೆ. ವಿವಿಧ ಕಡೆಗಳಿಂದ ಮಾಲು ಎಷ್ಟು ವೇಗವಾಗಿ ಮಾರುಕಟ್ಟೆಗೆ ಬರುವುದೋ ಅಷ್ಟೇ ವೇಗವಾಗಿ ಮಾರಾಟವಾಗಿ ಹೋಗುವಂತೆ ಮಾರಾಟ ವ್ಯವಸ್ಥೆಯನ್ನು ಯೋಜಿಸುತ್ತಾರೆ.

ಸ್ಕೀಜೀ ಹಳೆಯ ಪರಂಪರೆಯನ್ನು ಹೊಂದಿದ ಹಳ್ಳಿ. ಇಲ್ಲಿಯ ಪ್ರಮುಖ ಏಳು ಸಗಟು ವ್ಯಾಪಾರಸ್ಥರು ಪ್ರಪಂಚದ ವಿವಿಧ ಭಾಗಗಳಿಂದ ಸಮುದ್ರ ಆಹಾರಗಳನ್ನು ಖರೀದಿಸಿ ಟೋಕಿಯೋಕ್ಕೆ ಕಳಿಸುತ್ತಾರೆ. ಮಧ್ಯಮವರ್ಗದ ಸಾವಿರಾರು ವ್ಯಾಪಾರಸ್ಥರಲ್ಲಿ ಇವುಗಳ ಹರಾಜು ನಡೆಯುತ್ತದೆ. ಅದನ್ನು ಪಡೆದವರು ಮೀನುಗಳನ್ನು ವಿವಿಧ ಪ್ರಮಾಣಗಳಲ್ಲಿ ಕತ್ತರಿಸಿ ನಯನಾಜೂಕಿನಿಂದ ಪ್ಯಾಕ್ ಮಾಡುತ್ತಾರೆ. ಬೇಕಾದವರಿಗೆ ಬೇಕಾದ ಊರಿಗೆ ತಕ್ಷಣ ಕಳಿಸುವ ಕಾರ್ಯ ಆಗಿಂದಾಗ ನಡೆಯುತ್ತದೆ.

ಗಡ್ಡೆಗಟ್ಟಿದ ತಾಜಾ ಮೀನುಗಳನ್ನು ಪೇರಿಕೊಂಡು ಬೇರೆಡೆಗೆ ಸಾಗಿಸಲು ಟ್ರಕ್ಕುಗಳು ಕಾರ್ಯವನ್ನಾರಂಭಿಸುತ್ತವೆ. ಕಾರ್ಮಿಕರು ಬೆಳಗಿನ ೨-೩೦ಕ್ಕೆ ಎದ್ದು ೩ ಗಂಟೆಗೆ ಮಾರುಕಟ್ಟೆಗೆ ಬಂದು, ಕ್ಷಣವೂ ಹಾಳುಮಾಡದಂತೆ ತಮ್ಮ ನಿತ್ಯದ ಕೆಲಸಗಳನ್ನು ಮುಗಿಸಿ ಮತ್ತೆ ಮನೆಗೆಬಂದು ಚಿಕ್ಕ ಮಲಗುತ್ತಾರೆ. ಮತ್ತೆ ಸ್ವಲ್ಪ ವೇಳೆ ನಂತರ ೮-೩೦ರ ವರೆಗೆ ತಣ್ಣನೆಯ ಬೀರ್ ಜೊತೆಗೆ ಉಪಾಹಾರವನ್ನು ಮುಗಿಸುತ್ತಾರೆ. ಪುನಃ ೯ ಗಂಟೆಯ ವೇಳೆಗೆ ಮಾರುಕಟ್ಟೆಯಲ್ಲಿ ನಡೆಯಲಿರುವ ಮೀನುಗಳ ಹರಾಜಿಗೆ ಸಿದ್ಧರಾಗುತ್ತಾರೆ.

ಮನುಷ್ಯರಿಗಿಂತಲೂ ದೊಡ್ಡದಾದ ಸುಮಾರು ಎರಡು ನೂರರಿಂದ ಒಂದು ಸಾವಿರ ಪೌಂಡು (೮೦ ಕೆ.ಜಿ.ಗಳಿಂದ ೪೦೦ ಕೆ.ಜಿಗಳ ವರೆಗಿನ) ಭಾರದ ಅಸಂಖ್ಯ ಟ್ಯೂನಾ ಮೀನುಗಳು ಅಮೆರಿಕದ ಫ್ಲಾರಿಡಾದ ದಂಡೆಯಲ್ಲಿ ಸಂಗ್ರಹವಾಗುತ್ತಿದ್ದಂತೆ ಜೆಟ್ ವಿಮಾನಗಳಿಂದ ಈ ಮಾರುಕಟ್ಟೆಗೆ ತರಲಾಗುತ್ತದೆ. ವಿಮಾನಗಳಿಂದ, ಟ್ರಕ್ಕು, ಲಾರಿಗಳಿಂದ ಮಾರುಕಟ್ಟೆಗೆ ಬಂದಾಗ ಖರೀದಿಸುವವರಲ್ಲಿ ಜಪಾನಿಯರದೇ ಸಿಂಹಪಾಲು. ದರದಲ್ಲಿ ಚೌಕಾಶಿಯ ಪ್ರಶ್ನೆಯೇ ಇಲ್ಲ. ಫ್ಲಾರಿಡಾದ ಈ 'ಟ್ಯೂನಾ'ಮೀನುಗಳೆಂದರೆ ಜಪಾನಿಯರಿಗೆ ಬಲು ಪ್ರೀತಿ.

ಟ್ಯೂನಾ ರಾಶಿ ರಾಶಿಯಾಗಿ ಬಂದು ಬೀಳುತ್ತಿದ್ದಂತೆಯೆ ಪ್ರತಿಯೊಂದರ ತೂಕ ಮಾಡಿ ಲೇಬಲ್ ಹಚ್ಚಿ ಇಡಲಾಗುತ್ತದೆ. ಅದರ ತೂಕ, ಮೀನಿನ ಶ್ರೇಷ್ಠತೆಗೆ ತಕ್ಕಂತೆ ಬೆಲೆಪಟ್ಟಿಯನ್ನು ಬರೆದು ಅದರ ಹೊಟ್ಟೆಯ ಮೇಲೆ ಹಚ್ಚಿಟ್ಟಿರುತ್ತಾರೆ. ಪ್ರಪಂಚದಲ್ಲಿ ಲಭ್ಯವಾಗುವ ಈ ಜಾತಿಯ ಮೀನುಗಳ ಒಟ್ಟು ಪ್ರಮಾಣದಲ್ಲಿ ಹತ್ತರಲ್ಲಿ ಒಂದು ಪಾಲನ್ನು ಜಪಾನಿಯರೇ ತಿನ್ನುತ್ತಾರೆ. ಈ ಮೀನಿನಲ್ಲಿ ಪ್ರೋಟೀನ್ ಹೆಚ್ಚಿರುವುದೇ ಇದಕ್ಕೆ ಕಾರಣ.

ಈ ಮಾರುಕಟ್ಟೆಯಲ್ಲಿ ಮಾರಲಾಗುವ ಅರ್ಧಕ್ಕಿಂತ ಹೆಚ್ಚು ಸಮುದ್ರಾಹಾರಗಳನ್ನು ಬೇಯಿಸದೇ ತಿನ್ನಲಾಗುತ್ತದೆ. ಸೀ ಅರ್ಚಿನ್, ಮುಷ್ಟಿಗಾತ್ರದ ಚಿಪ್ಪು ಮೀನು, ಬೆಣ್ಣೆಯಂತೆ ಇರುವ ಇದರ ಹಳದಿ ಕೆಂಪು ಮಿಶ್ರ ಬಣ್ಣದ ಮಾಂಸಗಳು

ಅಮೆರಿಕದ ಕ್ಯಾಲಿಫೋರ್ನಿಯಾ ಹಾಗೂ ಓರೆಗಾನ್‌ನಿಂದ ಇಲ್ಲಿಗೆ ಬರುತ್ತವೆ. ಯುನಿ ಎಂಬ ಮತ್ಸ್ಯಾಹಾರಕ್ಕೆ ಅಮೇರಿಕದಲ್ಲೇ ಸಾಕಷ್ಟು ಬೇಡಿಕೆಯಿದ್ದರೂ ವಿದೇಶ ವಿನಿಮಯ ಗಳಿಸುವ ದೃಷ್ಟಿಯಿಂದ ಅದು ಜಪಾನಿಗೆ ಕಳಿಸಲ್ಪಡುತ್ತದೆ. ಕ್ಯಾಲಿಫೋರ್ನಿಯಾ ಬಳಿಯ ಕೆಂಪು ಸಮುದ್ರದಲ್ಲಿ ಸಿಗುವ ಸೀ ಅರ್ಚಿನ್ ಗಾತ್ರದಲ್ಲಿ ಪ್ರಪಂಚದಲ್ಲೆ ದೊಡ್ಡದು. ಗಾತ್ರಕ್ಕೆ ತಕ್ಕಂತೆ ರುಚಿಕರವಾಗಿಯೂ ಇರುತ್ತದೆ. ಹಾಗೆಂದು ಇದನ್ನು ಹೆಚ್ಚು ತಿಂದರೆ ದೇಹಕ್ಕೆ ಅಷ್ಟೇ ಕೆಟ್ಟದ್ದು. ಅತಿ ಹೆಚ್ಚಿನ ಬೆಲೆಗೆ ಸಿಗುವ ಟ್ಯೂನಾ ಮೀನುಗಳು ಜಪಾನಿನಲ್ಲೇ ಹೆಸರಾಗಿವೆ. ಅದರ ಹೆಸರು "ಟ್ಯೂನಾ ೧೯೭". ಅಮೆರಿಕನ್ನರು ಮೀನು ಹಿಡಿಯುವ ವಿಶೇಷ ದೋಣಿಗಳಿಂದ ಇವುಗಳನ್ನು ಹಿಡಿದು ಜಪಾನಿನ ವ್ಯಾಪಾರಿ ಸಂಸ್ಥೆಗೆ ಮಾರುತ್ತಾರೆ. ಅಲ್ಲಿಂದ ಏರ್‌ಟ್ರಕ್‌ನಲ್ಲಿ ಜಪಾನಿನ ಮೊದಲ ದರ್ಜೆಯ ಹರಾಜು ಹಿಡಿಯುವವರನ್ನು ಅವು ತಲುಪುತ್ತವೆ. ಆತ ಅವುಗಳನ್ನು ಚಿಕ್ಕ ಹರಾಜುಗಾರನಿಗೆ ಕೊಡುತ್ತಾನೆ. ಅವನು ಯುಕ್ತ ಪ್ರಮಾಣದಲ್ಲಿ ಕತ್ತರಿಸಿ ಪ್ಯಾಕ್ ಮಾಡಿ ವಿತರಕರಿಗೆ ಕಳಿಸುತ್ತಾನೆ. ವಿತರಕರು ಮಧ್ಯ ಜಪಾನಿನ ರೆಸ್ಟೋರೆಂಟ್‌ಗಳಿಗೆ ಇವುಗಳನ್ನು ರವಾನಿಸುತ್ತಾರೆ. ಅವು ಮುಂದೆ ರುಚಿಕಟ್ಟಾದ ವಿವಿಧ ತಿಂಡಿಗಳಾಗಿ ಜನಸಾಮಾನ್ಯರ ಹೊಟ್ಟೆಯನ್ನು ತಲುಪುತ್ತವೆ. ಈ ಎಲ್ಲಾ ಮಾಧ್ಯಮಗಳಲ್ಲಿ ಪ್ರತಿಯೊಬ್ಬನಿಗೂ ಇದರಿಂದ ಲಾಭ ಸಿಗುತ್ತಿರುತ್ತದೆ. ಇದರಿಂದ ತಯಾರಾದ ಕೆಲವೇ ಗ್ರಾಂ ಭಾರದ ಒಂದು ಬಗೆಯ ತಿಂಡಿಯ ತುಣುಕಿಗೆ ೧೬೦ ರಿಂದ ೧೮೦ ರೂಪಾಯಿಗಳು.

### ಉಪ ಕಸುಬುಗಳು

ಮೀನಿನ ವ್ಯಾಪಾರಕ್ಕೆ ಪೂರಕವಾಗಿ ಚಾಕುಗಳನ್ನು ಮಾರುವವರು, ಚಾಕುವನ್ನು ಹರಿತಗೊಳಿಸುವವರು, ಪೆಟ್ಟಿಗೆ ತಯಾರಕರು, ಬೂಟು ತಯಾರಕರು, ತಮ್ಮ ವ್ಯಾಪಾರಗಳನ್ನು ನಡೆಸುತ್ತಿರುತ್ತಾರೆ. ಕಚ್ಚಾ ವಸ್ತುಗಳಿಂದ ಬೇಕಾದ ಆಕಾರದ ಚಾಕು ತಯಾರಿಸುವುದು ಕೂಡ ಇಲ್ಲಿಯ ಒಂದು ವ್ಯಾಪಾರವೆ. ಇದೂ ಒಂದು ಕಲೆಯೇ ಆಗಿದೆ. ಪುಕುಯಿ ಪಟ್ಟಣದಲ್ಲಿ ಐದು ಇಂಚು ಉದ್ದದ ಚಾಕುವಿನಿಂದ ಹಿಡಿದು ಐದು ಅಡಿ ಉದ್ದದ ವರೆಗಿನ ವಿಶೇಷ ಬಗೆಯ ಚಾಕುಗಳು ತಯಾರಾಗುತ್ತವೆ. ಈ ದೊಡ್ಡ ಚಾಕುಗಳನ್ನು ಜಪಾನಿಯರು ಕಬ್ಬಿಣ ಉಕ್ಕುಗಳನ್ನು ೯೦೦ ಅಂಶ ಫ್ಯಾರನಹೈಟ್ ಉಷ್ಣತೆಯಲ್ಲಿ ಕಾಯಿಸುತ್ತ, ಮಿದು ಮಾಡುತ್ತ ಸುತ್ತಿಗೆಯಿಂದ ಹೊಡೆದು ತಯಾರಿಸುತ್ತಾರೆ.

### ಗುಟ್ಟರಿಯಲು ತರಬೇತಿ

ಸ್ಕೀಜೀಯವರಿಗೆ ಮೀನು ವ್ಯಾಪಾರದ ಬಗ್ಗೆ ಅಷ್ಟೇ ಅಲ್ಲ, ಅದರ ಕುರಿತಾದ ಶಿಕ್ಷಣದ ಬಗ್ಗೆಯೂ ತುಂಬ ಕಾಳಜಿ. ಕೆಲವು ನಿರ್ದಿಷ್ಟ ದಿನಗಳಲ್ಲಿ ಈ ಕೆಲಸದಲ್ಲಿ ಆಸಕ್ತಿವುಳ್ಳವರಿಗೆ ಇದಕ್ಕೆ ಸಂಬಂಧಿಸಿದ ತರಬೇತಿಯನ್ನೂ ಕೊಡಲಾಗುತ್ತದೆ. ಇದರಲ್ಲಿ ಸ್ಕೀಜೀ ಮಾರುಕಟ್ಟೆಯಲ್ಲಿ ಹರಾಜು ಹಿಡಿಯುವುದು, ಚಾಕುಗಳ ಬಳಕೆ ಮಾಡುವ ರೀತಿ, ಮೀನುಗಳನ್ನು ಪರೀಕ್ಷಿಸುವ ವಿಧಾನ, ಅವುಗಳನ್ನು ಪ್ಯಾಕ್ ಮಾಡುವ ರೀತಿ, ವಿವಿಧ ಕಡೆಗಳಿಗೆ ಕಳಿಸುವ ತಂತ್ರಗಳನ್ನು ಕುರಿತು ತಜ್ಞರಿಂದ ಉಪನ್ಯಾಸಗಳನ್ನು ಕೊಡಿಸುತ್ತಾರೆ. ಇಂತಹ ತರಬೇತಿ ವರ್ಗಗಳು ಮೇಲಿಂದ ಮೇಲೆ ನಡೆಯುತ್ತಿರುತ್ತವೆ. ಕೆಲಜಾತಿಯ ಮೀನುಗಳ ವಿಷಭರಿತ ಭಾಗಗಳನ್ನು ಬೇರ್ಪಡಿಸುವ ಕಲೆಯನ್ನೂ ಹೇಳಿಕೊಡಲಾಗುತ್ತದೆ. ಅತಿಕಡಿಮೆ ವೇಳೆಯಲ್ಲಿ ವಿಶಿಷ್ಟ ಜಾತಿಯ ಮೀನುಗಳನ್ನು ಅತಿತೆಳ್ಳಗಾಗಿ, ಅತಿಹೆಚ್ಚು ತುಂಡುಗಳಾಗಿ ಮಾಡುವ ಕಲೆಯನ್ನು ಕೂಡ ಹೇಳಿಕೊಡಲಾಗುತ್ತದೆ. ಇವುಗಳಿಗೆಲ್ಲವೂ ಪರೀಕ್ಷೆಯೂ ಇದೆ. ಅದಕ್ಕಾಗಿ ಸ್ಪರ್ಧೆಯೂ ಇದೆ.

ಮಾರ್ಕೆಟ್ ಮಧ್ಯದಲ್ಲಿ ಸ್ಕೀಜೀಯಲ್ಲಿ ಪಿಂಟೋ ಪಂಥಕ್ಕೆ ಸಂಬಂಧಿಸಿದಂತೆ ಒಂದು ದೇವಸ್ಥಾನ. ಅದಕ್ಕೆ ೧೨ ಅಡಿ ಎತ್ತರದ ಹೆಬ್ಬಾಗಿಲು ಇದೆ. ಸುಮಾರು ೩೫೦ ವರ್ಷಗಳ ಹಿಂದೆ ಕಟ್ಟಲಾದ ಇದನ್ನು ನಾಮಿಯೋಕಾ ಇನಾರಿಜಿಂಜಾ ಎಂದು ಕರೆಯಲಾಗುತ್ತದೆ. ಇದಕ್ಕೆ ಈ ಮಾರುಕಟ್ಟೆಯ ಕೆಲಸಗಾರರೇ ಹೆಚ್ಚಿನ ಸಂಖ್ಯೆಯಲ್ಲಿ ಭಕ್ತರು. ಪ್ರತಿಯೊಬ್ಬನೂ ಕೆಲಸ ಪ್ರಾರಂಭಿಸುವ ಮೊದಲು ಮಂದಿರಕ್ಕೆ ಬಂದು ದೇವರನ್ನು ಪ್ರಾರ್ಥಿಸಿ ಬರುತ್ತಾನೆ. ತನ್ನ ಅದೃಷ್ಟಕ್ಕೆ ದೇವರಲ್ಲಿಯ ಭಕ್ತಿಯೇ ಕಾರಣ ಎಂದಾತ ನಂಬುತ್ತಾನೆ. ಇಲ್ಲಿಯ ಇನ್ನೊಂದು ವೈಶಿಷ್ಟ್ಯವೆಂದರೆ ಸತ್ತ ಮೀನುಗಳ ಆತ್ಮಕ್ಕೆ ಶಾಂತಿ ಸಿಗಲೆಂದು ಪ್ರತಿಯೊಬ್ಬನೂ ಪ್ರಾರ್ಥನೆ ಸಲ್ಲಿಸುವುದು. ಸ್ಕೀಜೀಯ ಪ್ರತಿಯೋರ್ವ ಕೆಲಸಗಾರನೂ ತನ್ನ ಪ್ರಾಮಾಣಿಕ ದುಡಿಮೆ ತಾಯ್ನಾಡಿನ ಉನ್ನತಿಗೆ ಸಹಾಯಕವಾಗುವುದೆಂದು ಹೆಮ್ಮೆ ಪಡುತ್ತಾನೆ. ●

# ಕಿತ್ತು ತಿನ್ನುವ ಬಡತನ

ಮೈಸೂರಿನ ಅನಾಥಾಲಯಕ್ಕೆ ಸೇರಿಸಲೆಂದು ಒಬ್ಬ ಬಡಹುಡುಗನನ್ನು ಒಬ್ಬಾತ ಕರೆದುಕೊಂಡು ಬಂದು, ಅಲ್ಲಿಯ ಕಾರ್ಯದರ್ಶಿಗಳನ್ನು ಕಂಡು, "ಸ್ವಾಮಿ, ಇವನು ಅನಾಥ ಬಾಲಕ; ತಂದೆ ತಾಯಿ ಯಾರೂ ಇಲ್ಲ. ಇವನನ್ನು ಇಲ್ಲಿ ಸೇರಿಸಿಕೊಂಡು ಅವನ ವಿದ್ಯಾಭ್ಯಾಸಕ್ಕೆ ನೆರವಾಗಬೇಕು," ಎಂದು ಪ್ರಾರ್ಥಿಸಿದ. ಅವರು, "ಹುಡುಗ ಅನಾಥನಾಗಿದ್ದು ಬುದ್ಧಿವಂತನಾಗಿದ್ದರೆ ಸೀಟು ಸಿಕ್ಕೇಸಿಕ್ಕುತ್ತದೆ. ಅದಕ್ಕೆ ಯಾರ ಶಿಫಾರಸೂ ಬೇಕಾಗಿಲ್ಲ. ನೀವೊಂದು ಅರ್ಜಿಕೊಟ್ಟರೆ ಸಾಕು" ಎಂದರು. ಆ ವ್ಯಕ್ತಿ, "ಉಪಕಾರವಾಯಿತು ಸ್ವಾಮಿ,"ಎಂದು ಅವರಿಗೆ ವಂದಿಸಿ ಹೊರಟು ಹೋಗುವುದರಲ್ಲಿದ್ದಾಗ ಕಾರ್ಯದರ್ಶಿಗಳು, "ಈ ಹುಡುಗನ ತಂದೆ ಸತ್ತದ್ದು ಯಾವಾಗ?" ಎಂದು ಕೇಳಿದರು. ಆ ವ್ಯಕ್ತಿ ಉತ್ತರಿಸಲು ತಡವರಿಸುತ್ತಿದ್ದುದನ್ನು ನೋಡಿ, "ಪರವಾ ಇಲ್ಲ. ಅದಕ್ಕೆ ಈಗೇನೂ ಅಂಥ ಅವಸರವಿಲ್ಲ. ವಿಚಾರ ಮಾಡಿ ಬಂದು ತಿಳಿಸಿ",ಎಂದರು. ಆ ವ್ಯಕ್ತಿ "ಸ್ವಾಮಿ, ನನ್ನಿಂದ ಅಪರಾಧವಾಯಿತು. ಈ ಹುಡುಗನ ದುರ್ದೈವಿ ತಂದೆ ನಾನೇ. ಇವನಿಗೆ ವಿದ್ಯಾಭ್ಯಾಸ ಮಾಡಿಸಲೂ ಆಗದಂಥ ಕಿತ್ತು ತಿನ್ನುವ ಬಡತನ ನನ್ನಿಂದ ಹೀಗೆ ಸುಳ್ಳು ಹೇಳಿಸಿತು. ನನ್ನನ್ನು ಕ್ಷಮಿಸಬೇಕು," ಎಂದು ಪ್ರಾರ್ಥಿಸಿದ. ಉದಾರ ಮನಸ್ಸಿನ ಕಾರ್ಯದರ್ಶಿಗಳು ಕೊಂಚವೂ ಕೋಪಿಸಿಕೊಳ್ಳದೆ, "ಅನಾಥಾಲಯದ ನಿಯಮಗಳ ಪ್ರಕಾರ ನಿಮ್ಮ ಹುಡುಗನಿಗೆ ಸೀಟು ದೊರಕುವುದಿಲ್ಲ. ಇಲ್ಲಿ ಪ್ರವೇಶ ದೊರಕಬೇಕಾದರೆ ಹುಡುಗ ಅನಾಥನಾಗಿರಬೇಕು. ಇಲ್ಲಿ. ನಾವು ನಿಯಮಬದ್ಧರಾಗಿರಬೇಕು. ನಮ್ಮ ವೈಯಕ್ತಿಕ ಇಷ್ಟಾನಿಷ್ಟಗಳು ಇಲ್ಲಿ ಕೆಲಸಕ್ಕೆ ಬರುವುದಿಲ್ಲ," ಎಂದು ಹೇಳಿದಾಗ ಬಂದ ವ್ಯಕ್ತಿ ಕಂಗಾಲಾದ. ಇದನ್ನು ಕಂಡು, "ಆಗಲಿ ನೋಡೋಣ, ದೇವರಿದ್ದಾನೆ. ನಾಡಿದ್ದು ಕಮಿಟಿಯ ಮೀಟಿಂಗ್ ಇದೆ. ಅಲ್ಲಿ ನಿಯಮಕ್ಕೆ ತಿದ್ದುಪಡಿ ಸೂಚಿಸುತ್ತೇನೆ. ಅನಾಥ ಎಂಬ ಪದಕ್ಕೆ ಬದಲಾಗಿ 'ತೀರಾ ಬಡವರಾಗಿರಬೇಕು' ಎಂದು ಬದಲಾಯಿಸಲು ಪ್ರಯತ್ನಪಡುತ್ತೇನೆ," ಎಂದರು. ಅಷ್ಟು "ಮಾಡಿದರೆ ಹುಡುಗ ಉದ್ಧಾರವಾಗುತ್ತಾನೆ ಸ್ವಾಮಿ,"ಎಂದ ಆಗಂತುಕ.

ಆಗ ಕಾರ್ಯದರ್ಶಿಗಳು, "ಹಾಂ! ಇನ್ನೊಂದು ವಿಷಯ ಹೇಳೋದು ಮರೆತು ಬಿಟ್ಟೆ. ಇಲ್ಲಿ ದಾಖಲಾಗುವ ವಿದ್ಯಾರ್ಥಿಗಳ ತಂದೆ ತಾಯಿಗಳ ಗತಿಸಿದ ದಿನಾಂಕವನ್ನು ಕೇಳುವ ವಾಡಿಕೆ. ಯಾಕೆಂದರೆ ಅವರ ತಿಥಿಯನ್ನು ಅನಾಥಾಲಯದ ಖರ್ಚಿನಲ್ಲೇ ಮಾಡುವ ಸಂಪ್ರದಾಯವಿದೆ. ಅದಕ್ಕೇ ನಿಮ್ಮನ್ನು ಹಾಗೆ ಕೇಳಿದ್ದು; ಅನ್ಯಥಾ ಭಾವಿಸಬೇಡಿ,"ಎಂದರು.

೧೨ ವರ್ಷಗಳ ಕಾಲ ಸತತವಾಗಿ ಅನಾಥಾಲಯದ ಕಾರ್ಯದರ್ಶಿಗಳಾಗಿದ್ದ ಎಚ್. ಸುಬ್ಬರಾಯರು ಕಮಿಟಿ ಮೀಟಿಂಗಿನಲ್ಲಿ 'ಅನಾಥ'ಎಂದರೆ ಬಡವ ಹಾಗೂ ಪ್ರತಿಭಾವಂತನಾಗಿದ್ದರೆ ಸಾಕು, ಅನಾಥಾಲಯದಲ್ಲಿ ಸೀಟು ಕೊಡಿಸಬೇಕು ಎಂಬ ತಿದ್ದುಪಡಿಯನ್ನು ತರುವುದರಲ್ಲಿ ಯಶಸ್ವಿಯಾದರು. ದಯಾಸಾಗರ ಎಂ. ವೆಂಕಟಕೃಷ್ಣಯ್ಯನವರಿಂದ ಸ್ಥಾಪಿಸಲಾದ ಅನಾಥಾಲಯಕ್ಕೆ ಈಗ ನೂರು ವರ್ಷ ತುಂಬಿದೆ. ಇಲ್ಲಿ ಓದಿದ ಅನೇಕ ಪ್ರತಿಭಾವಂತರು ದೇಶವಿದೇಶಗಳಲ್ಲಿ ಉನ್ನತ ಸ್ಥಾನದಲ್ಲಿದ್ದು ಕೀರ್ತಿಗಳಿಸಿದ್ದಾರೆ.

✿ ಡಿ. ಗುಂಡೂರಾವ್

ರಹಸ್ಯ

ಎಂ.ಆರ್. ನರಸಿಂಹನ್

ಬಹಳ ವರ್ಷಗಳ ಹಿಂದಿನ ಮಾತು. ಮೇಲುಕೋಟೆಯ ದೇವಸ್ಥಾನವೊಂದರಲ್ಲಿ ಕೆಲವು ವಸ್ತುಗಳು ಕಳುವಾದವು. ಜನರಿಗೆ ಅದರ ಅರ್ಚಕನ ಮೇಲೆಯೆ ಗುಮಾನಿ. ಪಾಪ ಸಾತ್ವಿಕನಾದ ಆ ಪ್ರಾಣಿ ತನ್ನ ಮೇಲಿನ ಅಪವಾದ ಪರಿಹರಿಸಿಕೊಳ್ಳಲು ಆಕಾಶ ಪಾತಾಳ ಒಂದು ಮಾಡುವಂತೆ ಅಲೆದಾಡಿದ. ಹೀಗೆ ಅಲೆದಾಡುತ್ತಿದ್ದಾಗ ಅಕಸ್ಮಾತ್ತಾಗಿ ಅವನಿಗೊಬ್ಬ ಮಲೆಯಾಳಿ ಮಾಂತ್ರಿಕನ ಪರಿಚಯವಾಯಿತು. ಆತ ಅರ್ಚಕನಿಗೆ ಅಂಜನವನ್ನು ನೀಡಿ, ಇದರಲ್ಲಿ ಕಳ್ಳನ ಸುಳಿವು ಸಿಕ್ಕಿದರೂ ಸಿಕ್ಕೀತು, ಎಂದು ಹೇಳಿ ಕಳುಹಿಸಿಕೊಟ್ಟ.

ಅರ್ಚಕ ಊರಿಗೆ ಬಂದು ತನ್ನ ಗುರುತಿನವರಿಗೆಲ್ಲ ಅಂಜನ ನೋಡಿ ಹೇಳುವಂತೆ ಬೇಡಿಕೊಂಡ.



ಆದರೆ ಒಬ್ಬರಿಗೂ ಅದರಲ್ಲಿ ಏನೂ ಕಂಡುಬರಲಿಲ್ಲ. ಅಂಜನ ನೋಡುವುದೆಂದರೆ ಒಂದು ರೀತಿಯ ಕಪ್ಪು ಅಥವಾ ಕಾಡಿಗೆಯನ್ನು ತಯಾರಿಸಿ ವೀಳ್ಯದೆಲೆಯ ಮೇಲೆ ರೂಪಾಯಿ ಅಗಲಕ್ಕೆ ಹರಡುವರು. ಅದನ್ನು ನಿಟ್ಟಿಸಿ ನೋಡಿದಾಗ ಕೆಲವರಿಗೆ ಅದರಲ್ಲಿ ಏನೇನೋ ಕಾಣಸುವುದಂತೆ. ಅದರ ಪೈಕಿ ಕಳ್ಳರು ಕಾಣಸುವರೋ ಎನ್ನುವ ಪ್ರಯತ್ನವೂ ಒಂದು. ಆ ಕಪ್ಪು ತಯಾರಿಸುವ ವಿಧಾನ ಮಾತ್ರ ಮಾಂತ್ರಿಕರಿಗೇ ಗೊತ್ತು.

ಮೇಲುಕೋಟೆಯ ಸಂಸ್ಕೃತ ಪಾಠಶಾಲೆಯಲ್ಲಿ ರಾಮಸ್ವಾಮಿ ಎಂಬ ಉಪಾಧ್ಯಾಯರು ಮಧ್ಯ ವಯಸ್ಕರಾದರೂ ಕಿರಿಯ ವಯಸ್ಸಿನಲ್ಲೇ ಸಾಹಿತ್ಯದಲ್ಲಿ ಪಾಂಡಿತ್ಯವನ್ನು ಗಳಿಸಿ ಸಂಸ್ಕೃತದಲ್ಲೂ ಸಾಹಿತ್ಯವನ್ನು ನಿರ್ಮಿಸಿ ಹೆಸರುವಾಸಿಯಾಗಿದ್ದರು. ಅವರ ಸಂಸ್ಕೃತ ವಾಕ್ ಶೈಲಿಯು ಬಾಣಭಟ್ಟ, ಕಾಳಿದಾಸ ಮುಂತಾದವರ ಸಾಹಿತ್ಯ ಸರಣಿಗೆ ಸಮನಾಗಿದ್ದುವಂತೆ! ಆದರೆ ಸರಸ್ವತಿಯ ಪುತ್ರರ ಮೇಲೆ ಎಂದಾದರೂ ಲಕ್ಷ್ಮಿಯ ಕಟಾಕ್ಷ ಬೀಳುವುದುಂಟೆ! ಆಗಿನ ಕಾಲದಲ್ಲಿ, ಅಂದರೆ ೫೦-೬೦ ವರ್ಷಗಳ ಹಿಂದೆ, ಪಾಠಶಾಲೆಯಲ್ಲಿನ ಸಂಬಳ ೧೦-೧೫ ರೂಪಾಯಿಗಳು ಮಾತ್ರ. ಮತ್ತಾವ ಆದಾಯವೂ ಇಲ್ಲದ ರಾಮಸ್ವಾಮಿಗಳಿಗೆ ಉದರಂಭರಣ ಮಾಡುವುದೇ ದುಸ್ತರವಾಗಿತ್ತು. ಮನೆಯಲ್ಲಿ ರಂಗನಾಯಕಿ ಹಾಗೂ ಮೂರು ಮಕ್ಕಳು. ಅದರಲ್ಲೊಂದು ಹಸುಗೂಸು ಬೇರೆ. ರಾಮಸ್ವಾಮಿಗಳ ಕುಟುಂಬ ಉಡಲು, ತಿನ್ನಲು ಅನ್ನವಿಲ್ಲದೆ ತೊಂದರೆಗೆ ಈಡಾಗಿತ್ತು.

ಸುತ್ತಮುತ್ತ ಬಂಧು ಜನರಿದ್ದರೂ ರಾಮಸ್ವಾಮಿಯವರ ಬಡತನದಿಂದಾಗಿ ಕುಟುಂಬಕ್ಕೆ ಒದಗುವವರು ಯಾರೂ ಇರಲಿಲ್ಲ. ತಮ್ಮಷ್ಟು ಅನುಕೂಲ ಸ್ಥಿತಿ ಅವರಿಗಿಲ್ಲವೆಂಬುವ ತಾತ್ಸಾರ, ಅಲಕ್ಷ್ಯ ಬಂಧು ವರ್ಗಕ್ಕೆ. ಹೀಗಾಗಿ ಅವರೆಲ್ಲರ ಕೃಪಾಭಿಕ್ಷೆಯಲ್ಲಿ ರಾಮಸ್ವಾಮಿ ಅವರ ಕುಟುಂಬ ಹೊಟ್ಟೆ ಹೊರೆಯುವ ಸ್ಥಿತಿ ಇತ್ತು.

ಒಮ್ಮೆ ಯಾವುದೇ ಗೃಹಕೃತ್ಯದ ಕ್ಷುಲ್ಲಕ ಕಾರಣಕ್ಕಾಗಿ ಜಗಳವಾಗಿ ರಂಗನಾಯಕಮ್ಮನವರನ್ನು ಆ ಬಂಧುಗಳು ಚಿತ್ತ ಕ್ಷೋಭೆಗೆ ಒಳಪಡಿಸಿದ್ದರು. ಆದರಿಂದಾಗಿ ರಾಮಸ್ವಾಮಿಯವರಿಗೆ ಬಹಳ ಮನೋವೇದನೆಯಾಗಿ ತಮಗೆ ಯಾರಿಂದಲೋ ಕೊಡಲ್ಪಟ್ಟಿದ್ದ ಬೆಳ್ಳಿಯ ಲಕ್ಷ್ಮೀ ವಿಗ್ರಹವನ್ನು ತಮ್ಮ ಹೆಂಡತಿಗೆ ಕೊಟ್ಟು, "ಇದನ್ನೇ ಭಕ್ತಿಯಿಂದ ಆರಾಧಿಸು, ಈ ದಿಸೆಯಿಂದಲಾದರೂ ಒಳ್ಳೆಯ ಕಾಲ ಬರಲಿ" ಎಂದು ಸಮಾಧಾನಪಡಿಸಿದ್ದರು. ಆ ಪ್ರಕಾರ ಆಕೆ ದಿನವೂ ಲಕ್ಷ್ಮಿಯನ್ನು ಪೂಜಿಸುತ್ತಾ ಬಂದರು.

ರಾಮಸ್ವಾಮಿ ಅವರ ಚಿಕ್ಕಪ್ಪ ಶ್ರೀನಿವಾಸಯ್ಯಂಗಾರ್ಯರೂ ಹಿರಿಯ ಸಂಸ್ಕೃತ ವಿದ್ವಾಂಸರು. ಅವರಿಗೆ ಹಲವು ಗೌರವ ಪ್ರಶಸ್ತಿಗಳೂ ಬಂದಿದ್ದವು. ಅವರೂ ರಾಮಸ್ವಾಮಿಗಳ ನೆರೆಯವರೇ ಆಗಿದ್ದರು. ಅವರ ಮಗ ನಾರಾಯಣ ಕೂಡ ಹಿರಿಯ ಸಂಸ್ಕೃತ ವಿದ್ವಾಂಸರು; ಹೈಸ್ಕೂಲಿನಲ್ಲಿ ಸಂಸ್ಕೃತ ಪಂಡಿತರು. ಅವರಿಗೂ ದೇವಸ್ಥಾನದ ಅರ್ಚಕರಿಗೂ ಮೊದಲಿನಿಂದಲೂ ಗಳಸ್ಯ ಕಂಠಸ್ಯ.

ಹೀಗಾಗಿ ಆತ ಅಂಜನವನ್ನು ನಾರಾಯಣರ ಕೈಗೂ ನೀಡಿ ನೋಡಹೇಳಿದ. ನಾರಾಯಣರು ಮನೆಗೆ ತಂದು ಸುತ್ತಮುತ್ತಲಿನ ಮನೆಯವರಿಗೆ ತೋರಿಸಿ ಏನಾದರೂ ವಿಚಾರ ತಿಳಿಯುವುದೆ? ಎಂದು ಪ್ರಯತ್ನಿಸಿದರು. ಆದರೆ ಏನೂ ಪ್ರಯೋಜನ ಕಾಣಲಿಲ್ಲ. ಒಮ್ಮೆ ಯಾವುದೋ ಕೆಲಸದ ಮೇಲೆ ಅಲ್ಲಿಗೆ ಬಂದಿದ್ದ ರಂಗನಾಯಕಮ್ಮನವರು ಜನ ಗುಂಪು ಸೇರಿದ್ದನ್ನು ಕಂಡು ಆದೇನೆಂದು ತಿಳಿಯಲು ಅಪೇಕ್ಷೆ ಪಟ್ಟು ಅಲ್ಲಿ ಹಣಿಕಿದರು. ನಾರಾಯಣರು ಅವರಿಗೂ ಅಂಜನ ತೋರಿಸಿದರು. ಆದರೆ ಆಕೆಯ ಕಣ್ಣಿಗೆ ಅಂಜನದಲ್ಲಿ ಏನೇನೋ ನೆಳಲುಗಳು ಓಡಾಡುವಂತೆ ತೋರಿ ಬರಲು ನಾರಾಯಣರ ಕುತೂಹಲಕ್ಕೆ ಆಜ್ಯವಿಟ್ಟಂತಾಯಿತು. ಆಕೆ ಸಹಕರಿಸಲು ಒಪ್ಪಿದರೆ ಇನ್ನೂ ಹೆಚ್ಚು ತಿಳಿಯಬಹುದೆಂಬ ನಂಬಿಕೆ ಅವರಲ್ಲಿ ಉಂಟಾಯಿತು. ಆದರೆ ರಾಮಸ್ವಾಮಿಗಳು ಏನೆನ್ನುವರೋ ಎನ್ನುವ ಹೆದರಿಕೆ, ಬಿಗುಮಾನಗಳು ಅಡ್ಡಬಂದವು.

ಆದರೂ ರಾಮಸ್ವಾಮಿಗಳು ಪಾಠಶಾಲೆಗೆ ಹೋಗಿರುವಾಗ ನಾರಾಯಣರು ರಂಗನಾಯಕಮ್ಮನನ್ನು ಆಶ್ರಯಿಸಿದರು. ಆ ವೇಳೆಗಾಗಲೆ ಅವರಿಗೆ

ನಿಧಿ ಸಿಕ್ಕುವುದೆಂಬ ಆಸೆಯನ್ನುಬೇರೆ ಯಾರೋ ಹುಟ್ಟಿಸಿದ್ದರು. ಅಂಜನದಲ್ಲಿ ಅದು ಏನಾದರೂ ಕಂಡು ಬರುವುದೇ? ಎಂಬ ಹುಚ್ಚು ಆಸೆ ಅವರಿಗೆ. ಅದೇ ರೀತಿ ರಂಗನಾಯಕಮ್ಮನಿಗೂ ಐಶ್ವರ್ಯ ಸಿಕ್ಕುವುದೇ ಎಂದು ತಿಳಿಯಲು ಅಪೇಕ್ಷೆ. ಅಂತೂ ಆಕೆ ನಾರಾಯಣರ ಬಲವಂತಕ್ಕೆ ಮಣಿದು ಮನೆಗೆಲಸವನ್ನು ಶೀಘ್ರವಾಗಿ ಮುಗಿಸಿಕೊಂಡು, ಹಸುಗೂಸಿಗೆ ಹಾಲನ್ನಿತ್ತು, ಅಂಜನವನ್ನು ಈಕ್ಷಿಸಲು ಬಂದು ಕೂಡುತ್ತಿದ್ದರು. ಈ ರೀತಿ ಪ್ರತಿದಿನವೂ ಇದೊಂದು ಗಂಟೆಗಟ್ಟಲೆ ನಡೆಯುವ ಕಾರ್ಯಕ್ರಮವಾಯಿತು!

ಮೊದಮೊದಲು ರಂಗನಾಯಕಮ್ಮನಿಗೆ ಅಂಜನದಲ್ಲಿ ಏನೇನೋ ದೃಶ್ಯಗಳು ಗೋಚರಿಸಿ, ಕ್ರಮೇಣ ಓರ್ವ ದೃಢವಾದ, ದಪ್ಪ ಮೀಸೆಯ, ರುಮಾಲು ಧರಿಸಿದ, ತಿಲಕವನ್ನಿಟ್ಟುಕೊಂಡಿದ್ದ ವ್ಯಕ್ತಿಯ ಆಕಾರ ಕಂಡು ಬಂದಿತು. ತಾನು ಆಕೆಯ ದಾಸಾನುದಾಸನೆಂದೂ ಆಕೆ ಹೇಳಿದ್ದನ್ನೆಲ್ಲಾ ಕೇಳಲು ಬದ್ಧನೆಂದೂ ಆತ ವಿನಂತಿಸಿಕೊಂಡಂತೆಯೂ ತೋರಿ ಬಂದಿತು. ನಾರಾಯಣರು ರಂಗನಾಯಕಮ್ಮನ ಮೂಲಕ ಆ ವ್ಯಕ್ತಿಗೆ ಪ್ರಶ್ನೆಗಳನ್ನು ಹಾಕಿಸಿ ಉತ್ತರವನ್ನು ಅವನಿಂದ ಆಕೆಯ ಮೂಲಕ ತಿಳಿದುಕೊಂಡು ಅವನ್ನೆಲ್ಲಾ ಒಂದು ಕಾಗದದ ಮೇಲೆ ಗುರುತು ಮಾಡಿಕೊಳ್ಳತೊಡಗಿದರು. ಹಲವರ ಭೂತ, ಭವಿಷ್ಯ, ಕಾರ್ಯದಲ್ಲಿ ಜಯ, ಲಾಟರಿಯಲ್ಲಿ ಹಣ ದೊರೆಯುವುದೋ ಇಲ್ಲವೋ ಎನ್ನುವದು, ಕಾಯಿಲೆ, ಕಷ್ಟ ಪರಿಹಾರ ಮುಂತಾದುವುಗಳಿಗೆ ಸಮಾಧಾಕರವಾದ ಉತ್ತರ ದೊರೆಯುತ್ತಿದ್ದುದರಿಂದ ಭವಿಷ್ಯವನ್ನು ಅರಿಯಲು ಬರುವವರ ಸಂಖ್ಯೆ ದಿನೇ ದಿನೇ ಹೆಚ್ಚತೊಡಗಿತು. ರಂಗನಾಯಕಮ್ಮನು ಭವಿಷ್ಯ ತಿಳಿಸುತ್ತಾರೆಂಬ ಸಮಾಚಾರ ಊರೂರಿಗೆ ಹಬ್ಬಿತು. ಆದರೂ ದೇವಸ್ಥಾನದಲ್ಲಿ ಕಳುವಾದ ವಸ್ತುಗಳು ಸಿಕ್ಕುವುದಿಲ್ಲವೆಂದೂ, ನಾರಾಯಣರಿಗೆ ನಿಧಿನಿಕ್ಷೇಪ ದೊರೆಯುವುದಿಲ್ಲವೆಂದೂ ಮತ್ತು ಅವರ ತಂದೆಗೆ ಮರಣಾನಂತರ ಉತ್ತಮ ಗತಿ ಪ್ರಾಪ್ತವಾಗುವುದೆಂದೂ ಭವಿಷ್ಯ ಸೂಚನೆಯಾಯಿತು.

ಆದರೆ ಅಂಜನವನ್ನೇ ಸದಾ ನಿಟ್ಟಿಸಿ ನೋಡಿ ಭವಿಷ್ಯ ಹೇಳುತ್ತಿದ್ದ ರಂಗನಾಯಕಮ್ಮನ ಸ್ಥಿತಿ ಮಾತ್ರ ನಾಯಿಪಾಡಾಯಿತು. ರಾತ್ರಿ ಮಲಗಿದರೆ ದೆವ್ವ ಪಿಶಾಚಿಗಳು ಕಾಡತೊಡಗಿದವು. ಒಂದು ನಿಮಿಷವೂ ನಿದ್ದೆಯಿಲ್ಲ. ಸುತ್ತಲೂ ಅವು ನರ್ತಿಸುತ್ತಾ ಅವರನ್ನು ಹೆದರಿಸುತ್ತಾ, ಅರಚುತ್ತಾ, ಕಿರಿಚುತ್ತಾ, ದಾಂಧಲೆ ಎಬ್ಬಿಸುತ್ತಿದ್ದುವು. ರಂಗನಾಯಕಮ್ಮನನ್ನು ನುಂಗಿಬಿಡುತ್ತೇವೆಂದು ಆಗಾಗ ಹೆದರಿಸುತ್ತಿದ್ದವು. ಕೂಗಬೇಕೆಂದರೆ ಭಯದಿಂದಾಗಿ ಆಕೆಯ ಗಂಟಲೇ ಸೇದಿಹೋದಂತಾಗುತ್ತಿತ್ತು. ಅವುಗಳ ಪ್ರಭಾವದಿಂದ ಯಜಮಾನರನ್ನು ಎಬ್ಬಿಸಬೇಕೆಂದುಕೊಂಡರೆ ಅವು, ತಾವು ಅವರನ್ನು ಆಗಲೇ ವಶಪಡಿಸಿಕೊಂಡು ಆಗಿದೆಯೆಂದೂ, ಅವರನ್ನು ಎಬ್ಬಿಸಿದರೂ ಅವರಿಂದ ಯಾವ ಪ್ರಯೋಜನವೂ ದೊರಕದೆಂದೂ ಹೇಳುತ್ತಾ ಇನ್ನಷ್ಟು ಪೀಡಿಸಲಾರಂಭಿಸಿದವು. ನಾರಾಯಣರನ್ನು ಕೇಳಿದಾಗ ಅವರೂ ಇದೇ ರೀತಿ ಪಿಶಾಚಿಗಳು ತಾವು ಸುದರ್ಶನ ಜಪಕ್ಕೆ ಕುಳಿತರೆ ವಿಘ್ನವನ್ನುಂಟು ಮಾಡುತ್ತಿವೆಯೆಂದೂ, ರಾತ್ರಿ ವೇಳೆ ರಂಗನಾಯಕಮ್ಮನಿಗೆ ಅವು ನೀಡುವ ಕೋಟಲೆಯನ್ನು ತಾವು ಅರಿತಿರುವುದಾಗಿಯೂ ಸ್ವಲ್ಪಕಾಲ ತಡೆದು ನೋಡುವಂತೆಯೂ ಸಮಾಧಾನ ಹೇಳಿದರು. ಆಕೆಗೆ ತನ್ನ ಕಷ್ಟವನ್ನು ಇತರರಿಗೆ ಹೇಳಿಕೊಳ್ಳುವಂತಿಲ್ಲ ಎನ್ನುವ ಪರಿಸ್ಥಿತಿಗೆ ಬಂದಿತು. ಮಕ್ಕಳನ್ನು ತಬ್ಬಿಕೊಂಡು ಗೋಳೋ ಎಂದು ಅಳುವುದೊಂದೇ ಮಾರ್ಗ ಆಕೆಗೆ ಉಳಿಯಿತು. ಈ ತೊಂದರೆಯನ್ನು ಅನುಭವಿಸುತ್ತಾ ದಿನದಿನಕ್ಕೆ ದೇಹ ಕೃಶವಾಗಲಾರಂಭಿಸಿತು. ಆಹಾರವನ್ನು ತಿನ್ನಲೂ ಆ ದೆವ್ವಭೂತಗಳು ಅಡ್ಡಿಪಡಿಸಿದ್ದವು. ಮಹಾಲಕ್ಷ್ಮಿಗೆ ಮೊರೆ ಹೋಗುವುದೊಂದೆ ಈಗ ಉಳಿದಿರುವ ಮಾರ್ಗ ಎಂದು ಆಕೆಗನ್ನಿಸಿತು.

ಒಂದು ರಾತ್ರಿಯಂತೂ ರಾಮಸ್ವಾಮಿಗಳು ಮೈಸೂರಿಗೆ ಹೋಗಿದ್ದಾಗ ಈ ದೆವ್ವ ಭೂತಗಳ ದಾಂಧಲೆ ವಿಪರೀತವಾಯಿತು. ಮನೆಯಲ್ಲಿ ರಂಗನಾಯಕಮ್ಮ ಅವರ ಮಕ್ಕಳು ಮಲಗಿದ್ದಾಗ ಆ ಗಣಗಳು ಆಕೆಯನ್ನು ತಿಂದು ಮುಗಿಸುವುದಾಗಿಯೂ, ಮನೆಗೆ ಬೆಂಕಿ ಹಚ್ಚುವುದಾಗಿಯೂ, ಎಲ್ಲರನ್ನು ನಾಶ ಮಾಡಿಬಿಡುವುದಾಗಿಯೂ ಆಕೆ

ಯನ್ನು ಹೆದರಿಸಹತ್ತಿದವು. ಆಕೆಗೋ ಹೆದರಿಕೆ, ನಡುಕ, ಬೆವರು, ಅತೀವ ಗಾಬರಿಯಿಂದಾಗಿ ನೀರಡಿಕೆ. ನೀರು ಕೇಳಿದರೆ ಆ ದೆವ್ವಗಳು ಅವಳನ್ನು ಮತ್ತಷ್ಟು ಕಾಡಿಸಲಾರಂಭಿಸಿದವು. ಆಕೆ ಮಹಾಲಕ್ಷ್ಮಿಯನ್ನೇ ಧ್ಯಾನಿಸುತ್ತಾ ಮೂರ್ಛೆ ಹೋದರು.

ಆಗ ಆಕೆಗೆ ಮಹಾಲಕ್ಷ್ಮಿಯು ಶ್ರೀಲೋಕದ ವೈಭವದೊಡನೆ ತನ್ನ ಪರಿವಾರ ಸಮೇತ ಪ್ರತ್ಯಕ್ಷಳಾಗಿ, ನೀರನ್ನು ಕರುಣಿಸಿ, ಅಭಯವನ್ನು ನೀಡಿ, ಒಂದು ಕೈಯಲ್ಲಿ ಸುವರ್ಣ ವೃಷ್ಟಿಯನ್ನೂ ಮತ್ತೊಂದು ಕೈಯಲ್ಲಿ ಅಭಯ ಮುದ್ರೆಯನ್ನೂ ತೋರಿಸುತ್ತಾ ರಂಗನಾಯಕಮ್ಮನಿಗೆ ಸತತ ಐಶ್ವರ್ಯ ಅಥವಾ ತನ್ನ ಅನನ್ಯ ಕೃಪಾಕಟಾಕ್ಷ ಇವುಗಳಲ್ಲಿ ಒಂದನ್ನು ಆರಿಸಿಕೊಳ್ಳಲು ಹೇಳಿದಳು. ರಂಗನಾಯಕಮ್ಮನಿಗೆ ಏನು ಬೇಡಬೇಕೆಂಬುದು ತಿಳಿಯಲಿಲ್ಲ. ಆಕೆ ಹೇಗಾದರೂ ಸರಿಯೆ, ತನ್ನ ಕುಟುಂಬವನ್ನು ಕಾಪಾಡಿ ಎಲ್ಲರೂ ಚೆನ್ನಾಗಿರುವಂತೆ ಅನುಗ್ರಹಿಸಲು ಬೇಡಿಕೊಂಡಳು. ಮಹಾಲಕ್ಷ್ಮಿಯು, "ತಥಾಸ್ತು" ಎಂದು ಹೇಳಿ, ತನ್ನ ಎದುರಿಗೆ ತಲೆ ಬಾಗಿ ನಿಂತಿದ್ದ ತಮ್ಮ ಭೃತ್ಯರಾದ ವಿಶ್ವಸೇನರಿಗೆ, "ನೀವು ಇಂದಿನಿಂದ ಈಕೆಯ ದೇಹದಲ್ಲಿ ನೆಲೆಸಿ ಈಕೆಯ ಸಂಸಾರವನ್ನು ರಕ್ಷಿಸಿರಿ" ಎಂದು ಅಣತಿ ಮಾಡಿ ರಂಗನಾಯಕಮ್ಮನ ಆತ್ಮವನ್ನು ಶ್ರೀಲೋಕಕ್ಕೆ ಒಯ್ದಳು.

ಮಾರನೇ ದಿವಸ ಬೆಳಿಗ್ಗೆ ರಂಗನಾಯಕಮ್ಮನವರು ಮತ್ತೆ ತಮ್ಮ ದೈನಂದಿನ ಕಾರ್ಯಗಳಲ್ಲಿ ತೊಡಗಿದರೂ ಅವರ ಎಲ್ಲ ಕಾರ್ಯಗಳಲ್ಲೂ ಆ ಲಕ್ಷ್ಮಿಯ ದಾಸರ ಕೈವಾಡವೇ ಕಾಣಸುತ್ತಿದ್ದಿತೆಂದು ಬಲ್ಲವರ ಹೇಳಿಕೆ. 'ಆಕೆ'ಈಗ ಒಲೆಯನ್ನು ಹಚ್ಚಲೂ ಕಷ್ಟ ಪಡುವುದಿಲ್ಲ, ಅಡುಗೆ ಒಂದು ನಿಮಿಷದಲ್ಲಿ ಸಿದ್ಧ. ಕೆಲಸಗಳೆಲ್ಲಾ ಲೀಲಾಜಾಲವಾಗಿ ಮುಗಿದು ಬಿಡುವುದು. ಆಕೆಯ ಮುಖದಲ್ಲಿ ಆಯಾಸವೇ ಕಾಣಿಸುವುದಿಲ್ಲ. ಅಡುಗೆಯಲ್ಲಂತೂ ಅದೇ ಒಂದು ರುಚಿ, ಶುಚಿ, ಓರಣ, ಅಚ್ಚುಕಟ್ಟು. ಅದುವರೆಗೆ ರಂಗನಾಯಕಮ್ಮನ ಕಾರ್ಯದಲ್ಲಿ ತೋರಿ ಬರುತ್ತಿದ್ದ ರೀತಿಗಿಂತ ಭಿನ್ನತೆ ಸ್ಪಷ್ಟವಾಗಿ ಕಂಡು ಬರುತ್ತಿತ್ತು. ಆಕೆಯ ಮುಖದಲ್ಲಿ ಆ ಆಚಾರ್ಯಪುರುಷ ವರ್ಚಸ್ಸು, ತೇಜಸ್ಸು ಒಡೆದುಕಾಣಿಸುತ್ತಿತ್ತಂತೆ!

## ಮುನಿಸು

ಇರುಳಿಡೀ
ಶಶಿಯ
ಸಾಂಗತ್ಯದಲ್ಲಿ
ಮೆರೆದ
ಧರೆಗೆ
ಕಾದಿತ್ತು
ಕುಪಿತ
ರವಿಯ
ಅಗ್ನಿ
ಧಾರೆ!!



✷ ಮ.ಶ್ರೀಮುರಳಿಕೃಷ್ಣ

ಅಂದಿನವರೆಗೂ ಕಾಡುತ್ತಿದ್ದ ಭೂತಗಳೆಲ್ಲವೂ ಎಲ್ಲಿ ಮಾಯವಾದುವೋ ಯಾರಿಗೆ ಗೊತ್ತು? ಅಂತೂ ಅವುಗಳ ಕಾಟಕ್ಕೆ ಮುಕ್ತಿ ಬಂದಿತ್ತು.

ಅಂಜನದಲ್ಲಿ ಕೂಡ ಈಗ ವಿಷ್ಣುದೂತರು, ಆಳ್ವಾರುಗಳು, ಆಚಾರ್ಯರುಗಳು ದರ್ಶನ ನೀಡಿ ರಂಗನಾಯಕಮ್ಮನೊಡನೆ ಸಂಭಾಷಣೆ ನಡೆಸಲಾರಂಭಿಸಿದರು. ಆಕೆಯ ಮೂಲಕ ಉಪದೇಶ ನೀಡಲಾರಂಭಿಸಿದರು. ಅವರು ಆಕೆಯ ಮೇಲೆ ಆವಾಹನೆಗೊಂಡಾಗ ಆಕೆಯ ಬಾಯಿಯಿಂದ ನಿರರ್ಗಳವಾಗಿ ಸಂಸ್ಕೃತ ಭಾಷೆ, ಸ್ತೋತ್ರಗಳು, ಗ್ರಾಂಥಿಕ ತಮಿಳು ಭಾಷೆಯಲ್ಲಿ ಉಪದೇಶ, ಪಾಶುರಗಳು ಆಶ್ಚರ್ಯವೆನ್ನುವಂತೆ ಹೊರಬರುತ್ತಿದ್ದವು. ಆ ಆಳ್ವಾರ್ ಅಚಾರ್ಯರುಗಳ ಮೇಲೆ ಲಕ್ಷ್ಮಿಯ ದಾಸರು ಅತ್ಯುಚ್ಚ ಶೈಲಿಯಲ್ಲಿ ಶ್ಲೋಕಗಳನ್ನು ರಚಿಸಿ ಮಂಗಳಾಶಾಸನ ಮಾಡಲಾರಂಭಿಸಿದರು. ಹೀಗೆ ಸಂಸ್ಕೃತ, ತಮಿಳು ಸಾಹಿತ್ಯ, ಶ್ರೀ ವೈಷ್ಣವ ಸಿದ್ಧಾಂತ ಇವುಗಳ ಗಂಧವನ್ನೇ ಅರಿಯದ ರಂಗನಾಯಕಮ್ಮನ ಬಾಯಿಯಿಂದ ಓತಪ್ರೋತವಾಗಿ ಸ್ತೋತ್ರಗಳು, ಪಾಶುರಗಳು ಹೊರಬರುವುದನ್ನು ಕಂಡು ಎಲ್ಲರೂ ದಂಗಾದರು. ಆಕೆಯ ಮೇಲೆ ಭಯಭೀತಿಯಿಂದ

ಕೂಡಿದ ಭಕ್ತಿ ಉಂಟಾಯಿತು. ಅಲ್ಲದೆ ಆಕೆಯೀಗ ಒಂದು ರೀತಿಯ ತೀಕ್ಷ್ಣದೃಷ್ಟಿಯಿಂದ ಭಕ್ತಾದಿಗಳನ್ನು ನೋಡುತ್ತಾ ಹಲವು ನಿಮಿಷಗಳ ನಂತರ, "ನೀನು ಹಿಂದೆ ಹೀಗೆ ಮಾಡಿದ್ದೀಯೆ, ಅವರಿಗೆ ಅನ್ಯಾಯ ಮಾಡಿದ್ದೀಯೆ. ಅದರ ಫಲ ಈಗ ಅನುಭವಿಸುತ್ತಿದ್ದೀಯೋ", ಎಂದು ಅವರು ಎಂದೋ ಎಸಗಿದ ತಪ್ಪನ್ನೂ ಅವರೇ ಮರೆತು ಬಿಟ್ಟಿರುವ ಘಟನೆಯನ್ನೂ ಈಗ ನಿಸ್ಸಂಕೋಚವಾಗಿ ಎಲ್ಲರೆದುರಿಗೆ ಎತ್ತಿ ತೋರಿಸಿದಾಗ ಆ ವ್ಯಕ್ತಿಗೆ ಆಶ್ಚರ್ಯ ಭಯಭಕ್ತಿಗಳು ಸಹಜವಾಗಿಯೆ ಉಂಟಾಗುತ್ತಿದ್ದವು. ಅಂತೂ ಹೇಗಾದರೂ ಇರಲಿ, ಈ ರೀತಿಯ ಉಪದೇಶ, ವಿಚಿತ್ರ ವ್ಯಾಪಾರಗಳಿಂದ ಜನರು ಆಕರ್ಷಿಸಲ್ಪಟ್ಟು ಆಕೆಯ ಭಕ್ತರಾಗತೊಡಗಿದರು. ರಾಮಸ್ವಾಮಿಗಳ ಬಂಧುವರ್ಗಕ್ಕೆ ಆಕೆಯ ಮೇಲೆ ಅತ್ಯಂತ ಭಕ್ತಿ ಉತ್ಪನ್ನವಾಯಿತು. ಆಕೆಯು ರಾಮಸ್ವಾಮಿಗಳ ಚಿಕ್ಕಪ್ಪ, ನಾರಾಯಣ ಇತರರೊಡನೆ ಅತ್ಯಂತ ಪ್ರೌಢ ರೀತಿಯಲ್ಲಿ ಶ್ರೀ ವೈಷ್ಣವ ಸಿದ್ಧಾಂತದ ಬಗೆಗೆ ಚರ್ಚೆ ನಡೆಸುತ್ತಿದ್ದುದು ಎಲ್ಲರಿಗೂ ಆಶ್ಚರ್ಯವನ್ನೇ ಉಂಟುಮಾಡಿತು. ಇದು ರಂಗನಾಯಕಮ್ಮನ ವ್ಯಾಪಾರವಲ್ಲ, ಅವಳ ಮೈಯಲ್ಲಿ ಯಾರೋ ಮಹಾತ್ಮರು ಸೇರಿಕೊಂಡು ನಡೆಸುತ್ತಿರುವ ಪವಾಡ ಎಂದು ಜನ ಆಡಿಕೊಳ್ಳತೊಡಗಿದರು. ಎಲ್ಲರೂ ಅವಳ ಕಾಲಿಗೆ ನಮಸ್ಕರಿಸಹತ್ತಿದರು. ಅವಳನ್ನೂ ಲಕ್ಷ್ಮಿಯನ್ನೂ ಸ್ತೋತ್ರಾದಿಗಳನ್ನೂ ಹೇಳುತ್ತಾ ಪೂಜೆ ಮಾಡಲಾರಂಭಿಸಿದರು.

ಆಚಾರ್ಯರ ಆದೇಶದಂತೆ ಅಂಜನವನ್ನು ಕಲ್ಯಾಣಿಯಲ್ಲಿ ವಿಸರ್ಜಿಸಲಾಯಿತು. ರಾಮಸ್ವಾಮಿಗಳ ಮನೆ ಈಗ ಎಲ್ಲರಿಗೂ ಆಕರ್ಷಣೆಯ ಕೇಂದ್ರವಾಯಿತು. ದಿನವಹಿ ಎರಡು ವೇಳೆಯೂ ಪೂಜೆ ಪುನಸ್ಕಾರ ಸ್ತೋತ್ರಾನು ಸಂಧಾನಗಳು ನಡೆಯುತ್ತಾ ಮನೆಯಲ್ಲಿ ಪವಿತ್ರ ವಾತಾವರಣ ಉತ್ಪನ್ನವಾಯಿತು. ಹಿಂದೆ ಆ ಸಂಸಾರವನ್ನು ತಿರಸ್ಕಾರ ಭಾವದಿಂದ ನೋಡುತ್ತಿದ್ದ ಬಂಧುಗಳೆಲ್ಲ ಈಗ ಒಂದೇ ಮನೆಯವರಂತೆ ಒಗ್ಗಟ್ಟು, ಒಮ್ಮನಸ್ಸಿನಿಂದ ಸೇರಿಕೊಂಡು ಲಕ್ಷ್ಮಿಪೂಜೆ ಮತ್ತು ರಂಗನಾಯಕಮ್ಮನ ಗೃಹಕೃತ್ಯದಲ್ಲಿ ಪಾಲ್ಗೊಳ್ಳುತ್ತಾ ಇರತೊಡಗಿದರು. ಆಕೆಯಿಂದ ಹೊರಹೊಮ್ಮುತ್ತಿದ್ದ ಉಪದೇಶ, ಸ್ತೋತ್ರಾದಿಗಳನ್ನೆಲ್ಲಾ, ಚಾಚೂ ತಪ್ಪದಂತೆ ನಾರಾಯಣರು ಬರೆದಿಡಲಾರಂಭಿಸಿದರು. ರಂಗನಾಯಕಮ್ಮನಲ್ಲಿ ಆವಾಹನೆಗೊಂಡಿದ್ದ ಆ ದಾಸರು ಗೃಹಕಾರ್ಯವನ್ನು ನಿರ್ವಹಿಸಿಕೊಂಡಿದ್ದರೂ ತಿಂಗಳುಗಟ್ಟಲೆ ಆಹಾರವನ್ನೇ ತೆಗೆದುಕೊಳ್ಳದೆ ಇದ್ದದ್ದು ಮತ್ತೊಂದು ದೊಡ್ಡ ಪವಾಡವೇ ಆಯಿತು! ಅವಳ ಮೈ ಕೃಶವಾಗದೇ ಮತ್ತಷ್ಟು ಪುಷ್ಟಿಯಾಗುತ್ತಿದ್ದುದು ಇದಕ್ಕೆ ಮೆರುಗಿಟ್ಟಂತಾಯಿತು!

ಏತನ್ಮಧ್ಯೆ ನಾರಾಯಣ, ರಾಮಸ್ವಾಮಿಗಳ ಚಿಕ್ಕಪ್ಪ ಇವರಿಗೆ ಉದಯಿಸುತ್ತಿದ್ದ ಜಿಜ್ಞಾಸೆಗಳಿಗೆ ಸಮಾಧಾನಕರವಾದ ಉತ್ತರವು ರಂಗನಾಯಕಮ್ಮ ಉರುಫ್ ಲಕ್ಷ್ಮಿಯ ದಾಸರಿಂದ ದೊರೆಯುತ್ತಿದ್ದುದು ಅವರಿಗೆ ಮತ್ತಷ್ಟು ಭಕ್ತಿ, ನಂಬಿಕೆ ಹೆಚ್ಚಲು ಕಾರಣವಾದವು. ಆಕೆಯ ಮೇಲೆ ಆಳ್ವಾರ್ ಆಚಾರ್ಯರುಗಳು ಆವಾಹನೆಗೊಂಡಾಗಲಂತೂ ಆಕೆ ಅವರ ವಾಗ್ಧೋರಣೆಯಂತೆಯೇ ಮಾತನಾಡುತ್ತಾ ಎಲ್ಲರನ್ನೂ ಬೆರಗುಗೊಳಿಸುತ್ತಿದ್ದಳಂತೆ!

ಹೀಗೆ ಆಕೆಯ ಮಹಿಮೆ ಊರೂರಿಗೂ ಹಬ್ಬಿತು. ಆಕೆಯ ಸೋದರಿಯರು ಆಕೆ ಉಪವಾಸವಿರುವುದನ್ನೂ ಆಕೆಯ ಚರ್ಯೆಯನ್ನೂ ಕೇಳಿ ಆಶ್ಚರ್ಯ, ಆತಂಕ ಹೊಂದಿ ಆಕೆಯನ್ನು ನೋಡಲು ಓಡಿ ಬಂದರು. ಅವರೆಲ್ಲರೂ ಲಕ್ಷ್ಮಿಯನ್ನು, ಲಕ್ಷ್ಮಿಯ ದಾಸರನ್ನು ತಮ್ಮ ಸಹೋದರಿಗೆ ಏನೊಂದು ತೊಂದರೆ ಮಾಡದೇ ಇರಬೇಕೆಂದೂ, ಉಪವಾಸ ಮುಕ್ತಾಯ ಮಾಡಬೇಕೆಂದೂ ಕಳಕಳಿಯಿಂದ ಬಿನ್ನವಿಸಿಕೊಂಡರು. ಅವರೆಲ್ಲರ ಮೊರೆಯು ಲಕ್ಷ್ಮಿಗೆ ಕೇಳಿಸಿತೋ ಎಂಬಂತೆ ರಂಗನಾಯಕಮ್ಮ ಉರುಫ್ ಲಕ್ಷ್ಮಿಯ ದಾಸರು ಮೊದಲಿನಂತೆ ಆಹಾರ ಸೇವಿಸಲಾರಂಭಿಸಿದರು.

ಕೆಲವೊಮ್ಮೆ ಲಕ್ಷ್ಮಿಯ ದಾಸರು ಶ್ರೀಲೋಕಕ್ಕೆ ತೆರಳುವಾಗ ಲಕ್ಷ್ಮಿಯ ರೂಪಾಂತರದ ಗೃಹಲಕ್ಷ್ಮಿ ಎಂಬಾಕೆಯು ರಂಗನಾಯಕಮ್ಮನಲ್ಲಿ ಆವಾಹನೆಗೊಳ್ಳುತ್ತಿದ್ದಳಂತೆ. ಆ ಕಾಲದಲ್ಲಿ ಆಕೆ ಮೌನವಾಗಿಯೇ ಇದ್ದು ಆಚಾರ್ಯರು ಬಂದು ಮತ್ತೆ ಸೇರಿಕೊಳ್ಳುವವರೆಗೂ ೫-೬ ದಿವಸಗಳ ಪರ್ಯಂತ ಕಾರ್ಯನಿರ್ವಹಣೆ ಮಾಡುತ್ತಿದ್ದಳಂತೆ.

ಆಚಾರ್ಯರು ರಂಗನಾಯಕಮ್ಮನ ದೇಹವನ್ನು ಪ್ರವೇಶಿಸಿ ಉಪದೇಶಾದಿಗಳನ್ನು ನೀಡಲಾರಂಭಿಸಿದ

ದಿನವನ್ನು ಆವಿರ್ಭಾವೋತ್ಸವವೆಂದು ಪ್ರತಿ ವರ್ಷವೂ ರಂಗನಾಯಕಮ್ಮ ಉರುಫ್ ಲಕ್ಷ್ಮಿಯ ದಾಸರ ಭಕ್ತರು ವಿಜೃಂಭಣೆಯಿಂದ ಆಚರಿಸುತ್ತಿದ್ದುದನ್ನು ನಾನು ನೋಡಿದ್ದೇನೆ.

ಪೂಜೆ ಪುನಸ್ಕಾರಾದಿಗಳು ಪ್ರತಿದಿನವೂ ಎರಡು ವೇಳೆಯೂ ನಡೆಯುತ್ತಿದ್ದು, ಭಕ್ತಾದಿಗಳೂ ಬಂಧು ಬಾಂಧವರೂ ಸಂಭ್ರಮಿಸುತ್ತಿದ್ದರು. ರಂಗನಾಯಕಮ್ಮನಿಗೆ ಪಾದ ಪೂಜೆಯನ್ನು ಪಾದಕಾಣಿಕೆಯನ್ನು ಮಾಡಿ ಅರ್ಪಿಸಿ ಕೃತಾರ್ಥ ಭಾವನೆ ತಾಳುತ್ತಿದ್ದರು. ಅನೇಕರು ಅವಳನ್ನು ತಮ್ಮ ತಮ್ಮ ಮನೆಗಳಿಗೆ ಕರೆದೊಯ್ದು ಪೂಜೆ ಮಾಡಿ ಕಾಣಿಕೆಗಳೊಂದಿಗೆ ವಾಪಸ್ಸು ಕಳುಹಿಸಿಕೊಡುತ್ತಿದ್ದರು. ಊರೂರಿಗೂ ಭಕ್ತಾದಿಗಳು ಕರೆದೊಯ್ದು ಹಲವು ದಿನ ತಮ್ಮಲ್ಲಿ ಉಳಿಸಿಕೊಂಡು ಪೂಜಿಸಿ, ಕಳುಹಿಸಿ ಕೊಡುತ್ತಿದ್ದರು. ಹಲವರ ಇಷ್ಟಾರ್ಥಗಳು ನೆರವೇರಿದವು. ಹಲವರ ವಾಸಿಯಾಗುವುದಿಲ್ಲವೆಂದು ಭಾವಿಸಲ್ಪಟ್ಟ ಕಾಯಿಲೆಗಳು ವಾಸಿಯಾದವು. ಕೆಲವರ ಕಷ್ಟ ಪರಿಹಾರವಾಗಿ ಅವರು ಉತ್ತಮ ಸ್ಥಿತಿಗತಿಗಳನ್ನು ಹೊಂದಿದ್ದೇ ಈ ಭಕ್ತಾದಿಗಳ ಸಂಖ್ಯೆಯ ಬೆಳವಣಿಗೆಗೆ ಕಾರಣವಾಯಿತು. ದಿಲ್ಲಿ, ಮದ್ರಾಸ್, ಮುಂಬಯಿಯಂತಹ ದೂರದ ಸ್ಥಳಗಳಿಂದಲೂ ತಮ್ಮಲ್ಲಿ ಇವರನ್ನು ಇವರ ಸಂಸಾರದವರನ್ನೂ ಕರೆದೊಯ್ದು ಮರ್ಯಾದೆ ಮಾಡಿ, ಉದಾರ ದ್ರವ್ಯವನ್ನು ಕಾಣಿಕೆಯ ರೂಪದಲ್ಲಿ ಅರ್ಪಿಸಿದರು.

ರಂಗನಾಯಕಮ್ಮನ ಕುಟುಂಬದ ಆರ್ಥಿಕ ಪರಿಸ್ಥಿತಿ ಸುಧಾರಿಸಿತು. ಅವರ ಮಕ್ಕಳು ದೊಡ್ಡವರಾಗಿ ಕಾಲೇಜಿನಲ್ಲಿ ಓದುವ ಕಾಲ ಬಂದಿತು. ರಂಗನಾಯಕಮ್ಮನ ಭಗಿನಿಯರು ಬೆಂಗಳೂರಿನಲ್ಲಿ ದೊಡ್ಡ ಮನೆಯೊಂದನ್ನು ಬಾಡಿಗೆಗೆ ಹಿಡಿದು ಒಟ್ಟಾಗಿ ಇರತೊಡಗಿದರು. ರಂಗನಾಯಕಮ್ಮನ ಕುಟುಂಬದವರನ್ನೂ ಅಲ್ಲಿಗೇ ಕರೆಸಿಕೊಂಡರು. ರಾಮಸ್ವಾಮಿಗಳಿಗೆ ಈ ಎಲ್ಲ ಓಡಾಟದ ದೆಸೆಯಿಂದ ಮತ್ತು ದಿನನಿತ್ಯ ಹೆಚ್ಚಿನ ವೇಳೆಯನ್ನು ದೇವತಾರಾಧನೆಯಲ್ಲಿ ಕಳೆಯುತ್ತಿದ್ದುದರಿಂದ ಅವರು ಪಾಠಶಾಲೆಯ ಕೆಲಸಕ್ಕೆ ರಾಜೀನಾಮೆಯಿತ್ತು ಬೆಂಗಳೂರಿಗೇ ಬಂದುಬಿಟ್ಟರು.

ಗಂಡುಮಕ್ಕಳು ಕಾಲೇಜು ಸೇರಿದರು. ಹೆಣ್ಣು ಮಕ್ಕಳಿಗೆ ಮದುವೆಯಾಗಿ ಗಂಡನ ಮನೆ ಸೇರಿಕೊಂಡರು. ರಂಗನಾಯಕಮ್ಮನ ಸೋದರಿಯರ

### ಅನುಬಂಧ

**ರಂಗನಾಯಕಮ್ಮ ಉರುಫ್ ಲಕ್ಷ್ಮಿಯ ದಾಸರಿಂದ ಆವಿರ್ಭವಿಸಿದ ಸಂಸ್ಕೃತ, ತಮಿಳು ಸಾಹಿತ್ಯದ ಸ್ವಲ್ಪ ಭಾಗಗಳನ್ನು ವಾಚಕರ ಅವಗಾಹನೆಗಾಗಿ ಇಲ್ಲಿ ಕೊಟ್ಟಿದ್ದೇನೆ.**

**ಗದ್ಯದಂಡಕ ಶೈಲಿಗೆ ಒಂದು ಉದಾಹರಣೆ-**

**"ಕತ್ರಚ ದ್ರೋಣ್ಯಾಂ ರಜತದ್ರವ ಭಾಸುರಾಂ ಪ್ರತಿತರಂಗನಿಕರ ಸಮುತ್ಸರ್ಪಿತ ಪ್ರಭಾ ಪ್ರಕಾಶೋತ ಕಂಠ ನೀಲಕಂಠ ವಿವಲಿತ ಕಂಠ ಸ್ನಿಗ್ಧ ನೀಲವರ್ಣ ಶ್ಯಾಮಲಿತ ಸಲಿಲಾಂ, ಸೌದಾಮಿನೀ ಸಂಚಾರ ಚಾರಮದ ಶೀಮನೀಮ ಸಮಾಧಾನ ದತ್ತಾವಧಾನ ನಾನಾವಿಧ ವಿದ್ಯೋತ ಮಾನಸಲಿಲ ಚರ ಪತತ್ರಿ ವ್ರಾತ ಕಲನಾದ ಶಬ್ದ ಮಯಾನಾಂ....."ಇತ್ಯಾದಿ.**

**ವೇದ ಶೈಲಿಯ ವಿಚಾರ ವಾಹಿನಿ**

*ತಸ್ಮಾದಿದ ಮುಭಿದೀಯತೇ| ಆ ಶ್ಚೈವ ನಿಧಾನಂಬಂಧಸ್ಯ*
*| ಆಕ*
*ಯಾ ಕ್ರೋಧಃ ತೀಭಃ ಮೋಹಃ| ಕತೋ ಕೃತ್ಯಕರಣಾಂ|*
*ತತಃಕರಣ*
*ತ್ರಯಭಿನ್ನತಾ| ತತೋಹಿಂಸಾ| ತತೋವಿನಿಪಾತಃ| ಪುನಶ್ಚಜನನ*
*ಮರಣಚಕ್ರಾಭಿಪ್ರಾತಃ|*

**ಶ್ಲೋಕಕ್ಕೆ ಉದಾಹರಣೆ**

**ಯದುಗಿರಿ ತಟಭಾಗೇ ಪಾರಿಜಾತ ಪ್ರರೂಢಃ**
**ಭವಪಥಗತಜಂತು ಶ್ರಾಂತಿಕಾಂತಿ ಪ್ರದಾತಾ**
**ಅಮೃತ ವಿತರಣಾಯ ಸ್ವಾಶ್ರಿತೇಭ್ಯ ಸ್ಸತತ್ವಾನ್**
**ಜಯತಿ ನಿಗಮ ವೇಟ್ಯೋಕೋಪಿ ಜೀಮೂತ ವಿಷಃ**

**ತಮಿಳು ಪಾಶುರ ಶೈಲಿಗೆ ಉದಾಹರಣೆ**

*ಇಂಗು ಮಂಗು ಮೆಂಗುಕಾಣ್ಬಾಯ್ ತಿರುಮಾಲೇ*
*ಪೀದಹವಾಡೈಯುಡುತ್ತಾ ಓಡಾನೇ*
*ಶೆಂಗುಳತ್ತಿ ಕೈಯ್ಯಿಲ್ ಪಿಡಿತ್ತು ತುಪ್ಪುರುವಲ್ ಶೆಯ್ದೆನ್‌ಪಿನ್*
*ತೊಡರ್ನ್ದು ವಂದಾಯನ್ನೋ*
*ತಿಂಗಳ್ ಕಳಿನ್ದ ಮಾರ ನೆನ್ನೆಂಜ್ಜಕ್ಕೋಯಿಲಾಕ್ಕ ಪುಗುನ್ದು*
*ನಿನ್ನಾಯನ್ನೋ*
*ಎಂಬುಲಪ್ಪೋಗಾ ಮಲಿಸ್ಸತ್ತಾಲ್ ತಳುವಿ ಕೊಂಡಿಂಗೇ*
*ಇರುದ್ದಾಯೋ|||*

ಮಕ್ಕಳಿಗೂ ಒಳ್ಳೆಯ ಓದು, ಒಳ್ಳೆಯ ಕಡೆ ಗಂಡಂದಿರು ದೊರೆತು ಅವರ ಸ್ಥಿತಿಗತಿಗಳೂ ಸುಧಾರಿಸಿದವು. ಕಾಲಕ್ರಮದಲ್ಲಿ ವಿದ್ಯಾಭ್ಯಾಸ ಪೂರೈಸಿ ರಂಗನಾಯಕಮ್ಮನವರ ಮತ್ತು ಅವರ ಭಗಿನಿಯರ ಗಂಡುಮಕ್ಕಳೂ, ಉನ್ನತ ಕಾರ್ಯಗಳಿಗೆ ಸೇರಿಕೊಂಡರು. ಬೆಂಗಳೂರಿನಲ್ಲಿ ಈಗ ಲಕ್ಷ್ಮೀ ಪೂಜೆ, ಲಕ್ಷ್ಮಿಯ ದಾಸರ ಪೂಜೆಗಳು ನಡೆಯುತ್ತ ಬಂದರೂ ಮೇಲುಕೋಟೆಯ ವೈಭವವನ್ನು ಅದು ಕಳೆದುಕೊಂಡಿತು ಎನ್ನಬೇಕು.

ಕಾಲಕ್ರಮದಲ್ಲಿ ರಾಮಸ್ವಾಮಿಗಳ ಸಾಹಿತ್ಯಕ್ಕೂ ಪುರಸ್ಕಾರ ದೊರೆತು ಕೇಂದ್ರ ಸರ್ಕಾರ, ರಾಜ್ಯ ಸರ್ಕಾರಗಳ ಪ್ರಶಸ್ತಿಗಳು ದೊರೆತವು. ಮಾಸಾಶ ನವೂ ದೊರೆಯಲಾರಂಭಿಸಿತು. ಹೀಗೆ ಎಲ್ಲರ ಪರಿಸ್ಥಿತಿಯೂ ಉತ್ತಮವಾಯಿತು. ಲಕ್ಷ್ಮಿಯ ಅನುಗ್ರಹ, ಆಕೆ ಕೈಬಿಡಲಿಲ್ಲ!

ಮನೆಗೆ ಸೊಸೆಯಂದಿರು ಬಂದರು. ಸೋದರಿಯರ ಮಕ್ಕಳಿಗೂ ಹೆಂಡಂದಿರು ಬಂದರು. ಸಂಸಾರ ದೊಡ್ಡದಾಯಿತು. ಮಕ್ಕಳಿಗೂ ಬೇರೆ ಬೇರೆ ಊರಿಗೆ ವರ್ಗವಾಯಿತು. ಸೊಸೆಯಂದಿರೂ ಕೆಲಸಕ್ಕೆ ಸೇರಿದರು. ಎಲ್ಲರಿಗೂ ವಯಸ್ಸಾಯಿತು. ಮನೆಗೆಲಸ ಮಾಡುವ ಜನ ಕಡಿಮೆಯಾಯಿತು. ಸ್ವಂತ ಮನೆಗಳನ್ನು ಮಾಡಿಕೊಂಡು ಎಲ್ಲ ಮಕ್ಕಳೂ ಬೇರೆ ಬೇರೆ ಆದರು. ಹೀಗಾಗಿ ಮೊದಲಿನ ಪೂಜೆ ಪುನಸ್ಕಾರಾದಿಗಳಲ್ಲಿ ಈಗ ಶ್ರದ್ಧೆ ಕಡಿಮೆಯಾಯಿತು. ಅಂತೂ ಅಂದಿನ ವೈದಿಕ ವಾತಾವರಣಕ್ಕೆ ಸಂಪೂರ್ಣ ತೆರೆಯೇ ಬಿದ್ದಿತು. ರಂಗನಾಯಕಮ್ಮನವರ ಮೈಮೇಲೆ ಈಗ ಮೊದಲಿನಂತೆ ದೇವರು, ಆಳ್ವಾರ್ ಆಚಾರ್ಯರ ಆವಾಹನೆ ಇಲ್ಲವಾಯಿತು. ಆದರೂ ಭಕ್ತಾದಿಗಳು ಅವರನ್ನು ಪೂಜಿಸಿ ಗೌರವಿಸುವುದನ್ನು ನಿಲ್ಲಿಸಲಿಲ್ಲ.

ರಾಮಸ್ವಾಮಿಯ ದಂಪತಿಗಳು ವೃದ್ಧರಾದರು ಮಾತ್ರವಲ್ಲದೆ ಇಬ್ಬರೂ ಪಾರ್ಶ್ವವಾಯು ಪೀಡಿತರಾದರು. ಮನೆಯಲ್ಲಿ ಪೂಜೆಯಿಲ್ಲದೆ ಲಕ್ಷ್ಮಿಯನ್ನು ಹೇಗೆ ಉಳಿಸಿಕೊಳ್ಳುವುದು? ಎಂದು ಯೋಚನೆಯಾಗಿ ಒಂದು ಟ್ರಸ್ಟ್ ನಿಯಮಿಸಿ ತನ್ಮೂಲಕ ಒಂದು ಲಕ್ಷ್ಮಿಯ ದೇವಸ್ಥಾನವನ್ನು ನಿರ್ಮಿಸಲಾಯಿತು. ಇದು ರಾಮಸ್ವಾಮಿಯವರ ಬಹಳ ದಿವಸಗಳ ಕನಸು. ಇದಕ್ಕಾಗಿ ಅವರು ಊರೂರು ಅಲೆದು ಸಾಕಷ್ಟು ಹಣ ಶೇಖರಿಸಿದ್ದರು. ನಾಗಮಂಗಲದ ಶಿಲ್ಪಿಯೋರ್ವರು ವಿಗ್ರಹ ತಯಾರಿಸಿಕೊಟ್ಟರು. ಬೆಂಗಳೂರಿನ ಪ್ರಮುಖ ಭಾಗವೊಂದರಲ್ಲಿ ಲಕ್ಷ್ಮೀಮಂದಿರ ಕಟ್ಟಲ್ಪಟ್ಟು ಪೂಜೆ ಪುನಸ್ಕಾರಾದಿಗಳು ಈಗಲೂ ವೈಭವದಿಂದ ಜರುಗುತ್ತಿವೆ.

ಹೀಗೆ ಒಂದು ಪವಾಡ ತಾನಾಗಿಯೇ ಆವಿರ್ಭವಿಸಿ, ತಾನಾಗಿಯೇ ಪ್ರಕಾಶಿಸಿ, ತಾನಾಗಿಯೇ ಮುಂಕಾಗುತ್ತ ಬಂದು ಕಡೆಗೂ ತಾನಾಗಿಯೇ ಮಾಯವಾಗಿ ಹೋಯಿತು. ಈ ವೈಭವದ ಆದ್ಯಂತ ಕಾಲ ಸುಮಾರು ೨೦-೩೦ ವರ್ಷಗಳು. ೧೯೫೦ರ ಸುಮಾರಿಗೆ ಈ ಅದ್ಭುತ ಆವಿರ್ಭವಿಸಿತೆಂದು ನೆನಪು.

ಅಂತೂ ತಮಿಳು ಸಾಹಿತ್ಯ, ವೇದಾಂತ, ತತ್ವಗಳು, ಇವುಗಳ ಗಂಧವನ್ನೇ ಅರಿಯದ, ಓದು ಬರಹಗಳನ್ನೇ ಅರಿಯದ ಸಾಮಾನ್ಯ ಗೃಹಿಣಿಯೋರ್ವಳ ಬಾಯಿಂದ ಇದ್ದಕ್ಕಿದ್ದಂತೆ ಪ್ರೌಢವಾದ ಗ್ರಾಂಥಿಕ ತಮಿಳು ಸಂಸ್ಕೃತ ಸ್ತೋತ್ರಾದಿಗಳು ಹಲವಾರು ವರ್ಷಗಳವರೆಗೆ ಹೇಗೆ ಹೊರ ಹೊಮ್ಮಿದುವು ಎಂಬುದನ್ನು ನೆನೆಸಿಕೊಂಡಾಗ ಮೈ ರೋಮಾಂಚನಗೊಳ್ಳುತ್ತದೆ. ಇದು ಒಗಟಾಗಿ ಉಳಿಯುವ ಸಮಸ್ಯೆಯೇ ಸರಿ. ಯಾರೋ ಓರ್ವ ಸಿದ್ಧ ಪುರುಷರು ತಮ್ಮ ಸಾಧನೆಯ ಕಾಲದಲ್ಲಿಯೇ ಕಾಲವಶರಾಗಿ ಅವರ ಅತೃಪ್ತ ಆತ್ಮವು ತನ್ನ ಸಿದ್ಧಿಯನ್ನು ಪೂರೈಸಿಕೊಳ್ಳಲು ಈ ರೀತಿ ಪರಕಾಯ ಪ್ರವೇಶ ಮಾಡಿ ಕಾರ್ಯವನ್ನು ಮುಕ್ತಾಯ ಮಾಡಿಕೊಂಡಿರಬಹುದೆ? ಎಂದು ಅನುಮಾನ ಪಡುವವರೂ ಇಲ್ಲದಿಲ್ಲ. ಇದು ಹೇಗಾದರೂ ಇರಲಿ, ರಂಗನಾಯಕಮ್ಮನನ್ನು ಲಕ್ಷ್ಮಿಯ ಭೃತ್ಯರೆಂದೇ ಜನ ಇಂದಿಗೂ ಆದರಿಸುತ್ತಾರೆ. ಇತ್ತೀಚೆಗೆ ರಾಮಸ್ವಾಮಿಗಳು ಸ್ವರ್ಗಸ್ಥರಾದರು.

ನಡೆದ ಸಂಗತಿಯನ್ನು ನನ್ನ ಬುದ್ಧಿಗೆ ತೋಚಿದಂತೆ ತಮ್ಮೆಲ್ಲರ ಮುಂದಿರಿಸಿದ್ದೇನೆ. ನಂಬಿದರೆ ನಂಬಿ, ಬಿಟ್ಟರೆ ಬಿಡಿ. ಮಹಿಮೆಯನ್ನು ಕಳೆದುಕೊಂಡ ರಂಗನಾಯಕಮ್ಮನವರು ಪ್ರಾಚೀನ ಅವಶೇಷದಂತೆ ಈಗಲೂ ನಮ್ಮ ನಡುವೆ ಉಳಿದಿದ್ದಾರೆ. ●

# ಸೊಬಗಿನ ಸೂರಕ್ಕಿ

ಮಿತ್ರ ಕೆ.ಪಿ. ಸತ್ಯನಾರಾಯಣರ ಮನೆಗೊಮ್ಮೆ ಹೋಗಿದ್ದಾಗ ಅವರು ಮಗಳು ನೀತು ಹೇಳಿದಳು, ''ಮಾವ, ನಂಮನೆ ದಾಸವಾಳದ ಗಿಡಕ್ಕೆ ಯಾವಾಗ್ಲೂ ಎರಡು ಹಕ್ಕಿಗಳು ಬರುತ್ವೆ. ಹೂವಿನ ರಸ ಹೀರ್ಕೊಂಡು ಹೋಗುತ್ವೆ. ಅದಕ್ಕೇ ನಾವು ಆ ಹೂವನ್ನ ಕುಯ್ಯೋದೇ ಇಲ್ಲ.'' ಆ ಹಕ್ಕಿ ಯಾವುದಿರಬಹುದು? ಎಂದು ಯೋಚಿಸುತ್ತಿರುವಾಗಲೇ ಹೊರಗಡೆ ಚೀವ್ ಚೀವ್ ಸದ್ದಾಯಿತು. 'ಓ, ಹಕ್ಕಿಗ್ಳು ಬಂದ್ವು' ಅಂತ ನೀತು ಕೂಗಿದಳು. ವರಾಂಡದ ಕಿಟಕಿಯಿಂದ ಗಮನಿಸಿ ನೋಡಿದಾಗ ಸೂರಕ್ಕಿಗಳು ಹೂವಿನ ಮಕರಂದ ಹೀರಲು ಬಂದಿವೆ ಎಂದು ತಿಳಿಯಿತು.

ಹೂವುಗಳ ಪುಷ್ಪಪಾತ್ರೆಯನ್ನು ತನ್ನ ಉದ್ದನೆಯ ಕೊಕ್ಕಿನ ಸಹಾಯದಿಂದ ಸೂರೆ ಮಾಡಿ ಮಕರಂದವನ್ನು ಹೀರುವ ಸೂರಕ್ಕಿ ಬಹು ಚಟುವಟಿಕೆಯ ಹಕ್ಕಿ. ಮೇಲಿನಿಂದ ಮುಂದಿನಿಂದ, ಹಿಂದಿನಿಂದ, ಕೆಳಗಿನಿಂದ ಹೂವಿಗೆ ಲಗ್ಗೆಯಿಡುವ ಈ ಪಕ್ಷಿಗಳು ಪರಾಗಸ್ಪರ್ಶ ಕ್ರಿಯೆಗೂ ನೆರವಾಗುತ್ತವೆ. ಹಾರಾಡುತ್ತಾ ಅಂತರಿಕ್ಷದಲ್ಲೇ ನಿಂತು ಮಕರಂದ ಹೀರುವ ಅವುಗಳ ಕೌಶಲವನ್ನು ನೋಡಿಯೇ ನಂಬಬೇಕು.

ನೇರಳೆ ಸೂರಕ್ಕಿ **(purple sunbird)** ನೇರಳೆ ಪೃಷ್ಠದ ಸೂರಕ್ಕಿ **(Purple rumped sunbird)** ಮತ್ತು ಲೋಟೆನ್ಸ್ ಸೂರಕ್ಕಿ **(Loten's sunbird)** ಎಂಬ ಮೂರು ಬಗೆಯ ಸೂರಕ್ಕಿಗಳು ನಮ್ಮ ನಾಡಿನಲ್ಲಿ ನೋಡಸಿಗುತ್ತವೆ. ನೇರಳೆ ಸೂರಕ್ಕಿಯ ಮೈ ಪೂರ್ಣ ದಟ್ಟ ನೇರಳೆ ಬಣ್ಣದ್ದು; ನೇರಳೆ ಪೃಷ್ಠದ

✷ ಎಂ. ಶಶಿಧರ

✷ ಚಿತ್ರ: ಕೆ.ಪಿ. ಸತ್ಯನಾರಾಯಣ



ಸೂರಕ್ಕಿಯ ಕತ್ತು, ಬೆನ್ನು, ಬಾಲ ದಟ್ಟ ನೇರಳೆ ಬಣ್ಣ ಹೊಟ್ಟೆ ಮಾತ್ರ ನಸುಹಳದಿ; ಲೋಟೆನ್ಸ್ ಸೂರಕ್ಕಿಯು ನೋಡಲು ನೇರಳೆ ಸೂರಕ್ಕಿಯ ಹಾಗೆಯೆ ಇದ್ದರೂ ಅದರ ಕೊಕ್ಕು ಮತ್ತು ದೇಹದ ಗಾತ್ರ ಸ್ವಲ್ಪ ದೊಡ್ಡದು. ಈ ವರ್ಣನೆಗಳು ಗಂಡು ಹಕ್ಕಿಯದು ಮಾತ್ರ! ಈ ಮೂರೂ ಜಾತಿಯಲ್ಲೂ ಹೆಣ್ಣು ಹಕ್ಕಿಯ ಮೇಲ್ಭಾಗ, ಕತ್ತು ಹಸಿರಾಗಿದ್ದು, ಹೊಟ್ಟೆ ತಿಳಿ ಹಳದಿ ಬಣ್ಣದ್ದಾಗಿರುತ್ತದೆ. ಕೊಕ್ಕು ಕಪ್ಪಗೆ ಉದ್ದವಾಗಿದ್ದು ನೋಡುಗರ ಗಮನ ಸೆಳೆಯುತ್ತದೆ.

ಈ ಸೂರಕ್ಕಿಗಳು ಮಾನವನನ್ನು ಸ್ನೇಹಿತನೆಂದು ಯಾಕೆ ತಿಳಿಯುತ್ತವೋ ಗೊತ್ತಿಲ್ಲ. ಆದರೆ ಇವಕ್ಕೆ ಮಾನವನ ವಾಸಸ್ಥಳದ ಸನಿಹವಿರುವುದು ಇಷ್ಟ ಎಂಬುದರಲ್ಲಿ ಸಂಶಯವಿಲ್ಲ. ತಮ್ಮ ಸಣ್ಣ ಗಾತ್ರದ ದೇಹದಿಂದಾಗಿ ಆಕ್ರಮಣಕಾರಿ ಪಕ್ಷಿಗಳಿಂದ ರಕ್ಷಣೆ ಪಡೆಯಲು ಅವು ಮನೆಗಳ ಸುತ್ತಮುತ್ತ ಗೂಡು ಕಟ್ಟಿ ಮರಿಗಳನ್ನು ಬೆಳೆಸುತ್ತವೋ ಏನೋ.

ಹಲವು ವರ್ಷಗಳ ಹಿಂದೆ ನಮ್ಮ ಮನೆಯ ಉಪ್ಪರಿಗೆಯಿಂದ ನೇತು ಬಿದ್ದಿದ್ದ ತಂತಿಯೊಂದಕ್ಕೆ ನೇರಳೆ ಸೂರಕ್ಕಿಯೊಂದು ಗೂಡನ್ನು ಅಂಟಿಸುತ್ತಿತ್ತು! ತರಗೆಲೆ, ಕಸಕಡ್ಡಿಯಿಂದ ಮಾಡಿದ ಪುಟ್ಟಗೂಡು. ಒಮ್ಮೆ ಈ ಗೂಡು ದೀಪಾವಳಿಯ ಪಟಾಕಿಗಳ ಸಂಭ್ರಮಕ್ಕೆ ಬಲಿಯಾದರೂ ಮತ್ತದೇ ಸ್ಥಳದಲ್ಲಿ ಗೂಡುಕಟ್ಟಿ ಮರಿಗಳನ್ನು ಬೆಳೆಸಿದ್ದನ್ನು ನೋಡುವ ಅವಕಾಶ ನಮಗೆಲ್ಲ ಲಭಿಸಿತ್ತು. ಆದರೆ ನಂತರ ಒಂದು ಕೆರೆ ಹಾವು ಗೂಡಿನ ಬಳಿ ಬಂತು. ಆ ಸಮಯಗಲ್ಲಿ ಗೂಡು ಖಾಲಿಯಿದ್ದರೂ, ತಮ್ಮ ಗೂಡನ್ನು ಸರ್ವೆ ಮಾಡುತ್ತಿದ್ದ ಹಾವನ್ನು ಕಂಡ ಸೂರಕ್ಕಿಗಳು ಚೀರಾಟ ನಡೆಸಿದವು. ಮತ್ತೆಂದೂ ನಮ್ಮ ಮನೆಯ ಸನಿಹ ಸುಳಿಯುವ ಸಾಹಸವನ್ನೇ ಅವು ಮಾಡಲಿಲ್ಲ. ●




'ಚಿತ್ರಮಂಜರಿ'ಯಲ್ಲಿ ಹಾಡುಗಳನ್ನು ಪ್ರಸಾರ ಮಾಡುತ್ತಿರುವುದರಿಂದ ಭಾನುವಾರದ ಸಿನೇಮಾಗಳಲ್ಲಿ ಹಾಡುಗಳನ್ನು ಕಟ್ ಮಾಡಲಾಗುತ್ತದೆಂದು ... ಶ್ರೋತೃಗಳಿಗೆ ತಿಳಿಸಿ....!

ಪುಸ್ತಕ ವಿಭಾಗ

# ತಮಸ್








• ಮೂಲ: ಭೀಷ್ಮ ಸಾಹನಿ

• ಸಂಗ್ರಹ: ವ. ಉಮೇಶ ಕಾರಂತ

## ಪುಸ್ತಕ ವಿಭಾಗ

# ತಮಸ್

ಅನುವಾದಕರು:

ಶ್ರೀಮತಿ ಶಾರದಾ ಸ್ವಾಮಿ

ಡಾ. ಎಸ್.ಎಂ. ರಾಮಚಂದ್ರಸ್ವಾಮಿ

ನವಕರ್ನಾಟಕ ಪ್ರಕಾಶನ,

ಬೆಂಗಳೂರು

ಪುಟ ಸಂಖ್ಯೆ: ೨೦೦ ಬೆಲೆ: ರೂ. ೪೦/-



**ದೇಶ ವಿಭಜನೆಯ ಹಿನ್ನೆಲೆಯಲ್ಲಿ ಸ್ವಾನುಭವದ ಆಧಾರದ ಮೇಲೆ ರಚಿಸಲ್ಪಟ್ಟ ಈ ಕಾದಂಬರಿ ಕೇವಲ ಭಾರತದ ಸಾಹಿತ್ಯದಲ್ಲಷ್ಟೆ ಅಲ್ಲ, ವಿಶ್ವಸಾಹಿತ್ಯದಲ್ಲೂ ಒಂದು ಅಮರ ಕೃತಿಯೆಂದು ಪರಿಗಣಿಸಲ್ಪಟ್ಟಿದೆ. ೧೯೭೫ರಲ್ಲಿ ಕೇಂದ್ರ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿಯನ್ನೂ ತದನಂತರ ಲೋಟಸ್ ಅಂತಾರಾಷ್ಟ್ರೀಯ ಪ್ರಶಸ್ತಿಯನ್ನೂ ಪಡೆದ ಈ ಕೃತಿ ಕಿರುತೆರೆಯ ಮೇಲೆ ಮೂಡಿಬಂದಾಗ ದೇಶದಲ್ಲಿ ಬಿರುಗಾಳಿಯನ್ನೇ ಎಬ್ಬಿಸಿದ್ದು ಅನೇಕರಿಗೆ ನೆನಪಿರಲೂಬಹುದು.**

ಗೂಡಿನಲ್ಲಿದ್ದ ಆ ದೀಪ ಮತ್ತೊಮ್ಮೆ ಆರುವಂತೆ ಓಲಾಡಿತು. ಮೇಲೆ ಸೂರಿನ ಬಳಿ ಗೋಡೆಯಿಂದ ಎರಡು ಇಟ್ಟಿಗೆಗಳು ಕಿತ್ತುಬಂದಿದ್ದವು. ಆ ಸಂದಿಯಿಂದ ಗಾಳಿ ನುಗ್ಗಿ ಬಂದಾಗಲೆಲ್ಲ ಬತ್ತಿ ಬಳುಕಿ ಉರಿ ನಂದುವಂತೆ ತೆಳುವಾಗುತ್ತಿತ್ತು. ಆಗ ಗೋಡೆಯ ಮೇಲೆ ನೆರಳುಗಳು ಕುಣಿಯತೊಡಗುತ್ತಿದ್ದವು. ಎಡಬಿಡದೆ ತಿದಿಯೊತ್ತಿದಂತೆ ಏದುಸಿರು ಬಿಡುತ್ತಿದ್ದ ನತ್ಥೂ ತನ್ನ ಉಸಿರಾಟದ ಪೆಟ್ಟಿಗೆ ಸಿಕ್ಕಿಕೊಂಡೇನಾದರೂ ದೀಪ ಓಲಾಡುತ್ತಿರಬಹುದೇ ಅಂದುಕೊಂಡ.

ನತ್ಥೂ ಹಾಯಾಗಿ ಗೋಡೆಗೆ ಆತುಕೊಂಡು ಕೂತ. ಅವನ ದೃಷ್ಟಿ ಮತ್ತೆ ಹಂದಿಯತ್ತ ಹರಿಯಿತು. ಹಂದಿಯೂ ಮತ್ತೊಮ್ಮೆ ಗುಟುರು ಹಾಕಿ ಆ ಕೊಠಡಿಯ ಮಧ್ಯದಲ್ಲಿ ಬಿದ್ದಿದ್ದ ಕಸದ ರಾಶಿಯಲ್ಲಿ ಕೊಳೆತ ಯಾವುದೋ ಒಂದು ಸಿಪ್ಪೆಗೆ ಬಾಯಿ ಹಾಕಿತು. ತನ್ನ ಪುಟ್ಟ ಪುಟ್ಟ ಕಣ್ಣುಗಳನ್ನು

ನೆಲಕ್ಕೆ ಕೀಲಿಸಿ, ಗುಲಾಬಿ ಬಣ್ಣದ ಮುಸುಡಿಯಿಂದ ಆ ಕೊಳೆತ ಸಿಪ್ಪೆಯನ್ನೇ ಕೆದಕುತ್ತ ನಿಂತಿತ್ತು ಹಂದಿ. ಈಗ ಕಳೆದ ಎರಡು ಗಂಟೆಗಳಿಂದ ನತ್ಥೂ ಈ ಬಣ್ಣಗೆಟ್ಟ ಒರಟು ಮೈಯ ಹಂದಿಯೊಡನೆ ಸೆಣ ಸಾಡುತ್ತಿದ್ದ.

ಎಂದೋ ಅವನು ಕೇಳಿದ್ದುಂಟು-ಹಂದಿಯನ್ನು ಕಡಿಯಬೇಕಾದಾಗ ಅದರ ಮೇಲೆ ಕುದಿಯುವ ನೀರನ್ನು ಚೆಲ್ಲಿದರೆ ಒಳ್ಳೆಯದು ಎಂದು. ಆದರೆ ನತ್ಥೂ ಕುದಿಯುವ ನೀರನ್ನು ಎಲ್ಲಿಂದ ತರಬೇಕು?

ನತ್ಥೂ ಅಂದು ಚರ್ಮ ಹದಮಾಡಿ ಮುಗಿಸಿ ನಲ್ಲಿಯ ಬಳಿ ಕೈಕಾಲು ಮುಖ ತೊಳೆಯುತ್ತಿದ್ದಾಗ



ಮುರಾದ್ ಅಲಿ ಹೇಳಿದ್ದ, "ನಮ್ಮ ಪಶು ವೈದ್ಯ ಸಾಹೇಬರಿಗೆ ಒಂದು ಸತ್ತ ಹಂದಿ ಬೇಕಂತೆ ತಮ್ಮ ಡಾಕ್ಟರ್ ಕೆಲಸಕ್ಕೆ."

ಆ ಮಾತನ್ನು ಕೇಳಿ ನತ್ಥೂ, "ನಾನು ಇದು ವರೆಗೂ ಎಂದೂ ಹಂದಿಯನ್ನು ಕೊಂದದ್ದೇ ಇಲ್ಲ ಬುದ್ಧಿ, ದೊಡ್ಡಿಯ ಕಟುಕರೇ ಸರಿ. ಕಡಿಯುವ ಕೊಲ್ಲುವ ಕೆಲಸಕ್ಕೆ", ಅಂದ.

"ಅವರಿಗೆ ಹೇಳಬಹುದಾಗಿದ್ದರೆ ನಿನ್ನನ್ಯಾಕೆ ಕೇಳ್ತಾ ಇದ್ದೆ? ಇದು ನೀನೇ ಮಾಡಬೇಕಾದ ಕೆಲಸ,", ಅನ್ನುತ್ತಲೇ ಮುರಾದ್ ಅಲಿ ತನ್ನ ಜೇಬಿನಿಂದ ಐದು ರೂಪಾಯಿಯ ಒಂದು ಹೊಚ್ಚ ಹೊಸ ನೋಟನ್ನು ಸರ ಸರನೆ ತೆಗೆದು ನತ್ಥೂವಿನ ಬೇಡವೆಂದು ಜೋಡಿಸಿದ ಕೈಗಳನ್ನು ತಪ್ಪಿಸಿ ಅವನ ಜೇಬಿನಲ್ಲಿ ತುರುಕಿದ್ದ.

ನತ್ಥೂ, ಆಗಲಿ ಎಂದೋ, ಇಲ್ಲ ಎಂದೋ ಯಾವುದಾದರೂ ಜವಾಬು ಹೇಳುವುದಕ್ಕೆ ಮೊದಲೇ ಮುರಾದ್ ಅಲಿ ಅಲ್ಲಿಂದ ಹೊರಟು ಹೋದ. ನತ್ಥೂ ಕೈಗಳನ್ನು ಇನ್ನೂ ಜೋಡಿಸಿ ಕೊಂಡೇ ಇದ್ದ; ಜೇಬಿನಲ್ಲಿ ಬಿದ್ದ ಐದರ ನೋಟು ಅವನ ಬಾಯನ್ನು ಕಟ್ಟಿಬಿಟ್ಟಿತ್ತು.

ನತ್ಥೂವಿಗೂ ಈ ಮುರಾದ್ ಅಲಿಯ ಹತ್ತಿರ ಪ್ರತಿ ದಿನ ಒಂದಲ್ಲ ಒಂದು ಕೆಲಸವಿರುತ್ತಿತ್ತು. ಊರಿನಲ್ಲಿ ಹಸುವೋ ಎಮ್ಮೆಯೋ ಸತ್ತರೆ ಅದರ ಚರ್ಮವನ್ನು ಅಲಿ ನತ್ಥೂವಿಗೇ ಕೊಡಿಸುತ್ತಿದ್ದ. ಮುರಾದ್ ಅಲಿಯ ಕೈಯಲ್ಲೂ ಆಗ ಈಗ ಎಂಟಾಣೆಯನ್ನೋ ರೂಪಾಯಿಯನ್ನೋ ಇಡಬೇ ಕಾಗುತ್ತಿತ್ತು. ಆದರೆ ಚರ್ಮ ಸಿಕ್ಕುತ್ತಿತ್ತಲ್ಲ!

ಹಂದಿಯನ್ನು ಹಿಡಿದು ಕೊಠಡಿಯೊಳಗೆ ತಂದು ಕೂಡಿಹಾಕುವದು ಸುಲಭದ ಕೆಸವಾಗಿತ್ತೆ? ಬೀದಿ ಬೀದಿ ಅಲೆಯುತ್ತಾ ಹಂದಿಗಳು ತಿಪ್ಪೆಗುಡ್ಡೆಗೆ ಬಾಯಿಹಾಕುವುದನ್ನು ನತ್ಥೂ ನೋಡಿದ್ದ. ಅವನಿಗೆ ಬೇರೆ ಯಾವ ಉಪಾಯವೂ ತೋಚದೆ, ಒಂದು ಕಸದ ರಾಶಿಯಿಂದ ಅಷ್ಟಿಷ್ಟು ಕಸ ಬಾಚಿಕೊಂಡು ಬಂದು ಆ ಮುರುಕು ಕೋಣೆಯ ಬಾಗಿಲ ಬಳಿ, ಹೊರಗೆ ಅಂಗಳದಲ್ಲಿ ಸ್ವಲ್ಪ ಸ್ವಲ್ಪವಾಗಿ ಹಾಕುತ್ತ ಬಂದ. ಸಂಜೆಗತ್ತಲು ಹರಡುವ ಹೊತ್ತಿಗೆ ಮೂರು ಹಂದಿಗಳು ಕೊಳಚೆ ನೀರಿನ ಚರಂಡಿಯನ್ನು ಮೂಸುತ್ತ, ಸಗಣಿ ರಾಶಿಯನ್ನು ಕೆದಕುತ್ತ, ಮಣ್ಣು ಗುಡ್ಡೆಗಳನ್ನು ಹರಡುತ್ತ ಇತ್ತ ಕಡೆಗೆ ಬಂದಿದ್ದವು. ಅವುಗಳ ಪೈಕಿ ಒಂದು ಹಂದಿ ಕಸದ ಗುಪ್ಪೆಗಳನ್ನು ಮೂಸುತ್ತ ಮೂಸುತ್ತ, ಆ ಅಂಗಳದೊಳಕ್ಕೆ ಬಂದಿತ್ತು. ನತ್ಥೂ ಒಡನೆಯೇ ಅಂಗಳದ ಬಾಗಿ ಲನ್ನು ಮುಚ್ಚಿಬಿಟ್ಟಿದ್ದ. ಆಮೇಲೆ ಮುರುಕು ಕೋಣೆಯ ಬಾಗಿಲನ್ನು ತೆಗೆದು, ದೊಣ್ಣೆಯಿಂದ

ಓಡಿಸಿಕೊಂಡು ಹಂದಿಯನ್ನು ರೂಮಿನೊಳಕ್ಕೆ ತರುಬಿದ್ದ. ಸ್ವಲ್ಪ ಸಮಾಧಾನಗೊಂಡ ನತ್ಥೂ ಕೋಣೆಯ ಹೊರಗೆ ಕುಳಿತು ನಿಶ್ಚಿಂತೆಯಿಂದ ಬೀಡಿ ಸೇದುತ್ತ ರಾತ್ರಿಯಾಗುವುದನ್ನೇ ಕಾಯತೊಡಗಿದ. ಅರ್ಧ ರಾತ್ರಿ ಕಳೆದುಹೋಗಿದ್ದರೂ, ಹಂದಿ ಮಾತ್ರ ಯಾವ ಯೋಚನೆಯೂ ಇಲ್ಲದೆ ಕಸದ ಮಧ್ಯದಲ್ಲಿ ಸಂತೋಷವಾಗಿ ತಿರುಗಾಡಿಕೊಂಡಿತ್ತು.

"ಉಹುಂ, ಹೀಗೆ ಇದು ಆಗುವ ಕೆಲಸವಲ್ಲ," ನತ್ಥೂ ಹಲ್ಲು ಕಡಿಯುತ್ತ ಅಂದುಕೊಂಡ. ಈ ಹಂದಿ ಇವತ್ತು ನನ್ನನ್ನೇ ಮುಗಿಸಿಬಿಡುತ್ತೆ, ಅಷ್ಟೆ, ಹಂದಿಯ ಹಿಂಗಾಲುಗಳನ್ನು ಹಿಡಿದು ಅದನ್ನು ಕೆಳಕ್ಕೆ ಕೆಡವಲು ಮತ್ತೊಮ್ಮೆ ಪ್ರಯತ್ನಿಸಿ ನೋಡಲೇ ಎಂದುಕೊಂಡ ನತ್ಥೂ. ಚೂರಿಯನ್ನು ಎಡಗೈಯಲ್ಲಿ ಎತ್ತಿ ಹಿಡಿದು ನಿಧಾನವಾಗಿ ಹೆಜ್ಜೆ ಹಾಕುತ್ತಾ ಅವನು ಕೋಣೆಯ ಮಧ್ಯಭಾಗಕ್ಕೆ ಬಂದ. ಇಷ್ಟು ಹೊತ್ತಿಗೆ ಹಂದಿ ಬಲಗಡೆಯ ಗೋಡೆಯ ತುದಿಯನ್ನು ತಲುಪಿ, ಆ ಮೂಲೆಯಿಂದ ಹೊರಟು ಎಡಗಡೆಯ ಗೋಡೆಯ ಅಂಚಿನಲ್ಲಿ ಹೆಜ್ಜೆ ಹಾಕುತ್ತಿತ್ತು. ನತ್ಥೂ ತನ್ನ ಕಡೆ ಮುಂದುವರೆದು ಬರುತ್ತಿರುವುದನ್ನು ಕಂಡೊಡನೆಯೇ ಹೆದರಿ ನತ್ಥೂವಿನ ಕಡೆಗೇ ಬರಲಾರಂಭಿಸಿತು. ನತ್ಥೂ ಒಂದೊಂದೇ ಹೆಜ್ಜೆ ಹಿಂದೆ ಸರಿಯತೊಡಗಿದ. ಹೀಗಿರುವಾಗ ಅದರ ಹಿಂಗಾಲುಗಳನ್ನು ಹಿಡಿದೆಳೆದು ನೆಲಕ್ಕೆ ಕೆಡವುವುದಂತೂ ಸಾಧ್ಯವೇ ಇಲ್ಲದ ಮಾತು. ಅದಕ್ಕೆ ಅಮಲೇರಿರುವಂತಿತ್ತು. ಈ ಸ್ಥಿತಿಯಲ್ಲಿ ಅದು ಏನು ಮಾಡಬಹುದು ಎಂದು ಹೇಳುವುದೂ ಸಾಧ್ಯವಿಲ್ಲ. ಆದರೆ ನತ್ಥೂ ಬಳಲಿ ಬೆಂಡಾಗಿದ್ದ. ಮಧ್ಯರಾತ್ರಿ ಕಳೆದು ಎರಡು ಗಂಟೆಯಾಗಿತ್ತು. ಇದ್ದಕ್ಕಿದ್ದ ಹಾಗೆ ನತ್ಥೂವಿಗೆ ರೇಗಿತು. 'ಇಲ್ಲ ನಾನಿರಬೇಕು, ಇಲ್ಲ ಈ ಹಂದಿಯಿರಬೇಕು' ಎಂದುಕೊಳ್ಳುತ್ತಾ ತಟ್ಟನೆ ಹಿಂದೆ ಬಂದು ಗೂಡಿನೊಳಗಿದ್ದ ಕಲ್ಲುಗುಂಡನ್ನೆತ್ತಿ ಹಂದಿಯ ಮೇಲೆ ಕುಕ್ಕಿದ. ಹಾಗೆ ಮಾಡಿದ್ದೇ ಚಟ್ಟೆಂದು ಹೊರಬಾಗಿಲನ್ನು ತೆರೆದು ಅಂಗಳಕ್ಕೋಡಿದನಾತ.

ಈಗ ಬೇಲಿಯ ಹಿಂದೆ ಅವನು ಸುಮ್ಮನೆ ನಿಂತಿದ್ದ. ಇದ್ದಕ್ಕಿದ್ದ ಹಾಗೆ ನತ್ಥೂವಿಗೆ ಹೆಂಡತಿಯ ನೆನಪಾಯಿತು. ಅವಳು ಚಮ್ಮಾರರ ಕೇರಿಯಲ್ಲಿ ನಿಶ್ಚಿಂತೆಯಾಗಿ ಮಲಗಿ ನಿದ್ರಿಸುತ್ತಿರಬಹುದು. ಈ ತಕರಾರರನ್ನು ಕಟ್ಟಿಕೊಳ್ಳದೇ ಇದ್ದಿದ್ದರೆ ತಾನು ಈಗ ಅವಳ ಮಗ್ಗಲಿನಲ್ಲಿ ಬೆಚ್ಚಗೆ ಮಲಗಿರಬಹುದಾಗಿತ್ತು ಅಂದುಕೊಂಡ.



ಇದ್ದಕ್ಕಿದ್ದಹಾಗೆ ದೂರದಲ್ಲಿ ಶೇಖ್ ಸಾಹೇಬರ ತೋಟದಲ್ಲಿದ್ದ ಗಡಿಯಾರ ಮೂರು ಗಂಟೆ ಬಾರಿಸಿತು. ಅವನ ದೃಷ್ಟಿ ತಾನು ಇನ್ನೂ ಕೈಯಲ್ಲಿಯೇ ಹಿಡಿದಿದ್ದ ಚೂರಿಯ ಮೇಲೆ ಬಿತ್ತು. ಹಂದಿ ಇನ್ನೂ ಸತ್ತಿಲ್ಲ, ತಾನು ಇಲ್ಲಿ ನಿಂತುಕೊಂಡು ಮಾಡುತ್ತಿರುವುದೇನು? ಜಮಾದಾರನು ಗಾಡಿ ಹೊಡೆದುಕೊಂಡು ಬರುವ ಹೊತ್ತೂ ಹತ್ತಿರವಾಗುತ್ತಿದೆ. ಅವನ ಪ್ರಶ್ನೆಗಳಿಗೆ ತಾನೇನು ಜವಾಬು ಹೇಳಬೇಕು? ಇದೆಂಥ ಪೇಚಿಗೆ ಸಿಕ್ಕಿ ಹಾಕಿಕೊಂಡೆ! ಎಂದು ಅವನಿಗೆ ಅಳು ಉಕ್ಕಿ ಬಂತು. ಗಾಬರಿ

ಗೊಂಡು ಅವನು ಕೋಣೆಯ ಕಡೆ ಧಾವಿಸಿದ. ಹಂದಿ ಒಮ್ಮೆ ತನ್ನ ಮೂಗಿನ ಹೊರಳೆಯನ್ನು ಮೇಲೇರಿಸಿ ಅವನಿಗೆ ಸ್ವಾಗತ ಕೋರಿತು. ನತ್ಥೂ ಈಗ ಮತ್ತೊಮ್ಮೆ ಚೂರಿಯನ್ನು ಎತ್ತಿ ಹಿಡಿದು ನೆಲದ ಮೇಲೆ ಕುಕ್ಕರುಗಾಲಿನಲ್ಲಿ ಕೂತ. ಹಂದಿ ಇನ್ನೂ ಒಂದೆರಡು ಹೆಜ್ಜೆ ಮುಂದೆ ಬಂತು. ಅದರ ಮುಸುಡಿ ಇನ್ನಷ್ಟು ನೆಲದ ಕಡೆಗೇ ಬಗ್ಗಿತ್ತು. ನತ್ಥೂವಿನ ಹತ್ತಿರಕ್ಕೆ ತಲುಪುವುದಕ್ಕೆ ಮೊದಲೇ ಒಂದು ಪಕ್ಕಕ್ಕೆ ವಾಲಿ ನೆಲದ ಮೇಲೆ ಉರುಳಿಬಿತ್ತು. ಅಲ್ಲಿಗೆ ಹಂದಿಯ ಕತೆ ಮುಗಿಯಿತು.

## ಅಧ್ಯಾಯ-೨

ಪ್ರಭಾತ ಫೇರಿಗೆ ಹೋಗಲು ಏನವೂ ಹೊತ್ತಿಗೆ ಸರಿಯಾಗಿ ನಿಗದಿಯಾದ ಸ್ಥಳದಲ್ಲಿ ಬಂದು ಸೇರುತ್ತಿದ್ದವರು ಒಬ್ಬಿಬ್ಬರೇ. ದೂರದಲ್ಲಿ ಕತ್ತಲನ್ನು ಸೀಳುತ್ತಾ ಬೆಳಕೊಂದು ಕಾಣಿಸಿತು.ಲಾಂದ್ರ ಹಿಡಿದು ದೊಡ್ಡ ಪೇಟೆಯ ಮೂಲೆಯನ್ನು ತಿರುಗಿ ಯಾರೋ ಬರುತ್ತಿದ್ದರು.

“ಅಕೋ, ಬಕ್ಷಿಯವರು ಬಂದರಲ್ಲ,,”ಪಾಯಜಾಮವನ್ನು ಗುರುತಿಸಿದ ಅಜೀಜ್ ಉದ್ಗರಿಸಿದ.

ಹೌದು, ಬಂದವರು ಬಕ್ಷಿ ಸಾಹೇಬರೇ. ವಯಸ್ಸಾದ ಮನುಷ್ಯ. ಮುಪ್ಪಿನಿಂದ ಬಳಲಿ ಬೆಂಡಾಗಿದ್ದರೂ ಆತ ಬಾರದಿದ್ದರೆ ಪ್ರಭಾತಫೇರಿಗೆ ಮತ್ತಾರೂ ತಲೆ ಹಾಕುತ್ತಿರಲಿಲ್ಲ.

ಅಷ್ಟು ಹೊತ್ತಿಗೆ ಸರಿಯಾಗಿ ತಗ್ಗಿನಿಂದ ಕೇಳಿ ಬಂತು, ‘ಲೆಫ್ಟ್.. ಲೆಫ್ಟ್... ರೈಟ್,”

“ಓಹೋ, ಜರ್ನೈಲ್ ಕೂಡ ಬಂದೆಬಿಟ್ಟ,,” ಎಂದರು ಬಕ್ಷಿ. ಎಲ್ಲರೂ ಗೊಳ್ಳೆಂದು ನಕ್ಕರು.

ಚಳವಳಿ ಯಾವುದೂ ನಡೆಯದೆ ಇರುವಾಗಲೂ ಜರ್ನೈಲ್ ಮಾತ್ರ ಜೈಲಿಗೆ ಹೋಗುತ್ತ, ಬರುತ್ತ ಇರುವವನು. ಯಾವ ಸಮಾರಂಭ ಇಲ್ಲದಾಗಲೂ ಅವನು ತಪ್ಪದೆ ಅಲ್ಲಲ್ಲಿ ಭಾಷಣ ಮಾಡುವವನೇ. ಅವನ ನೀರಸವಾದ, ಹೂತ ಒಣ ಗಂಟಲಿನಿಂದ ಹೊರಡುವ ಮಾತುಗಳು ಮುಂದಿನ ಸಾಲಿನಲ್ಲೇ ಕೂತ ನಾಲ್ಕು ಜನಕ್ಕೆ ಕೇಳಿಸಿದರೆ ಹೆಚ್ಚು!

ಈಗ ಜರ್ನೈಲ್ ಬಂದು ತಲುಪುತ್ತಿದ್ದಂತೆಯೇ ಲಾಲ್ ಕೀಟಲೆ ಮಾಡಿದ, “ಜರ್ನೈಲ್, ನಿನ್ನೆ ಸಭೆಯಿಂದ ನೀನು ಇದ್ದಕ್ಕಿದ್ದ ಹಾಗೆ ಎದ್ದು ಓಡಿ ಹೋದುದೇಕೆ?,”

“ನನಗೆ ಬೆಳಿಗ್ಗೆ ಎದ್ದ ಕೂಡಲೇ ನಿನ್ನಂತಹ ಪಾಪಿಯ ಬಾಯಿಗೆ ಬೀಳುವುದು ಇಷ್ಟವಿಲ್ಲ. ನನ್ನ ತಂಟೆಗೆ ಬರಬೇಡ.,”

ಬಕ್ಷಿ ಕೂಡ ಕಶ್ಮೀರಿಲಾಲನನ್ನು ಗದರಿಸಿದರು. ಅಷ್ಟರಲ್ಲಿ ದೊಗಳೆ ಷರಾಯಿ ತೊಟ್ಟ ಶಂಕರಲಾಲ್ ಅಲ್ಲಿಗೆ ಬಂದ.

ಈಗೀಗ ಕತ್ತಲೆ ಹರಿದು ಸ್ವಲ್ಪ ಸ್ವಲ್ಪ ಬೆಳಕಾಗುತ್ತಿತ್ತು. ಬಕ್ಷಿಯವರು ಲಾಂದ್ರವನ್ನು ಆರಿಸಿಬಿಟ್ಟರು.

“ಇದೇನು ಬಕ್ಷಿಯವರೇ, ಲಾಂದ್ರವನ್ನು ಆರಿಸಿಬಿಟ್ಟರಲ್ಲ?,”ಎಂದ ಶಂಕರಲಾಲ್.

“ಆರಿಸಿದರೇನು? ದೀಪವಿಲ್ಲದೆ ನಿನಗೆ ನನ್ನ ಗುರುತು ಹತ್ತುವುದಿಲ್ಲವೋ ಅಥವಾ ಮೆಹತಾ ಅವರ ಮುಖ ಕಾಣುವುದಿಲ್ಲವೋ? ಎಣ್ಣೆ ದಂಡವಾಗುತ್ತದಲ್ಲ; ಇದಕ್ಕೆ ತಗಲುವ ಎಣ್ಣೆ ಖರ್ಚನ್ನು ಕಾಂಗ್ರೆಸ್ ಕಮಿಟಿ ಕೊಡುತ್ತಿಲ್ಲ. ಕೊಡುವವನು ನಾನೇ,,”ಎಂದರು ಬಕ್ಷಿ.

ಶಂಕರಲಾಲ್‌ನಿಗೂ ಮೆಹತಾ ಅವರಿಗೂ ಮೊದಲಿನಿಂದಲೂ ಎಣ್ಣೆ-ಸೀಗೆಕಾಯಿ ಸಂಬಂಧವೇ. ಹಿಂದೊಮ್ಮೆ ಲಾಹೋರಿನಲ್ಲಿ ನಡೆದ ಕಾಂಗ್ರೆಸ್ ಸಮ್ಮೇಳನವೊಂದರಲ್ಲಿ ಜಿಲ್ಲಾ ಕಮಿಟಿಯ ಪ್ರತಿನಿಧಿಯಾಗಿ ಭಾಗವಹಿಸಬೇಕಾಗಿದ್ದ ಲಾಲ್‌ನ ಹೆಸರನ್ನು ಮೆಹತಾ ಲಿಸ್ಟಿನಿಂದ ಹೊಡೆದು ಹಾಕಿದ್ದರು. ನೆಹರೂ ಭಾಗವಹಿಸಿದ್ದ ಆ ಸಮ್ಮೇಳನದಲ್ಲಿ ತಾನು ಪ್ರತಿನಿಧಿಯಾಗುವುದನ್ನು ತಪ್ಪಿಸಿದರೆಂದು

# ಪುಸ್ತಕ ವಿಭಾಗ

ಮೆಹತಾ ಮೇಲೆ ಶಂಕರಲಾಲ್‌ನಿಗೆ ಕೋಪ. ಲಾಹೋರಿನಿಂದ ಹಿಂದಿರುಗಿದ ಮೇಲೆ ಶಂಕರಲಾಲ್ ಮೆಹತಾ ಅವರನ್ನು ತರಾಟೆಗೆ ತೆಗೆದುಕೊಂಡು ಅವರ ಗ್ರಹಚಾರ ಬಿಡಿಸಿಬಿಟ್ಟ.

ಈಗ ಬಕ್ಷಿಯವರಿಗೆ ಪೇಚಾಟ. ಮಾಸ್ತರ್ ರಾಮದಾಸನೂ ಬರಲಿಲ್ಲ. ದೇಸರಾಜನೂ ಬರಲಿಲ್ಲ. ಇನ್ನು ಹಾಡಬಲ್ಲಂಥವರಾದರೂ ಯಾರು? ಯಾರೂ ಬಾರದಿದ್ದರೆ ತಾವೇ ತಮಗೆ ಬಂದಂತೆ ಹಾಡಿಕೊಳ್ಳುವುದು.

"ಇಲ್ಲಿ ನೋಡಿ ಮೆಹತಾ, ಇನ್ನು ನಾವು



ಪ್ರಭಾತಫೇರಿಗೆ ಹೊರಡೋಣ. ಇವರನ್ನೆಲ್ಲ ನಂಬಿಕೊಂಡರೆ ಹೀಗೇ ಕೆಲಸ ಸಾಗುವುದು. ಕಶ್ಮೀರಿಲಾಲ್, ನೀನೇ ಶುರು ಮಾಡು ಹಾಡನ್ನು."

ಕಶ್ಮೀರಿಲಾಲ್ ಒಡನೆಯೇ ಜರ್ನೈಲ್‌ನ ಕಡೆ ತಿರುಗಿ "ಭಾಷಣ ಮಾಡು ಜರ್ನೈಲ್," ಎಂದ. ಜರ್ನೈಲ್‌ಗೆ ಇನ್ನಾವ ಪ್ರೋತ್ಸಾಹವೂ ಬೇಕಾಗಲಿಲ್ಲ. ತಕ್ಷಣವೇ ಬೆತ್ತವನ್ನು ಅತ್ತಿತ್ತ ಬೀಸುತ್ತ, 'ಲೆಫ್ಟ್... ರೈಟ್...' ಎನ್ನುತ್ತಾ ರಸ್ತೆಯ ಅಂಚಿಗಿದ್ದ ಒಂದು ಎತ್ತರವಾದ ಕಲ್ಲನ್ನೇರಿ ನಿಂತ. "ಸ್ನೇಹಿತರೆ, ಜಿಲ್ಲಾ ಕಾಂಗ್ರೆಸಿನ ಅಧ್ಯಕ್ಷರು ದೇಶಕ್ಕೆ ದ್ರೋಹ ಬಗೆದಿದ್ದಾರೆಂದು ತುಂಬಾ ದುಃಖದಿಂದ ನಾನು ಹೇಳಬೇಕಾಗಿ ಬಂದಿದೆ. ೧೯೨೯ರಲ್ಲಿ ರಾವೀ ನದಿಯ ದಡದಲ್ಲಿ ನಾವು ಕೈಗೊಂಡ ದೀಕ್ಷೆಗೆ ಸಾಯುವವರೆಗೆ ಬದ್ಧರು. ಈ ಮೆಹತಾ ಯಾವ ಲೆಕ್ಕ! ಅಷ್ಟೇ ಅಲ್ಲ, ಅವನ ಬಾಲಗಳಾದ ಕಶ್ಮೀರಿಲಾಲ್, ಶಂಕರಲಾಲ್ ಮುಂತಾದ ವಿದ್ರೋಹಿಗಳನ್ನು ಒಂದು ಕೈ ನೋಡಿಕೊಳ್ಳುತ್ತೇವೆ."

"ಜಿಂದಾಬಾದ್,"! ತಗ್ಗಿನ ಕಡೆಯಿಂದ ಇನ್ನೊಂದು ಹೊಸ ದನಿಯೂ ಕೂಡಿಕೊಂಡಿತು. ಅಷ್ಟರಲ್ಲಿ ಮಾಸ್ತರ್ ರಾಮದಾಸ್ ಏದುಸಿರು ಬಿಡುತ್ತ ಎದುರಿಗೆ ಪ್ರತ್ಯಕ್ಷವಾದ.

ಎಲ್ಲರೂ ನಗಲಾರಂಭಿಸಿದರು. ಆದರೆ ರಾಮದಾಸನು ಗಂಭೀರವಾಗಿ ಹೇಳಿದ, "ಇವತ್ತು ಪ್ರಭಾತಫೇರಿ ಇಲ್ಲ".

"ಅದೇಕೆ?,"

"ನಿನ್ನೆ ರಾತ್ರಿ ಗೋಸ್ವಾಮಿಗಳು ನನಗೆ ಹೇಳಿದ್ದರಲ್ಲ, ಇಮಾಮ್‌ದೀನ್ ಮೊಹಲ್ಲಾದ ಹಿಂದಿನ ಕೊಂಪೆಯ ಗಲ್ಲಿಗಳನ್ನು ಗುಡಿಸಬೇಕೆಂದು!,"

"ತಡವಾಗಿ ಬಂದಿದ್ದಲ್ಲದೆ ಈಗ ಕತೆ ಬೇರೆ ಕಟ್ಟುತ್ತಿದ್ದೀಯಾ. ನಮಗಂತೂ ಯಾರೂ ಹೇಳಲಿಲ್ಲಪ್ಪ!,"

"ಅದಕ್ಕೇ ಈಗ ನಾನು ಓಡೋಡಿ ಬಂದದ್ದು".

ಇಷ್ಟು ಹೊತ್ತಿಗೆ ಕತ್ತಲೆ ಹರಿದು ಬೆಳಕಾಗತೊಡಗಿತ್ತು.

"ಸರಿ, ನಡೆಯಿರಿ ಇಲ್ಲಿಂದ. ಹಾಡು ಹೇಳುತ್ತಲೇ ಹೊರಡೋಣ. ಮೊದಲು ಮಾಡು ರಾಮದಾಸ್," ಎನ್ನುತ್ತ ಬಕ್ಷಿಯವರು ಎರಡು ಹೆಜ್ಜೆ ಮುಂದೆ ನಡೆದರು. ರಾಮದಾಸನು ಮುಂದಿನ ಪಂಕ್ತಿಗಳನ್ನು ಹಾಡುತ್ತ ಮಿಕ್ಕವರೆಲ್ಲ ಅದನ್ನು ಪುನಃ ಹಾಡುತ್ತ, ಪ್ರಭಾತಫೇರಿಗೆ ಹೊರಟವರ ಗುಂಪು ಕುತುಬುದ್ದೀನನ ಬಸ್ತಿಯ ಕಡೆ ಹೊರಟಿತು.

## ಅಧ್ಯಾಯ-೩

ರಸ್ತೆಗೆ ಹೆಜ್ಜೆ ಇಡುತ್ತಿದ್ದ ಹಾಗೆ ನತ್ಥೂ ನಿರಾಳ ವಾಗಿ ಉಸಿರೆಳೆದ. ದೊಡ್ಡ ರಸ್ತೆಗಳಲ್ಲಿ ಬೆಳಕು ಹರಿಯುತ್ತಿದ್ದರೂ ಇಕ್ಕಟ್ಟಾದ ಸಂದಿಗೊಂದಿಗಳಲ್ಲಿ ಇನ್ನೂ ಕತ್ತಲಾಗಿಯೇ ಇತ್ತು. ಕೆಟ್ಟನಾತ ಬಡಿಯು ತ್ತಿದ್ದ ಆ ದರಿದ್ರ ಕೋಣೆಯನ್ನು ಬಿಟ್ಟು ಹೊರಗೆ ತಂಪಾದ ವಾತಾವರಣಕ್ಕೆ ಬಂದ ಮೇಲೆ ಅವನಿಗೆ ಸಮಾಧಾನವಾಯಿತು.

ಆತ ಒಂದು ಮನೆಯ ಮುಂದೆ ಹಾದು ಹೋಗುವಾಗ ಯಾರೋ ಒಬ್ಬ ಮುದುಕ ಒಳಗಿ ನಿಂದ, "ಅಲ್ಲಾ, ಕುಟುಂಬಕ್ಕೆ ಒಳಿತನ್ನು ಮಾಡಪ್ಪ," ಎಂದು ಏರಿದ ದನಿಯಲ್ಲಿ ದೇವರನ್ನು ಪ್ರಾರ್ಥಿಸಿದ. ಆತ ಅಷ್ಟು ಹೊತ್ತಿಗಾಗಲೇ ಆಕಳಿಸಿ ಮೈಮುರಿದ ದ್ದದ್ದೂ ನತ್ಥೂವಿಗೆ ಗೊತ್ತಾಯಿತು. ಜನಗಳೆಲ್ಲ ಒಬ್ಬೊಬ್ಬರಾಗಿ ಎಚ್ಚೆತ್ತುಕೊಳ್ಳುತ್ತಿದ್ದಾರೆ!

ನತ್ಥೂ ಇನ್ನೂ ಒಂದೆರಡು ಹೆಜ್ಜೆ ಹೋಗಿ ದ್ದನೋ ಇಲ್ಲವೋ, ಅಷ್ಟರಲ್ಲಿ ಗಲ್ಲಿಯ ಮೇಲುಗ ಡೆಯಿಂದ ಕಿನ್ನರಿ ಬಾರಿಸುತ್ತ ಯಾವನೋ ಫಕೀರ ಹಾಡುತ್ತಿರುವದು ಕೇಳಿಸಿತು. ರಂಜಾನ್ ಹಬ್ಬದ ದಿನಗಳಲ್ಲಿ ಮುಸಲ್ಮಾನರು ಉಪವಾಸ ಮಾಡಿದ ಮೇಲೆ ಬೆಳಗಿನ ಜಾವ ಪಾರಣೆ ಮಾಡುವ ಹೊತ್ತಿಗೆ ಆ ಫಕೀರ ಹಾಡುತ್ತ ಬರುತ್ತಿದ್ದ. ನತ್ಥೂ ಅವನನ್ನು ನೋಡಿ ತಡೆದು ನಿಂತ ಫಕೀರನ ಹಾಡನ್ನು ಸ್ಪಷ್ಟವಾಗಿ ಕೇಳಬೇಕೆಂದು.

"ಎದ್ದೇಳು ಸೋಮಾರಿ, ನೀನಿನ್ನೂ ಮಲಗಿರು ವೆಯಲ್ಲಾ....,"

ನತ್ಥೂವಿಗೆ ಕಿನ್ನರಿಯ ಧ್ವನಿ ತುಂಬ ಇಂಪಾಗಿದೆ ಎನ್ನಿಸಿತು. ಒಮ್ಮೊಮ್ಮೆ ತಾನು ಇನ್ನೂ ನಿದ್ರೆ ಮಾಡುತ್ತಿರುವಾಗಲೇ, ಅರೆ ಎಚ್ಚರದ ಸ್ಥಿತಿಯಲ್ಲಿ ಕನಸಿನಲ್ಲೆಲ್ಲೋ ಕೇಳಿದ ಹಾಗೆ ಈ ಧ್ವನಿ ಕಿವಿಗೆ ಬಿದ್ದಿಲ್ಲವೇ? ಇಂದು ಪೂರ್ತಿ ಎಚ್ಚರವಾಗಿರುವಾ ಗಲೂ ಎಷ್ಟು ಮಧುರವಾಗಿದೆ! ಜೇಬಿನಿಂದ ಒಂದು ಕಾಸನ್ನು ತೆಗೆದು ಫಕೀರನ ಕೈಗಿಟ್ಟ.

"ಅಲ್ಲಾ ನಿನ್ನನ್ನು ಸುಖವಾಗಿಡಲಿ," ಎಂದು ಫಕೀರ ಹರಸಿದ. ನತ್ಥೂ ಮುಂದೆ ನಡೆದ. ಗಲ್ಲಿಯನ್ನು ದಾಟುವ ಹೊತ್ತಿಗೆ ಸ್ವಲ್ಪ ಸ್ವಲ್ಪ ಬೆಳಕಾಗುತ್ತಿತ್ತು.

ನತ್ಥೂವಿಗೂ ತಾನು ಮುಂಜಾವಿನ ಚೊಕ್ಕಟ ವಾದ ಗಾಳಿ ಸೇವನೆಗೆ ಹೊರಟಿರುವಹಾಗೆ ಈಗ ತೋರಿತು. ಇದ್ದಕ್ಕಿದ್ದಂತೆಯೇ ಇಷ್ಟು ಹೊತ್ತಿಗೆ ಸತ್ತ ಹಂದಿಯನ್ನು ಹೊತ್ತ ಗಾಡಿ ಎಲ್ಲಿಯತನಕ



ಬಂತೋ ಏನೋ ಎಂದುಕೊಂಡ. 'ಅದು, ಇಷ್ಟು ಹೊತ್ತಿಗೆ ಪಶು ವೈದ್ಯ ಸಾಹೇಬರ ಆಸ್ಪತ್ರೆಯ ಮುಂದೆ ನಿಂತಿರಬಹುದೋ? ಎಂದಾತ ಯೋಚಿ ಸಿದ. ಕಳೆದ ರಾತ್ರಿಯ ವ್ಯವಹಾರವೆಲ್ಲ ನೆನಪಾಗಿ ಅವನ ಮೈ ನಡುಗಿತು. ಅಬ್ಬ! ಹಂದಿಯನ್ನು ಸಾಯಿಸುವುದರೊಳಗಾಗಿ ತಾನೇ ಅರೆಜೀವವಾ ಗಿದ್ದ. ಒಮ್ಮೆ ಜೇಬನ್ನು ಮುಟ್ಟಿ ನೋಡಿಕೊಂಡು ಆ ಹೊಚ್ಚ ಹೊಸ ನೋಟು ಅಲ್ಲೇ ಇದೆ ಎಂಬುದನ್ನು ಖಾತರಿಪಡಿಸಿಕೊಂಡು ದುಡ್ಡು ತಕ್ಕೊಂಡ ತಪ್ಪಿಗೆ ಋಣ ತೀರಿಸಿದ್ದಾಯ್ತಲ್ಲ! ಅಂದು ಕೊಂಡ.

# ಪುಸ್ತಕ ವಿಭಾಗ

ಬೆಳಗಾಗುತ್ತ ಮನೆಗಳು ಸ್ಪಷ್ಟವಾಗಿಯೇ ಕಾಣ ತೊಡಗಿದವು. ಮುರಾದ್ ಅಲಿಯ ಮನೆ ಯಾವುದು ಎಂಬುದು ಸರಿಯಾಗಿ ಗೊತ್ತಿಲ್ಲದಿದ್ದರೂ ಅವನು ಓಡಾಡುವುದನ್ನು ಹಲವು ಬಾರಿ ಕಂಡುದ್ದುಂಟು. ಹಾಗೆ ನೋಡಿದರೆ ಅಲಿ ಓಡಾಡದ ಬೀದಿ ಯಾವುದು? ಅಸಾಮಿ ಯಾವ ಗಳಿಗೆಗೆ ಎಲ್ಲಿ ಪ್ರತ್ಯಕ್ಷವಾಗುತ್ತಾನೋ ಯಾರಿಗೆ ಗೊತ್ತು? ಎಂದುಕೊಂಡ ನತ್ಥೂ. ಇನ್ನು ಇಲ್ಲಿಂದ ಜರುಗಿಕೊಳ್ಳುವುದೇ ಸರಿ. ಏಕೆಂದರೆ, ಜಮಾದಾರನು, 'ನೀನು ಅಲ್ಲಿಯೇ ನನಗಾಗಿ ಕಾಯಬೇಕು' ಎಂದು ತಾಕೀತು ಮಾಡಿದ್ದ. ಹಂದಿ ಕಡಿದದ್ದಕ್ಕೆ ಈಗಾಗಲೇ ಕೂಲಿ ಅವನ ಕೈಸೇರಿತ್ತಲ್ಲ, ಇನ್ನು ನತ್ಥೂನೇಕೆ ಆ ಕೋಣೆಯಲ್ಲಿದ್ದಾನು?

ಸ್ವಲ್ಪ ದೂರ ಹೋದ ಮೇಲೆ ಯಾವುದೋ ಗಾನಮಂಡಲಿ ಹಾಡುತ್ತ ಬರುತ್ತಿರುವುದು ಅವನ ಕಿವಿಗೆ ಬಿತ್ತು. ಪ್ರಭಾತಫೇರಿಗೆ ಹೊರಟವರ ಗುಂಪು ಹಾಡುತ್ತ ಬರುತ್ತಿರಬೇಕು ಎಂದುಕೊಂಡ. ದೂರದಿಂದ ಅಸ್ಪಷ್ಟವಾಗಿ ಕೇಳಿಬರುತ್ತಿದ್ದ ಘೋಷಣೆಗಳು, ಜಯಕಾರಗಳು ಈಗ ಕೆಲವು ದಿನಗಳಿಂದ ಅವನು ಕೇಳುತ್ತಿದ್ದುವೇ. ಬರುತ್ತಿದ್ದವರು ಕಾಂಗ್ರೆಸ್ ಕಮಿಟಿಯವರೇ ಇರಬೇಕು. ಗಾನಮಂಡಲಿ ಹತ್ತಿರ ಬಂದಾಗ ನತ್ಥೂ ಪಕ್ಕಕ್ಕೆ ಸರಿದು ಗಲ್ಲಿಯ ಗೋಡೆಗೆ ಒತ್ತಿಕೊಂಡು ನಿಂತ. ಅವರ ಪೈಕಿ ಒಬ್ಬನು ಗಟ್ಟಿಯಾಗಿ ಘೋಷಣೆ ಮಾಡಿದ,

"ದೇಶಕ್ಕೆ ಜಯವೆನ್ನಿ,"!

ಈ ಘೋಷಣೆ ಜಯಕಾರಗಳ ಸದ್ದಡಗಿ ಒಂದು ಕ್ಷಣವೂ ಕಳೆದಿರಲಿಲ್ಲ. ಅಷ್ಟರಲ್ಲೇ ಗಲ್ಲಿಯ ತಿರುವಿನಾಚೆಯಿಂದ, "ಪಾಕಿಸ್ತಾನ ಜಿಂದಾಬಾದ್,"! ಎಂಬ ಘೋಷಣೆಯೂ ಕೇಳಿಬಂತು. ನತ್ಥೂ ಘೋಷಣೆ ಕೇಳಿಬಂದ ಕಡೆ ತಿರುಗಿ ನೋಡಿದ. ಇದ್ದಕ್ಕಿದ್ದ ಹಾಗೆ ಮೂರು ಜನ ಪ್ರತ್ಯಕ್ಷರಾಗಿದ್ದರು. ಆ ಜನ ರಸ್ತೆಯ ಮಧ್ಯದಲ್ಲಿ ಅಡ್ಡವಾಗಿ ನಿಂತು ಗಾನಮಂಡಲಿಯವರು ಮುಂದೆ ಹೋಗದಂತೆ ತಡೆದಿದ್ದಾರೆ.

ಆ ಮೂರು ಜನರ ಪೈಕಿ ಒಬ್ಬನ ತಲೆಯ ಮೇಲೆ ಫೆಲ್ಟ್ ಟೋಪಿ ಇತ್ತು. ಹಾಡುತ್ತ ಬಂದವರಿಗೆ ಸವಾಲೆಸೆಯುವಂತೆ ಆತ ಹೇಳಿದ, "ಕಾಂಗ್ರೆಸ್ ಹಿಂದುಗಳ ಸಂಸ್ಥೆ. ಅದಕ್ಕೂ ಮುಸಲ್ಮಾನರಿಗೂ ಯಾವ ನಂಟೂ ಇಲ್ಲ". ಪ್ರಭಾತಫೇರಿಯವರ ಗುಂಪಿನ ಪರವಾಗಿ ಒಬ್ಬ ವಯಸ್ಸಾದ ವ್ಯಕ್ತಿ, "ಕಾಂಗ್ರೆಸ್ ಎಲ್ಲರಿಗೂ ಸೇರಿದ ಸಂಸ್ಥೆ," ಎನ್ನುತ್ತ ಟೋಪಿ ಧರಿಸಿದ ವ್ಯಕ್ತಿಯನ್ನು ತಬ್ಬಿಕೊಂಡ. ಟೋಪಿಯವನು, "ಇದೆಲ್ಲ ಹಿಂದುಗಳ



ಬುದ್ಧಿವಂತಿಕೆ ಬಕ್ಷಿಯವರೆ, ನೀವು ಏನೇ ಅಂದರೂ ಕಾಂಗ್ರೆಸ್ ಮಾತ್ರ ಹಿಂದುಗಳ ಸಂಸ್ಥೆಯೇ ಸರಿ," ಅಂದ.

ಎರಡು ಗುಂಪುಗಳೂ ಒಂದಕ್ಕೊಂದು ಎದುರು ಬದುರಾಗಿ ನಿಂತಿದ್ದವು. ವಯೋವೃದ್ಧನಾಗಿದ್ದ ಕಾಂಗ್ರೆಸ್ಸಿಗ ಹೇಳುತ್ತಿದ್ದ, "ಇಲ್ಲಿ ನೋಡು, ಗಾನಮಂಡಲಿಯಲ್ಲಿ ಹಿಂದುಗಳು, ಮುಸಲ್ಮಾನರು, ಸಿಖ್ಖರು ಎಲ್ಲರೂ ಇದ್ದಾರೆ. ಸ್ವಾತಂತ್ರ್ಯ ಎಂಬುದು ಎಲ್ಲರಿಗೂ ಇರುವ ಹಕ್ಕಲ್ಲವೆ? ಈಗ ಸ್ವತಂತ್ರವಾಗಬೇಕಾಗಿರುವುದು ಇಡೀ ಹಿಂದೂಸ್ಥಾನ

ತಾನೇ ?,"

ಹಾಡುತ್ತ ಬಂದವರ ಗುಂಪಿನಲ್ಲಿದ್ದ ತಳುದೇಹದ ಸರದಾರ ಕೂಗಿ ಹೇಳಿದ, "ನನ್ನ ಕೊನೆಯುಸಿರಿರುವವರೆಗೆ ಪಾಕಿಸ್ತಾನ ದೊರಕದು ನಿಮಗೆ." ಜನರೆಲ್ಲ ನಗತೊಡಗಿದರು.

"ಸಾಕಪ್ಪಾ ಜರ್ನೈಲ್; ಆಗೊಮ್ಮೆ ಈಗೊಮ್ಮೆ ಬಾಯಿ ಮುಚ್ಚಿಕೊಂಡಿರುವುದನ್ನು ಕಲಿ,"ಎಂದರು ಬಕ್ಷಿ.

ಜರ್ನೈಲ್‌ಗೆ ಇನ್ನೂ ರೇಗಿತು. "ನನ್ನ ಬಾಯನ್ನು ಯಾರು ಮುಚ್ಚಿಸುವವರು? ನನಗೆ ನಿಮ್ಮೆಲ್ಲರ ಬಂಡವಾಳವೂ ಗೊತ್ತು,"ಎಂದ. ಆದರೆ ಹಾಡುತ್ತ ಬಂದವರು ಮುಂದೆ ಹೋಗಲೆಂದು ಹೆಜ್ಜೆ ಇಡುತ್ತಿದ್ದ ಹಾಗೆಯೇ ಟೋಪಿ ಹಾಕಿದ್ದ ಕನ್ನಡಕದವನು ರಸ್ತೆಗೆ ಅಡ್ಡ ನಿಂತು, "ನೀವು ಈ ಕಡೆ ಹೋಗಕೂಡದು. ಇದು ಮುಸಲ್ಮಾನರ ಮೊಹಲ್ಲ,"ಎಂದ.

"ಏಕೆ ಹೋಗಕೂಡದು? ನಾವು ರಾಷ್ಟ್ರ ಭಕ್ತಿ ಗೀತೆಗಳನ್ನು ಹಾಡುತ್ತಿದ್ದೇವೆ ಅಷ್ಟೆ,"ಎಂದರು ಬಕ್ಷಿ. ಈ ಮಾತನ್ನು ಕೇಳಿ ಕನ್ನಡಕದವ ಹಿಮ್ಮೆಟ್ಟಿದ. ನತ್ಥೂ ಸದ್ದಿಲ್ಲದೆ ನಿಧಾನವಾಗಿ ಹಿಂದು ಹಿಂದಕ್ಕೆ ಜರುಗಿಕೊಂಡ.

## ಅಧ್ಯಾಯ-೪

ಗುಡ್ಡದ ಮೇಲ್ಭಾಗಕ್ಕೆ ತಲುಪಿದ ಮೇಲೆ ಇಬ್ಬರೂ ಕಡಿವಾಣವೆಳೆದು ತಮ್ಮ ತಮ್ಮ ಕುದುರೆಗಳನ್ನು ನಿಲ್ಲಿಸಿದರು. ಎದುರಿಗೆ ದೂರ-ದೂರದವರೆಗೆ, ಬೆಟ್ಟಸಾಲುಗಳ ಸೆರಗಿನವರೆಗೆ ತಗ್ಗು ಪ್ರದೇಶ. ದೂರದಿಗಂತದಲ್ಲಿ ಕಾಮನ ಬಿಲ್ಲಿನಂತೆ ಏಳೂ ಬಣ್ಣಗಳನ್ನು ಎರಚುತ್ತ ಧೂಳೆದ್ದಿತ್ತು. ವಿಶಾಲವಾದ ಮೈದಾನ. ಅಲ್ಲಲ್ಲಿ ಸಣ್ಣ ಪುಟ್ಟ ಬೆಟ್ಟಗಳು. ಅವುಗಳ ಮೇಲೆ ಸ್ವಚ್ಛವಾದ ನೀಲಿ ಬಣ್ಣದ ಆಕಾಶ. ಮೇಲೆ ಎತ್ತರದಲ್ಲಿ ತಿಳಿ ಮುಗಿಲ ಹಿನ್ನೆಲೆಯಲ್ಲಿ ಹಾರಾಡುತ್ತಿರುವ ಹದ್ದುಗಳು. ಎಡಗಡೆಯಲ್ಲಿ ಎತ್ತರವಾದ ಪರ್ವತ. ಸೂರ್ಯೋದಯದ ಹೊತ್ತಿನಲ್ಲಿ ಮಾತ್ರ ಕಾಣಬರುವ ಈ ದೃಶ್ಯವನ್ನು ತೋರಿಸಬಹುದೆಂದೇ ರಿಚರ್ಡ್ ತನ್ನ ಹೆಂಡತಿಯನ್ನು ಕರೆತಂದಿದ್ದ. ಈಗ ರಿಚರ್ಡ್ ತಿರುಗಿ ಲೀಸಾಳ ಮುಖವನ್ನು ನೋಡಿದ. ಅವಳಿಗೇನನ್ನಿಸಿದೆ ಎಂದು ತಿಳಿದುಕೊಳ್ಳುವ ಬಯಕೆ ಅವನಿಗೆ. ಮುಂಜಾವಿನ ತಂಗಾಳಿಯಲ್ಲಿ ಅವಳ ಅಚ್ಚ ನೀಲಿ ಬಣ್ಣದ ಕಣ್ಣುಗಳಲ್ಲೊಂದು ವಿಶೇಷ ರೀತಿಯ ಸ್ವಚ್ಛತೆ ಮತ್ತು ಹೊಳಪು ಕಂಡುಬರುತ್ತಿತ್ತು. ಲೀಸಾ ಹೇಗೋ ಸಂತೋಷವಾಗಿದ್ದರೆ ಸಾಕು ಎಂದೇ ಅವಳನ್ನು ಇಲ್ಲಿಗೆ ಕರೆತಂದಿದ್ದ. ಈ ಸಲವಂತೂ ಸುಮಾರು ಆರು ತಿಂಗಳವರೆಗೆ ವಿಲಾಯತಿಯಲ್ಲೇ ಇದ್ದು



ಲೀಸಾ ಈಗ ತಾನೆ ಭಾರತಕ್ಕೆ ಮರಳಿದ್ದಳು. ಹೊಸ ಜಾಗದಲ್ಲಿ ಮಾಡಲು ಕೆಲಸವಿಲ್ಲದೆ ಯಾವ ಹವ್ಯಾಸ ಚಟುವಟಿಕೆಗಳೂ ಇಲ್ಲದೆ ಬೇಸತ್ತು, ಮತ್ತೆ ಹಿಂದಿನಂತೆಯೇ ಸ್ವದೇಶಕ್ಕೆ ಹೊರಟುಬಿಟ್ಟಾಳು ಎಂದು ರಿಚರ್ಡ್‌ಗೆ ಹೆದರಿಕೆ. ಅದಕ್ಕೋಸ್ಕರವೇ ಈ ಬಾರಿ ಲೀಸಾ ಭಾರತಕ್ಕೆ ಬಂದ ಮೇಲೆ ಕಳೆದ ಒಂದು ವಾರದಿಂದ ಬೆಳಗಿನ ಹೊತ್ತು ಅವಳನ್ನು ಒಮ್ಮೊಮ್ಮೆ ರಂಡೀ ಸಡಕ್ಕಿಗೋ, ಟೋಪಿ ಪಾರ್ಕಿಗೋ ಕರೆದೊಯ್ದರೆ ಮಿಕ್ಕ ದಿನ ಇಂದಿನಂತೆ ಕುದುರೆ ಸವಾರಿಗೆ ಹೊರಡುತ್ತಿದ್ದ. ಲೀಸಾ ಕೂಡ ರಿಚರ್ಡ್‌ನ ಬೇಕು ಬೇಡಗಳನ್ನು ಅರಿತು ನಡೆದು

ಕೊಳ್ಳಲು ಶಕ್ತಿ ಮೀರಿ ಪ್ರಯತ್ನಿಸುತ್ತಿದ್ದಳು.

"ಎಷ್ಟು ಸುಂದರವಾಗಿದೆ! ಇಲ್ಲಿಂದಲೇ ಹಿಮಾಲಯ ಪರ್ವತ ಮೊದಲಾಗುತ್ತದೆಯೇ?," ಎಂದು ಕೇಳಿದಳು ಲೀಸಾ.

"ಹೌದು, ಈ ಕಣಿವೆ ಇದೆಯಲ್ಲ, ಇದೇ ಮುಂದುವರಿದು ನೂರಾರು ಮೈಲುಗಳವರೆಗೆ ಎತ್ತರವಾದ ಪರ್ವತ ಶಿಖರಗಳ ಮಧ್ಯೆ ಹಾದು ಹೋಗುತ್ತದೆ,".

"ಕಣಿವೆ ಎಷ್ಟು ನಿರ್ಜನವಾಗಿದೆ!," ತನಗೆ ತಾನೇ ಹೇಳಿಕೊಂಡಳು ಲೀಸಾ.

"ಹಾಗೆನ್ನಬೇಡ ಲೀಸಾ. ಇದೊಂದು ಇತಿಹಾಸ ಪ್ರಸಿದ್ಧವಾದ ಕಣಿವೆ. ಭಾರತದ ಮೇಲೆ ದಂಡೆತ್ತಿ ಬಂದ ಹೊರನಾಡಿನವರೆಲ್ಲ ಈ ಕಣಿವೆಗಳ ಮೂಲಕವೇ ಬಂದದ್ದು," ರಿಚರ್ಡ್‌ನ ಉತ್ಸಾಹ ಹೆಚ್ಚುತ್ತಾ ಹೋಯಿತು.

ಲೀಸಾ ನಗುತ್ತ, "ನೀನು ಮಾತಾಡುವ ರೀತಿ ನೋಡಿದರೆ... ಇದು ನಿನ್ನ ದೇಶವೋ ಎನ್ನುವಷ್ಟು ಅಭಿಮಾನದಿಂದ ಮಾತಾಡುತ್ತಿದ್ದೀಯಲ್ಲ ರಿಚರ್ಡ್!," ಎಂದಳು.

"ಈ ದೇಶ ನನ್ನದಲ್ಲ ನಿಜ; ಆದರೆ ಇತಿಹಾಸ ನನ್ನ ವ್ಯಾಸಂಗದ ವಿಷಯ ತಾನೆ?," ರಿಚರ್ಡ್ ನಸುನಗುತ್ತ ಹೇಳಿದ, "ಅಲ್ಲಿ ಕಾಣುವ ಪರ್ವತ ಶ್ರೇಣಿಯ ಹಿಂದೆ ಹದಿನೇಳೇ ಮೈಲುಗಳ ದೂರದಲ್ಲಿ ತಕ್ಷಶಿಲೆಯ ಹಾಳುಬೀಡಿದೆ. ತಕ್ಷಶಿಲೆಯ ಹೆಸರನ್ನು ಕೇಳಿದ್ದೀ ತಾನೆ?," ಎಂದು ಕೇಳಿದ.

"ಓಹೋ, ಕೇಳಿದ್ದೇನೆ,".

"ಒಂದಾನೊಂದು ಕಾಲದಲ್ಲಿ ಅಲ್ಲೊಂದು ದೊಡ್ಡ ಯೂನಿವರ್ಸಿಟಿಯಿತ್ತಂತೆ, ಅಲ್ಲೊಂದು ಮ್ಯೂಸಿಯಂ ಕೂಡ ಇದೆ. ನೀನು ಅದನ್ನು ನೋಡಿದರೆ ತುಂಬ ಸಂತೋಷಪಡುತ್ತೀ. ಇತ್ತೀಚೆಗೆ ಆ ಮ್ಯೂಸಿಯಂನಿಂದ ಬುದ್ಧನ ವಿಗ್ರಹವೊಂದನ್ನು ನಾನು ತಂದಿದ್ದೇನೆ."

ಈಗ ಮತ್ತೆ ಲೀಸಾಳ ಗಮನ ತನ್ನ ಸುತ್ತಲಿನ ಪರಿಸರದತ್ತ ಹೋಯಿತು. ಮತ್ತೆ ಲೀಸಾಳ ಕಡೆ ತಿರುಗಿ ರಿಚರ್ಡ್ ಹೇಳಿದ, "ಈ ಪ್ರದೇಶದಲ್ಲಿ ವಾಸಿಸುವ ಜನ ಕೂಡ ನೂರಾರು ವರ್ಷಗಳಿಂದ ಇಲ್ಲೇ ನೆಲೆಸಿದವರು... ಇಲ್ಲಿಯ ನಿವಾಸಿಗಳ ಕಣ್ಣುಗಳು ಕಂದು ಬಣ್ಣವವೆಂಬುದನ್ನು ನೀನು ಗಮನಿಸಿದ್ದೀಯಾ, ಲೀಸಾ?"

ಇಷ್ಟು ಹೊತ್ತಿಗೆ ಲೀಸಾಳಿಗೆ ಬೇಸರ ಬಂದಿತ್ತು. ಈ ರಿಚರ್ಡ್‌ನ ವಾಗ್ಧಾರೆಗೊಂದು 'ಬ್ರೇಕ್' ಒತ್ತಿ ಕೇಳಿದಳು, "ಇಲ್ಲಿ ಎಲ್ಲೂ ವನಭೋಜನಕ್ಕೆ ಎಡೆಯಿಲ್ಲವೇ?"

ರಿಚರ್ಡ್‌ಗೆ ಈ ಪ್ರಶ್ನೆ ಕೇಳಿ ಮುಖಕ್ಕೆ ಹೊಡೆದಂತಾಗಿ ತಬ್ಬಿಬ್ಬಾಯಿತು.

"ಬೇಕಾದಷ್ಟಿವೆ," ಎಡಗಡೆಯ ಪರ್ವತ ಶಿಖರಗಳ ಕಡೆ ತೋರಿಸುತ್ತ ಹೇಳಿದ.

"ಅಲ್ಲಿ ಆ ಪರ್ವತದ ತಪ್ಪಲಿನಲ್ಲೊಂದು ಜಲಪಾತವಿದೆ. ತನ್ನ ಉಗಮ ಸ್ಥಾನದಿಂದ ಹೊರಟ ಜಲಸ್ರೋತ ಆ ಪರ್ವತದವರೆಗೂ ಗುಪ್ತಗಾಮಿನಿಯಾಗಿ ತಲುಪಿ ಅಲ್ಲಿಂದ ಜಲಪಾತವಾಗಿ ಧುಮುಕುತ್ತದೆ. ಅಲ್ಲಿ ವಸಂತಋತುವಿನಲ್ಲಿ ಜಾತ್ರೆ ನಡೆಯುತ್ತದೆ."

"ಈಗ ಅಲ್ಲಿ ಅಂಥ ಜಾತ್ರೆ ನಡೆಯುತ್ತಿದೆಯೇ?,"

"ಹೌದು, ಈಗಲೂ ನಡೆಯುತ್ತಿದೆ. ಆದರೆ ಇನ್ನು ಕೆಲವು ದಿನ ನಾವು ಅಲ್ಲಿಗೆಲ್ಲ ಹೋಗುವುದು ಸರಿಯಲ್ಲ. ಈಚೆಗೆ ಹಿಂದುಗಳಿಗೂ ಮುಸಲ್ಮಾನರಿಗೂ ಮಧ್ಯೆ ವೈಮನಸ್ಸು ಏರ್ಪಟ್ಟಿದೆ. ಹೊಡೆದಾಟಗಳಾಗಬಹುದು ಎಂಬ ಭೀತಿಯಿದೆ."

ಇಬ್ಬರೂ ದಿಬ್ಬವನ್ನಿಳಿಯತೊಡಗಿದರು.

"ಈ ಪ್ರದೇಶದಲ್ಲಿ ತಿರುಗಾಟ ತುಂಬ ಸೊಗಸು, ನಿನಗೂ ಇಷ್ಟವಾಗುತ್ತದೆ...."

"ಈ ವಾರದ ಕೊನೆಯಲ್ಲಿ ಎಲ್ಲಿಗೆ ಕರೆದು

ಕೊಂಡು ಹೋಗುತ್ತೀ?.. ತಕ್ಷಶಿಲೆಗೋ."

"ಎಲ್ಲೋ ಒಂದು ಕಡೆ ಹೋದರಾಯಿತು" ಎಂದು ಮಣ ಮಣಸುತ್ತ ಕುದುರೆಯಿಂದ ಕೆಳಗಿಳಿದು ಲಗಾಮನ್ನು ಮಡಿಸತೊಡಗಿದ.

ಬೆಳಗಿನ ಉಪಾಹಾರ ಸೇವಿಸುವುದಕ್ಕೆ ಮೊದಲು ರಿಚರ್ಡ್ ಮತ್ತು ಲೀಸಾ ವಿಶಾಲವಾದ ಹಜಾರಕ್ಕೆ ಬಂದರು: ಈಗ ಅವರಿಬ್ಬರೂ ಬುದ್ಧನ ಪ್ರತಿಮೆಯ ಮುಂದೆ ನಿಂತಿದ್ದರು.

"ನೋಡಿದೆಯಾ!" ಸಂಭ್ರಮಪಡುತ್ತ ರಿಚರ್ಡ್ ಹೇಳಿದ. ಹೌದು, ಬುದ್ಧನ ಮುಖದ ಮೇಲೆ ಲಾಸ್ಯವಾಡುತ್ತಿದ್ದ ಮೇಲು ನಗೆ ಈಗ ಕೊಂಚ ಅರಳಿದೆಯಲ್ಲ ಎಂದುಕೊಂಡಳು ಲೀಸಾ.

ಆ ಕೋಣೆಯಲ್ಲಿ ಓಡಾಡುತ್ತಿರುವಾಗ ಯಾರಾದರೂ ರಿಚರ್ಡ್‌ನನ್ನು ನೋಡಿದರೆ ಅವನು ಆ ಜಿಲ್ಲೆಯ ಅತ್ಯುನ್ನತ ಅಧಿಕಾರಿ ಎಂದು ಹೇಳಲು ಸಾಧ್ಯವಾಗುತ್ತಿರಲಿಲ್ಲ. ಇಲ್ಲಿರುವಾಗ ಅವನು ಭಾರತೀಯ ಇತಿಹಾಸದ ಮರ್ಮಜ್ಞ, ಭಾರತೀಯ ಕಲೆಯ ಉಪಾಸಕ.

ಇಬ್ಬರೂ ಡ್ರೆಸಿಂಗ್ ರೂಮಿನ ಕಡೆ ಹೊರಟರು. ರಿಚರ್ಡ್ ಮೇಜಿನ ಬಳಿ ತಡೆದು ನಿಂತ.

"ಏನು ಯೋಚನೆ?," ರಿಚರ್ಡ್‌ನ ಹೆಗಲಿನ ಮೇಲೆ ಕೈಹಾಕುತ್ತ ಲೀಸಾ ಕೇಳಿದಳು. ಅಷ್ಟು ಹೊತ್ತಿಗೆ ಅಡಿಗೆಯಾಳು ಮೆಲ್ಲನೆ ಮುಂದೆ ಬಂದು ಕಾಲಸಪ್ಪಳವೂ ಕೇಳಿಬರದಂತೆ ಮೇಜಿನ ಮೇಲೆ ತಿಂಡಿಯನ್ನು ಬಡಿಸತೊಡಗಿದ.

"ಈ ಸಲ ನೀನು ಯಾವುದಾದರೊಂದು ಹವ್ಯಾಸದಲ್ಲಿ ಮನಸ್ಸನ್ನು ತೊಡಗಿಸುವುದು ಮೇಲು ಲೀಸಾ."

"ಎಂತಹ ಹವ್ಯಾಸ?,"

"ಹವ್ಯಾಸಗಳಿಗೇನು ಕಮ್ಮಿ?,"

"ಹೌದು, ರೆಡ್‌ಕ್ರಾಸ್‌ಗೋಸ್ಕರ ಚಂದಾ ಸಂಗ್ರಹಿಸು, ಫ್ಲವರ್-ಶೋ ಏರ್ಪಡಿಸು, ಇಂತಹ



ಅಂದು-ಇಂದು

- ಅಂದು
ನೀನು ನನ್ನ ಬಾಳ ಬೆಳಕು
ಎನ್ನುತ್ತಿದ್ದ
- ಇಂದು
ನೀನು ನನ್ನ ಬಾಳ ಹುಳುಕು
ಎನ್ನುತ್ತಿದ್ದಾನೆ.

✷ ಸಹನಾ ಕಾಂತಬೈಲು

ಕಾರ್ಯಕ್ರಮಗಳು ತಾನೆ?"

"ನಾನು ಗೇಲಿ ಮಾಡುತ್ತಿಲ್ಲ. ನೀನು ಯಾವುದಾದರೊಂದು ಕೆಲಸ ಮಾಡಬೇಕೆಂದೇ ನನ್ನ ಅಭಿಪ್ರಾಯ. ಲೀಸಾ, ಇಲ್ಲೇನೋ ದೊಡ್ಡ ಗಲಾಟೆ ಆಗುವ ಲಕ್ಷಣಗಳು ಕಾಣುತ್ತಿವೆ."

ಲೀಸಾ, ರಿಚರ್ಡ್‌ನ ಮುಖವನ್ನೇ ನೋಡತೊಡಗಿದಳು. "ಗಲಾಟೆಯೋ ಅಥವಾ ಮತ್ತೊಂದು ಯುದ್ಧವೋ?,"

"ಯುದ್ಧವಲ್ಲ, ಆದರೆ ಹಿಂದುಗಳಿಗೂ ಮುಸಲ್ಮಾನರಿಗೂ ವೈಮನಸ್ಸು ಬೆಳೆಯುತ್ತಿದೆ."

"ನೀವು ಇವರನ್ನು ಕಚ್ಚಾಡದಂತೆ ತಡೆಯಬಹುದಲ್ಲ. ಇವರೆಲ್ಲ ಒಂದೇ ಜನಾಂಗಕ್ಕೆ ಸೇರಿದ ಜನ ತಾನೇ?,"

ರಿಚರ್ಡ್‌ಗೆ ಹೆಂಡತಿಯ ಮುಗ್ಧತೆಯನ್ನು ಕಂಡು ಸಂತೋಷವಾಯಿತು. ಅವಳ ಕೆನ್ನೆಯನ್ನು ಚುಂಬಿಸಿದ.

ಆಪ್ಪರಲ್ಲಿ ಅಡುಗೆಯವನು ಬೆಳಿಗ್ಗೆ ಬಂದು ತಟ್ಟೆಯನ್ನು ಸಾಹೇಬನ ಮುಂದೆ ಹಿಡಿದ. ಅದರ ಮೇಲೆ ಒಂದು ಕಾಗದವನ್ನು ಮಡಿಸಿ ಇಟ್ಟಿದ್ದರು. ರಿಚರ್ಡ್ ಆ ಕಾಗದವನ್ನು ಓದಿಕೊಂಡ ಮೇಲೆ ಮೊದಲಿನಂತೆಯೇ ಮಡಿಚಿ ತಟ್ಟೆಯ ಮೇಲಿಟ್ಟು ಬಿಟ್ಟ.

"ಅದು ಯಾರು ಕಳಿಸಿದ್ದು?,"

"ಪೊಲೀಸ್ ಸುಪರಿಂಟೆಂಡೆಂಟ್ ಕಳಿಸಿದ್ದು."

ಲೀಸಾಗೆ ರಿಚರ್ಡ್ ತನ್ನಿಂದ ಏನನ್ನೋ ಬಚ್ಚಿಡುತ್ತಿದ್ದಾನೆ ಅನ್ನಿಸಿತು.

"ನೀನು ನನಗೆ ತಿಳಿಸದೆ ಏನನ್ನೋ ಬಚ್ಚಿಡುತ್ತಿದ್ದೀ."

"ಬಚ್ಚಿಡುವಂತಹದ್ದು ಏನು ತಾನೆ ಇದ್ದೀತು? ಅವನು ಬರೆದಿರುವುದು ಇಷ್ಟೇ-ಊರಿನಲ್ಲಿ ಹಿಂದು ಮುಸ್ಲಿಂರ ನಡುವೆ ಸ್ವಲ್ಪ ವೈಮನಸ್ಸು ಕಂಡು ಬರುತ್ತಿದೆ."

"ಈಗ ನೀನೇನು ಮಾಡಬೇಕೆಂದಿರುವೆ, ರಿಚರ್ಡ್?"

"ನಾನಿನ್ನೇನು ಮಾಡುತ್ತೇನೆ. ಲೀಸಾ, ಆಡಳಿತ ನಡೆಸುತ್ತೇನೆ, ಅಷ್ಟೇ."

## ಅಧ್ಯಾಯ-೫

ಪ್ರಭಾತ್‌ಫೇರಿಗೆ ಹೊರಟವರು ಗಲ್ಲಿಗಳನ್ನೆಲ್ಲ ದಾಟಿಕೊಂಡು ಇಮಾಮ್‌ದೀನನ ಮೊಹಲ್ಲವನ್ನು ತಲುಪುವ ಹೊತ್ತಿಗೆ ಬೆಳಕು ಹರಿಯುತ್ತಿತ್ತು. ಹೋಗ ಹೋಗುತ್ತ ಅವರು ದಾರಿಯಲ್ಲಿ ಶೇರ್‌ಖಾನನ ಮನೆಯಿಂದ ಪೊರಕೆ, ಸಲಿಕೆ ಮುಂತಾದ ಸಾಮಾನುಗಳನ್ನು ತೆಗೆದುಕೊಂಡು ಹೊರಟರು. ಶಂಕರ್, ರಾಮದಾಸ್ ಮತ್ತು ಅಜೀಜ್ ಹೆಗಲಿನ ಮೇಲೆ ಪೊರಕೆಗಳನ್ನಿರಿಸಿಕೊಂಡಿದ್ದರು. ದೇಸರಾಜನ ಕೈಯಲ್ಲೂ ಶೇರ್‌ಖಾನನ ಕೈಯಲ್ಲೂ ಮಂಕರಿಗಳಿದ್ದವು. ಜರ್ನೈಲ್ ಗಳುವನ್ನು ಹಿಡಿದಿದ್ದ. ಗಾನಮಂಡಲಿ ಒಂದು ಗಲ್ಲಿಗೆ ತಿರುಗಿಕೊಂಡಿತು.

"ಶೇರ್‌ಖಾನ್ ಮತ್ತು ದೇಸರಾಜ್ ಆ ರಸ್ತೆಗೆ ತಿರುಗಿಕೊಂಡರು. ನೀವೇನು ಯೋಚಿಸಬೇಡಿ ಬಕ್ಷೀಜಿ; ಮಸೀದಿಯ ಮುಂದೆ ಹಾದು ಹೋಗುವಾಗ ನಾವೆಲ್ಲ ಹಾಡನ್ನು ನಿಲ್ಲಿಸಿಬಿಡುತ್ತೇವೆ,".

"ಬೇಡಪ್ಪ, ಆ ತಕರಾರೆಲ್ಲ ಬೇಡ. ಸುಮ್ಮನೆ ಹಿಂದಕ್ಕೆ ಬನ್ನಿ."

ಎಲ್ಲರೂ ಹಿಂತಿರುಗಿದರು.

ಸ್ವಲ್ಪ ದೂರ ಹೋದ ಮೇಲೆ ದೊಡ್ಡಿಯ ಹತ್ತಿರ ಅವರೆಲ್ಲ ನಿಂತುಕೊಂಡರು. ಆ ಬೀದಿಯ ಮನೆಗಳಲ್ಲಿ ಹೆಚ್ಚಿನವು ಒಂದಂ ಕಣದ ಮನೆಗಳೆ. ಮಹಡಿಯ ಮನೆ ಒಂದೂ ಇಲ್ಲ. ಒಂದು ರಸ್ತೆಯಲ್ಲಿ ಚರಂಡಿಗಳೇನೋ ಇದ್ದವು, ಆದರೆ ಅವು ಸಿಮೆಂಟಿನವಲ್ಲ. ನಡು ಬೀದಿಯಲ್ಲೇ ದನಕರುಗಳನ್ನು ಕಟ್ಟಿದ್ದರು.

"ಗುದ್ದಲಿ ಪಿಕಾಸಿಗಳನ್ನು ಕೈಗೆತ್ತಿಕೊಳ್ಳಿ, ಇನ್ನು ನಿರ್ಮಲೀಕರಣದ ಕಾರ್ಯ ಮೊದಲಾಗಲಿ," ಎಂದರು ಬಕ್ಷಿ.

ಮೆಹತಾ, ರಾಮದಾಸ್ ಬಾಣಲಿಗಳನ್ನೆತ್ತಿಕೊಂಡು ಬಯಲಿನ ಕಡೆ ಹೊರಟರು. ಶೇರ್‌ಖಾನ್, ದೇಸರಾಜ್ ಮತ್ತು ಬಕ್ಷಿ ಪೊರಕೆಯನ್ನು ಕೈಗೆತ್ತಿಕೊಂಡು ಕಸಗುಡಿಸತೊಡಗಿದರು. ಸುತ್ತಮುತ್ತ ಇದ್ದ ಜನ ನಡೆಯುತ್ತಿರುವ ಚಟುವಟಿಕೆಯ ಅರ್ಥವೇನೂ ತಿಳಿಯದೆ ತಬ್ಬಿಬ್ಬಾದರು. ಅದೇ ವೇಳೆಗೆ ಕಮಿಟಿಯ ಮೈದಾನದ ಕಡೆಯಿಂದ ಯಾರೋ ಒಬ್ಬ ಮನುಷ್ಯ ಓಡುತ್ತೋಡುತ್ತ ಬಂದವನು ಶೇರ್‌ಖಾನನ ಮನೆಯ ಪಕ್ಕದ ಓಣಿಯಲ್ಲಿ ದಾಟಿ ಒಂದು ಕಡೆ ನೆರೆದಿದ್ದ ಮೊಹಲ್ಲಾದ ಜನರ ಬಳಿಗೆ ಹೋಗಿ ಏನೋ ಪಿಸುಗುಟ್ಟತೊಡಗಿದ. ಯಾವುದೋ ಕಾರಣದಿಂದ ಅವನು ಉದ್ವೇಗಗೊಂಡಂತೆ ಕಾಣುತ್ತಿದ್ದ. ಒಮ್ಮೆಗೇ ಎಲ್ಲೆಲ್ಲೂ

ಭೀತಿ ತಾಂಡವವಾಡತೊಡಗಿತು. ಇದೇನಾಗಿರಬಹುದು ? ಎಂದು ತಿಳಿಯದೆ ಕಾಂಗ್ರೆಸ್ ಕಾರ್ಯಕರ್ತರೆಲ್ಲ ತಬ್ಬಿಬ್ಬಾದರು.

ಅಷ್ಟರಲ್ಲಿ ಎಲ್ಲಿಂದಲೋ ಒಂದು ಕಲ್ಲು ಹಾರಿ ಬಂದು ಬಕ್ಷಿಯವರ ಬಳಿ ಬಿತ್ತು. ಶಂಕರನೂ ಕಶ್ಮೀರಿಯೂ ಏನೂ ತೋಚದವರಂತೆ ಕಕ್ಕಾಬಿಕ್ಕಿಯಾಗಿ ಸುಮ್ಮನೆ ಬಕ್ಷಿಯವರನ್ನು ನೋಡುತ್ತ ನಿಂತರು. ಮೊಹ್ಯಾಲರ ಗಲ್ಲಿಗೆ ತಿರುಗಿಕೊಂಡ ಮೇಲೆ ಗಲ್ಲಿಯ ತುದಿಯಲ್ಲಿ ಮೂರು ನಾಲ್ಕು ಜನ ಒಂದು ಕಡೆ ನಿಂತಿರುವುದು ಅವರಿಗೆ ಕಂಡುಬಂತು. ಅವರ ಪೈಕಿ ಬಕ್ಷಿಯವರಿಗೆ ಪರಿಚಯವಿದ್ದ ಮೊಹ್ಯಾಲನೊಬ್ಬ ಮುಂದೆ ಬಂದು, ಆ ಕಡೆ ಹೋಗಬೇಡಿ ಎಂದು ಸಲಹೆ ಕೊಟ್ಟ.

“ಹೇಳಪ್ಪ ಸಂಗತಿ ಏನು ಅಂತ.”

“ಅಲ್ಲಿ ನೋಡಿ, ಈ ಗಲ್ಲಿಯ ಆಚೆ ಮಸೀದಿಯ ಮುಂಬಾಗಿಲಿನ ಮುಂದೆ ಯಾರೋ ಹಂದಿಯನ್ನು ಹೊಡೆದು ಅಲ್ಲಿ ಹಾಕಿದ್ದಾರೆ.”

ಎಲ್ಲರೂ ಆ ಕಡೆ ನೋಡಿದರು.

“ನಡೆಯಿರಿ. ಎಲ್ಲರೂ ಹಿಂತಿರುಗಿ ಹೋಗೋಣ,” ರಾಮದಾಸ ಮೆಲ್ಲಗೆ ಹೇಳಿದ. ಆಗೊಮ್ಮೆ ಈಗೊಮ್ಮೆ ರಸ್ತೆಯಲ್ಲಿ ಓಡಾಡುತ್ತಿದ್ದ ಮುಸಲ್ಮಾನರು ಮಸೀದಿಯ ಬಳಿಗೆ ಬರುತ್ತಿದ್ದ ಹಾಗೆಯೇ ಮುಖ ತಿರುಗಿಸಿಕೊಂಡು ಬೇಗನೆ ಮುಂದೆ ಹೋಗಿ ಬಿಡುತ್ತಿದ್ದರು. ಇದ್ದಕ್ಕಿದ್ದಂತೆ ಮಸೀದಿಯ ಪಕ್ಕದಿಂದ ಯಾರೋ ಓಡುತ್ತ ಬರುತ್ತಿರುವ ಸದ್ದು ಕೇಳಿಬಂತು. ಮೊಹ್ಯಾಲರ ಬೀದಿಯಲ್ಲಿ ಜನರೆಲ್ಲ ಮನೆಗಳ ಬಾಗಿಲನ್ನು ಮುಚ್ಚತೊಡಗಿದರು. ಬಕ್ಷಿಯವರಿಗೆ ಮೊಹ್ಯಾಲ್, “ನೀವೆಲ್ಲ ಇಲ್ಲಿ ಇದ್ದಷ್ಟೂ ವಾತಾವರಣ ಬಿಸಿಯಾಗುತ್ತಾ ಹೋಗುತ್ತೆ,”ಎಂದು ಎಚ್ಚರಿಕೆ ಕೊಟ್ಟ. ಬಕ್ಷಿಯವರು ಮೊಹ್ಯಾಲ್‌ನಿಗೆ, “ಮೊದಲು ಈ ಸತ್ತ ಹಂದಿಯನ್ನು ಸಾಗಿಸಿಬಿಡೋಣ,”ಎಂದು ಹೇಳಿದರು.




ಮೆಹತಾ ಇನ್ನೂ ಆ ಗಲ್ಲಿಯಲ್ಲೇ ಗೋಡೆಗೊರಗಿಕೊಂಡು ನಿಂತಿದ್ದರು. ಬಕ್ಷಿ ಜರ್ನೈಲ್ ಹಂದಿಯ ಕಾಲುಗಳನ್ನು ಹಿಡಿದುಕೊಂಡು, ಹಾಗೇ ಎಳೆದುಕೊಂಡು ಹೋಗಿ ರಸ್ತೆಯಾಚೆಗಿದ್ದ ಇಟ್ಟಿಗೆಯ ರಾಶಿಯ ಹಿಂದೆ ತಳ್ಳಿ ಮರೆ ಮಾಡಿದರು. ಅಷ್ಟರಲ್ಲಿ ಬಾವಿಯ ಕಡೆಯಿಂದ ಒಂದು ಹಸು ಓಡಿ ಬರುತ್ತಿತ್ತು. ಹಸುವನ್ನು ತರುಬಿಕೊಂಡು ಬಂದ ಆಸಾಮಿ ಆ ರಸ್ತೆಯನ್ನು ಹಾಯ್ದು ಬಲಗಡೆಯ ಮತ್ತೊಂದು ಗಲ್ಲಿಯೊಳಗೆ ನುಸುಳಿದ.

ಬಕ್ಷಿ ಎಷ್ಟೋ ಹೊತ್ತಿನವರೆಗೆ ಬೆಪ್ಪು ಹಿಡಿದವರಂತೆ ನಿಂತೇ ಇದ್ದರು.

# ಪುಸ್ತಕ ವಿಭಾಗ

## ಅಧ್ಯಾಯ-೬

ಸಾಪ್ತಾಹಿಕ ಸತ್ಸಂಗದ ಸಭೆ ಮುಕ್ತಾಯವಾಗುವದಕ್ಕೆ ಮೊದಲು ವಾನಪ್ರಸ್ಥಿಯವರು ಶ್ಲೋಕ ಪಠಣ ಆರಂಭಿಸಿದರು.

"ಸರ್ವೇ ಭವಂತು ಸುಖಿನಃ.... ಭಾಗ್ಭವೇತ್!,"

ಉಪನಿಷತ್ತಿನ ಶ್ಲೋಕವನ್ನು ಪಠಿಸಿ ಆಮೇಲೆ ಗೀತೆಯಿಂದ ಎರಡು ಶ್ಲೋಕಗಳನ್ನು ಆರಿಸಿ ಹೇಳಿದರು.

"ಆಪೂರ್ಯಮಾಣಂ... ನಕಾಮ ಕಾಮಿ!,"

ಸಭಾಸದರೆಲ್ಲ ತಾವೂ ದನಿಗೂಡಿಸಿ ಹಾಡಿದರು. ಕೊನೆಯಲ್ಲಿ ಶಾಂತಿ ಪಾಠ.

"ಓಂ ದ್ಯೌ ಶಾಂತಿರಂತರಿಕ್ಷಂ ಶಾಂತಿ.... ಓಂ ಶಾಂತಿಃ ಶಾಂತಿಃ ಶಾಂತಿಃ,"

ಈ ಮಂತ್ರೋಚ್ಚಾರದ ಪ್ರಭಾವದಿಂದ ಎಲ್ಲೆಲ್ಲೂ ನಿಜವಾಗಿ ಶಾಂತಿ ಹರಡುತ್ತಿದೆ ಎನ್ನಿಸುವಂತಿತ್ತು. ಮಂತ್ರ ಪಾಠವಾದ ಮೇಲೆ ಪ್ರಾರ್ಥನೆ ಹಾಡುವುದು ವಾಡಿಕೆ. ವಾನಪ್ರಸ್ಥಿಯವರು ಹಾಡ ತೊಡಗಿದರು:

"ಸಬ್ ಪರ್ ದಯಾಕರೋ ಭಗವಾನ್
ಸಬ್ ಪರ ಕೃಪಾಕರೋ ಭಗವಾನ್,"

'ಪೂರ್ಣಾಹುತಿ' ಮುಗಿಯಿತು. ಸಭೆಯ ಕಾರ್ಯದರ್ಶಿಗಳು ಸಭಾಸದರಿಗೆ, "ಅಂತರಂಗ ಸಭೆಯ ಸದಸ್ಯರುಗಳನ್ನುಳಿದು ಮಿಕ್ಕವರೆಲ್ಲ ಮನೆಗಳಿಗೆ ತೆರಳಬಹುದು. ಆಮೇಲೆ ವಿಶೇಷ ಸಂಗತಿಯೊಂದನ್ನು ಚರ್ಚಿಸಬೇಕಾಗಿದೆ,"ಎಂದು ಘೋಷಿಸಿದರು. ಸಭೆಯಲ್ಲಿದ್ದವರಿಗೆಲ್ಲ ಯಾವ ವಿಷಯ ಚರ್ಚೆಗೆ ಬರಬಹುದು ಎಂಬುದರ ಬಗ್ಗೆ ಪೂರ್ಣ ಅರಿವಿತ್ತು. ಕಾರ್ಯದರ್ಶಿ ಮನವಿ ಮಾಡಿಕೊಂಡ ಮೇಲೆ ಸಭಿಕರೆಲ್ಲ ಒಬ್ಬೊಬ್ಬರಾಗಿ ಏಳತೊಡಗಿದರು. ಸಭೆ ಮುಕ್ತಾಯವಾಯಿತು.

ವಾನಪ್ರಸ್ಥಿಯವರೆಂದರು: "ಎಲ್ಲಕ್ಕಿಂತ ಮೊದಲು ನಾವು ಆತ್ಮರಕ್ಷಣೆಯ ವ್ಯವಸ್ಥೆಗೆ ಗಮನಕೊಡಬೇಕು. ಸದಸ್ಯರೆಲ್ಲ ಮನೆಗಳಲ್ಲಿ ಒಂದೊಂದು ಡಬ್ಬ ಸಾಸಿವೆ ಎಣ್ಣೆಯನ್ನು ಸಂಗ್ರಹಿಸಿ ಇಡಿ. ಒಂದೊಂದು ಚೀಲ ಇದ್ದಿಲೋ ಕಲ್ಲಿದ್ದಲೋ ಇಟ್ಟುಕೊಳ್ಳಿ. ಶತ್ರುವಿನ ಮೇಲೆ ಕುದಿಯುವ ಎಣ್ಣೆಯನ್ನು ಸುರಿಯಬಹುದು. ಮಾಳಿಗೆ ಮೇಲಿಂದ ಕಾದಕೆಂಡವನ್ನು ಎಸೆಯಬಹುದು.

ಆಗ ಸದಸ್ಯರು ಕಾರ್ಯದರ್ಶಿಯನ್ನು ಕುರಿತು, "ಈಚೆಗೆ ಯುವಜನ ಸಂಸ್ಥೆಗಳಲ್ಲಿ ಯಾವ ಚಟುವಟಿಕೆಗಳೂ ನಡೆಯುತ್ತಿಲ್ಲ. ತಕ್ಷಣವೇ ಯುವಕರಿಗೆ ಲಾಠೀ ಪ್ರಯೋಗದಲ್ಲಿ ತರಬೇತಿ ನೀಡುವುದು ಮೇಲು."

ವಯೋವೃದ್ಧರೊಬ್ಬರು, "ಇದೆಲ್ಲ ಸರಿಯೆ, ಆದರೆ ನೀವೆಲ್ಲ ಡಿಪ್ಟಿ ಕಮೀಶನರರನ್ನು ಭೆಟ್ಟಿ ಮಾಡಿ,"ಅಂದಾಗ,

"ಡಿಪ್ಟಿ ಕಮೀಶನರನ್ನು ಕಾಣುವುದೇನೋ ಸರಿಯೆ. ಆದರೆ ಆತ್ಮರಕ್ಷಣೆಗೆ ನಾವು ತಾನೆ ವ್ಯವಸ್ಥೆ ಮಾಡಿಕೊಳ್ಳಬೇಕು!,"ಎಂದರು ವಾನಪ್ರಸ್ಥಿಯವರು.

ಕೊಂಚ ಹೊತ್ತು ಯಾರೂ ಮಾತಾಡಲಿಲ್ಲ. ಆಮೇಲೆ ಊರಿನಲ್ಲಿರುವ ಹಿಂದುಗಳನ್ನೂ ಸಿಖ್ಖರನ್ನೂ ಒಟ್ಟುಗೂಡಿಸಿ ಆತ್ಮರಕ್ಷಣೆಗೆ ಏನೇನು ಕೆಲಸಗಳನ್ನು ಮಾಡಬಹುದೆಂದು ಸಭೆಯಲ್ಲಿ ಪರ್ಯಾಲೋಚಿಸಲಾಯಿತು. ಈಗಿನ ಪರಿಸ್ಥಿತಿಯಲ್ಲಿ ಮೊಹಲ್ಲಾ ಕಮಿಟಿಗಳೊಂದಿಗೆ ಸಂಪರ್ಕವನ್ನು ಕಳೆದುಕೊಳ್ಳದೆ ಇರುವುದು ಹೇಗೆ ಎಂಬ ಬಗ್ಗೆಯೂ ಯೋಚಿಸಲಾಯಿತು.

ಕೊನೆಗೆ ಕಾರ್ಯದರ್ಶಿಗಳು ಅಲ್ಲೆ ಉಳಿದು ಚಪರಾಸಿಯ ಕೈಯಲ್ಲಿ ಮನೆ ಮನೆಗೂ ಎಣ್ಣೆ ಲಾಠಿ ಮುಂತಾದ ವಸ್ತುಗಳನ್ನು ಕಳಿಸುವುದೆಂದು ಗೊತ್ತಾಯಿತು. ಅಂತರಂಗ ಸಭೆಯ ಸದಸ್ಯರು ಒಡನೆಯೇ ಡಿಪ್ಟಿ ಕಮೀಶನರ ಮನೆಗೆ ಹೊರಟ

ಬೇಕು ಎಂದು ನಿರ್ಧರಿಸಿದರು.

## ಅಧ್ಯಾಯ-೭

"ಆಫೀಸಿನಲ್ಲಿ ನನ್ನನ್ನು ಕಾಣಲು ಕಾಯದೆ ಮನೆಗೆ ಬಂದುಬಿಟ್ಟಿದ್ದೀರಿ," ರಿಚರ್ಡ್ ಹೇಳಿದ, "ನನ್ನಿಂದೇನಾಗಬೇಕು ಅಪ್ಪಣೆ ಕೊಡೋಣವಾಗಲಿ," ಬಂದಿದ್ದವರಿಗೆ ಡೆಪ್ಯುಟಿ ಕಮೀಶನರ ನಡತೆ ತುಂಬ ಒಪ್ಪಿಗೆಯಾಯಿತು. ಇಷ್ಟು ಹೊತ್ತಿಗೆ ರಿಚರ್ಡ್ ಹಾಜರಿದ್ದ ಗಣ್ಯರು ಯಾರು ಯಾರು ಎಂದು ಮನಸ್ಸಿನಲ್ಲೇ ಪಟ್ಟಿ ಮಾಡಿಕೊಂಡಿದ್ದ.

ಬಕ್ಷಿಯವರ ಕಡೆ ತಿರುಗಿ, "ಊರಿನಲ್ಲಿ ಪರಿಸ್ಥಿತಿ ಹದಗೆಟ್ಟಿದೆ ಎಂದು ಸುದ್ದಿ ಬಂದಿದೆ."

"ಆ ವಿಷಯವಾಗಿಯೇ ತಮ್ಮನ್ನು ಕಾಣಲು ನಾವೆಲ್ಲ ಬಂದಿದ್ದೇವೆ. ಸರಕಾರ ಈ ಕೂಡಲೇ ತಕ್ಕ ಕ್ರಮ ಕೈಗೊಂಡು ಪರಿಸ್ಥಿತಿಯನ್ನು ಹತೋಟಿಗೆ ತರಬೇಕು."

ಬಕ್ಷಿಯವರ ಮಾತಿಗೆ ತಲೆದೂಗಿ, "ಸರಕಾರದ ಮಾತಿಗೆ ಯಾವ ಬೆಲೆಯಿದೆ? ಬ್ರಿಟಿಷ್ ಸರಕಾರದಲ್ಲಿ ನಿಮಗೆ ನಂಬಿಕೆ ಇಲ್ಲ. ಈಗ ಶಕ್ತಿ ಇರುವುದು ನೆಹರೂ ಅವರ ಕೈಯಲ್ಲಿ. ಆದರೆ ಈ ತೊಡಕನ್ನು ನಾವೆಲ್ಲ ಒಂದಾಗಿ ನಿವಾರಿಸಿಕೊಳ್ಳಬೇಕಾಗುತ್ತದೆ," ಎಂದು ಹೇಳಿ ಹಯಾತ್ ಬಕ್ಷ್ ಕಡೆ ನೋಡಿದ.

"ಅದರಲ್ಲಿ ಸಂದೇಹ ಏನು? ಊರಿನಲ್ಲಿ ಗಲಭೆಯಾಗಿ ಹೊಡೆದಾಟಗಳಾಗುವುದು ನಮಗೂ ಇಷ್ಟವಿಲ್ಲ," ಎಂದ ಬಕ್ಷ್.

ರಿಚರ್ಡ್ ಭರವಸೆ ಕೊಡುತ್ತ, "ಸರಕಾರ ಏನು ಮಾಡಬಹುದೋ ಅದನ್ನು ಮಾಡಿಯೇ ಮಾಡುತ್ತದೆ. ಮುಸ್ಲಿಂ ಲೀಗ್, ಕಾಂಗ್ರೆಸ್ ಈ ಎರಡೂ ಸಂಸ್ಥೆಗಳ ಮುಖಂಡರು ಇಲ್ಲಿ ಹಾಜರಿದ್ದೀರಿ. ನಿಮ್ಮ ಜೊತೆ ಸಿಖ್ಖರ ಮುಖಂಡರನ್ನೂ ಕರೆದುಕೊಳ್ಳಿ. ಶಾಂತಿ ಸಮಿತಿಯನ್ನು ಮಾಡಿಕೊಳ್ಳಿ. ಹೀಗೆ ಕೆಲಸ ಪ್ರಾರಂಭಿಸಿದರೆ ಸರಕಾರವೂ ತಪ್ಪದೆ ಬೇಕಾದ ಸಹಾಯವನ್ನೆಲ್ಲ ಮಾಡುತ್ತದೆ."

ರಿಚರ್ಡ್ ಇನ್ನೂ ಈ ಮಾತುಗಳನ್ನು ಹೇಳುತ್ತಿರುವಾಗಲೇ ಹೊರಗೆ ಯಾರೋ ಕಿರುಚುತ್ತಿರುವುದು ಕೇಳಿ ಬಂತು:

"ಸೇತುವೆಯಾಚೆ ಒಬ್ಬ ಹಿಂದುವನ್ನು ಕೊಲೆ ಮಾಡಿದ್ದಾರೆ. ಅಂಗಡಿಗಳನ್ನೆಲ್ಲ ಮುಚ್ಚಿ ಬಿಟ್ಟಿದ್ದಾರೆ."

ಬಂಗಲೆಯಿಂದ ಹೊರಕ್ಕೆ ಬಂದ ಕೂಡಲೇ ಶಿಷ್ಟ ಮಂಡಲಿಯ ಸದಸ್ಯರಿಗೆ ಮಂಕು ಹಿಡಿದ



### ಆಸೆ

ಸಾಹಿತಿ ಆಗಬೇಕೆಂದು
ನನಗಿತ್ತು ಆಸೆ
ಸಾ ಹ್ರಸ್ವವಾಗಿ
ಹಿ ಮಾಯವಾಗಿ
ಕೊನೆಗೂ ಆದೆ
ನಾನು ಸತಿ!

✷ ಸಹನಾ ಕಾಂತಬೈಲು

ಹಾಗಾಯಿತು. "ಊರಿನಲ್ಲಿ ಗಲಾಟೆ ಹೊತ್ತಿಕೊಂಡರೆ ಅನಾಹುತವೇ ಆಗಿ ಬಿಡುತ್ತೆ,"ಎನ್ನುತ್ತ ಬಕ್ಷ್‌ನ ಜೊತೆಯಲ್ಲೇ ಹೆಜ್ಜೆ ಹಾಕತೊಡಗಿದರು.

ಮಧ್ಯಾಹ್ನ ಹನ್ನೆರಡು ಗಂಟೆಯ ಹೊತ್ತಿಗೆ ಲೀಸಾ ವರಾಂಡಕ್ಕೆ ಬಂದಳು. ಅಲ್ಲಿಂದ ಹಾಲಿಗೆ ಬಂದಳು. ಅಲ್ಲಲ್ಲಿ ಇಟ್ಟಿರುವ ಪ್ರತಿಮೆಗಳನ್ನು ನೋಡಿ ಇಲ್ಲಿ ವಿಗ್ರಹಗಳನ್ನಿಟ್ಟಿರದೆ ಎಷ್ಟೋ ಜನ ಬುದ್ಧರು ಸತ್ತ ಮೇಲೆ ಅವರ ತಲೆಗಳನ್ನು ಕಡಿದು ಇಲ್ಲಿ ಜೋಡಿಸಿರುವಂತೆ ಅನ್ನಿಸಿತು. ಎಲ್ಲೆಲ್ಲೂ ಪುಸ್ತಕಗಳನ್ನೂ ಮೂರ್ತಿಗಳನ್ನೂ ಸೇರಿಸಿಟ್ಟಿರುವ ಈ ಮನೆ ಅವಳಿಗೆ ಉಸಿರು ಕಟ್ಟಿಸುವಂತಿತ್ತು. ಲೀಸಾ ತನ್ನ ಕೋಣೆಗೆ ಹೋದಳು. ಅಷ್ಟರಲ್ಲಿ 'ಕಟ್' ಎಂದು ಏನೋ ಬಿದ್ದ ಸದ್ದಾಯಿತು. ಬಲಗಡೆಗೆ ತಿರುಗಿ ನೋಡಿದಳು. ಅಲ್ಲೊಂದು ಹಲ್ಲಿ ಅಂಗಾತವಾಗಿ ಬಿದ್ದು ಒದ್ದಾಡುತ್ತಿತ್ತು. ಮೈ ಜುಮ್ಮೆಂದಿತು.

"ಮೇಮ್‌ಸಾಬ್!,"ಅಡಿಗೆಯವನು ಎದುರಿಗೆ ನಿಂತಿದ್ದ.

"ಡ್ರೆಸ್ಸಿಂಗ್ ಟೇಬಲಿನ ಮೇಲೆ ಹಲ್ಲಿ ಸತ್ತು ಬಿದ್ದಿದೆ. ಎತ್ತಿ ಹಾಕು," ಎಂದು ದರ್ಪದಿಂದ ಹೇಳಿದಳು ಲೀಸಾ.

"ಅಪ್ಪಣೆ ಮೇಮ್‌ಸಾಬ್," ಎಂದು ಬಗ್ಗಿ ಅಲ್ಲಿಂದ ಹೊರಟ.

## ಅಧ್ಯಾಯ-೮

ಆ ಊರಿನಲ್ಲಿ ಎಲ್ಲ ವ್ಯವಹಾರಗಳೂ ಹಿಂದು ಮುಸಲ್ಮಾನರಲ್ಲಿ ಹಂಚಿ ಹೋಗಿದ್ದವು. ಹೆಚ್ಚಿನ ಸಂಖ್ಯೆಯಲ್ಲಿ ಹಿಂದುಗಳು ಜವಳಿ ಅಂಗಡಿಗಳನ್ನು ತೆರೆದಿದ್ದರೆ ಚಪ್ಪಲಿ ಅಂಗಡಿಗಳೆಲ್ಲ ಮುಸಲ್ಮಾನರವು. ಮೋಟರು, ಲಾರಿ ವಹಿವಾಟೆಲ್ಲ ಮುಸಲ್ಮಾನರ ಕೈಯಲ್ಲಿ. ಅಕ್ಕಿ-ಬೇಳೆ ಮಂಡಿಗಳ ಮಾಲಿಕರೆಲ್ಲ ಹಿಂದುಗಳು.

ಊರಿನ ಜನಜೀವನದಲ್ಲಿ ಏರಿಳಿತಗಳೇ ಇರುತ್ತಿರಲಿಲ್ಲ ಎಂದಲ್ಲ. ಕಾಂಗ್ರೆಸ್ ಸಂಸ್ಥೆ ಚಳವಳಿಗಳನ್ನು ನಡೆಸಿದಾಗ ಜನಜೀವನದಲ್ಲಿ ಬಲವಾದ ಏರಿಳಿತ ಕಾಣುತ್ತಿತ್ತು. ಪ್ರತಿ ವರ್ಷವೂ ಸಿಖ್ಖರು ಗುರುಪರ್ವದ ಪ್ರಯುಕ್ತ ಮೆರವಣಿಗೆ ಹೊರಡಿಸಿದಾಗ ಕಲ್ಲೇಟು ಬೀಳುತ್ತದೋ ಏನೋ ಎಂದು ಒಂದು ಬಗೆಯ ಆತಂಕದ ಛಾಯೆ ಹರಡುತ್ತಿತ್ತು. ಮತ್ತೆ ಮೊದಲಿನಂತೆಯೇ ವಾತಾವರಣದಲ್ಲಿ ಸ್ನಿಗ್ಧತೆ ಮೂಡಿ ಜನಜೀವನ ಸಾಗುತ್ತಿತ್ತು.

ಅತ್ತ 'ನಾನ್' ರೊಟ್ಟಿ ತಯಾರಿಸುವ ಫಜಲ್‌ದೀನನ ಅಂಗಡಿಯಲ್ಲಿ ಎಂದಿನಂತೆ ಗುಂಪು ಸೇರಿತ್ತು. ಹುಕ್ಕಾ ಸೇದುತ್ತಾ ಅವರೆಲ್ಲ ಜಗತ್ತಿನ ಆಗು ಹೋಗುಗಳನ್ನು ಚರ್ಚಿಸುತ್ತಿದ್ದರು. ಇಡೀ ಊರಿನಲ್ಲಿ ಗುಲ್ಲೆಬ್ಬಿಸಿದ ಬೆಳಗಿನ ಘಟನೆಯೇ ಇಲ್ಲೂ ಮಾತುಕತೆಗೆ ನಾಂದಿಯಾಯಿತು. ಇದೇ ಅಂಗಡಿಯಲ್ಲಿ ಒಂದು ಪಕ್ಕದಲ್ಲಿ ನತ್ತೂವೂ ಕೂತಿದ್ದ. ಆ ಹಂದಿ ದೊಡ್ಡಿಯನ್ನು ಬಿಟ್ಟು ಹೊರಟ ಮೇಲೆ ಎಲ್ಲಾದರೂ ಒಂದು ಕ್ಷಣ ಕೂತರೆ ಅಲ್ಲಿ ಜನ ಆ ಹಂದಿಯ ಸುದ್ದಿಯನ್ನೇ ಚರ್ಚಿಸತೊಡಗುತ್ತಿದ್ದರು. ನತ್ತೂ ಮತ್ತೊಮ್ಮೆ ಜೇಬನ್ನು ಮುಟ್ಟಿ ನೋಡಿಕೊಂಡ. ಅವನಿಗೆ ಒಳಗೊಳಗೇ ತುಂಬ ಆತಂಕ. ಯಾರೊಂದಿಗೆ ಹೇಳಿಕೊಳ್ಳಬೇಕು? ಈಗ ಅವನನ್ನು ಹೆಂಡತಿಯ ನೆನಪು ಕಾಡತೊಡಗಿತು. ನತ್ತೂ ಯೋಚಿಸಿದ- ನನ್ನ ಹೆಂಡತಿ ತುಂಬ ತಾಳ್ಮೆಯುಳ್ಳವಳು, ಪ್ರೇಮಮಯಿ.

"ಏನದು ಸದ್ದು?"ಯಾರೋ ವಿಚಾರಿಸಿದರು.

"ಡಂಗುರದವರು ಇತ್ತ ಕಡೆಗೇ ಬರುತ್ತಿರುವ ಹಾಗಿದೆ,"ಯಾರೋ ಜವಾಬು ಹೇಳಿದರು.

ಕಾಂಗ್ರೆಸ್ ಧ್ವಜವನ್ನು ಹೊತ್ತ ಟಾಂಗಾ ಒಂದು ರೊಟ್ಟಿಯವನ ಅಂಗಡಿಯ ಮುಂದೆಯೇ ನಿಂತಿತು. ಒಡನೆಯೇ ತಮಟೆಯ ಸದ್ದೂ ನಿಂತಿತು. ಎದ್ದು ನಿಂತ ವ್ಯಕ್ತಿ ಡಂಗುರ ಸಾರತೊಡಗಿದ:

"ದೇಶದ ಬಗ್ಗೆ ಯೋಚಿಸಿರಿ,

ಆಪತ್ಕಾಲ ಬರುವುದಿದೆ."

"ಸ್ನೇಹಿತರೆ, ಇಂದು ಸಂಜೆ ಆರು ಗಂಟೆಗೆ ಗಂಜ್ ಮಂಡಿಯಲ್ಲಿ ಕಾಂಗ್ರೆಸ್ ಕಮಿಟಿ ಬಹಿರಂಗ ಸಭೆಯನ್ನು ನಡೆಸಲಿದೆ. ತಾವೆಲ್ಲ ಹೆಚ್ಚಿನ ಸಂಖ್ಯೆಯಲ್ಲಿ ಬಂದು ಸಭೆಯನ್ನು ನಡೆಸಿಕೊಡಬೇಕು."

ತಮಟೆಯನ್ನು ಹಿಡಿದು ಕೂತಿದ್ದವನು ಜರ್ನೈಲ್, ಡಂಗುರ ಸಾರಿದವನು ಶಂಕರ್. ಗಾಳಿಯಲ್ಲಿ ಹಾರಾಡುತ್ತಿದ್ದ ಧ್ವಜವನ್ನು ಹೊತ್ತು ಗಾಡಿ ಮುಂದೆ ಹೊರಟಿತು.

ನತ್ಥೂ ಅಲ್ಲಿಂದ ಹೊರಟಾಗ ನಡು ಮಧ್ಯಾಹ್ನವಾಗಿತ್ತು. ಈಗ ಜನ ತಮ್ಮ ತಮ್ಮಲ್ಲೇ ಮಸೀ



ದಿಯ ಮುಂದೆ ಸತ್ತ ಹಂದಿಯನ್ನು ತಂದು ಎಸೆದವನ ಬಗ್ಗೆ ಮಾತನಾಡಿಕೊಳ್ಳುತ್ತಿದ್ದರು. ಅವನಿಗೆ ಸಹಸ್ರನಾಮಾರ್ಚನೆ ಮಾಡಿ ಅವನನ್ನೂ ಆ ಘಟನೆಯನ್ನು ಮರೆತುಬಿಡುತ್ತಿದ್ದರು. ಹೀಗಿರುವಾಗ ಇಂಥ ಸಣ್ಣ ಮಾತನ್ನು ದೊಡ್ಡದು ಮಾಡಿಕೊಂಡು ನತ್ಥೂವೇಕೆ ಕೊರಗಬೇಕು? ಹಾಗೆ ಗಮನಿಸಿ ನೋಡಿದಾಗ ಹಂದಿಯನ್ನು ಹೊಡೆದವನು ತಾನೆಂಬ ಸಂಗತಿ ಯಾರಿಗೂ ಗೊತ್ತಿಲ್ಲ ಎಂಬುದೂ ಅವನಿಗೆ ಖಾತರಿಯಾಯಿತು. ಎಲ್ಲೂ ಆತಂಕಕ್ಕೆ ಕಾರಣವಿಲ್ಲ ಎಂಬಂತೆ ನತ್ಥೂ ನಿರಾಳವಾಗಿ ಅತ್ತಿತ್ತ ಅಡ್ಡಾಡತೊಡಗಿದ. ಸಂಜೆಯಾಗುತ್ತಿದ್ದ ಹಾಗೆ ಕಬಾಬ್ ಮಾರುವವನ ಅಂಗಡಿಗೆ ಹೋಗಿ ಎಂಟಾಣೆಯ ಕಬಾಬನ್ನು ಕಟ್ಟಿಸಿಕೊಂಡ. ಅಲ್ಲಿಂದ ನೇರವಾಗಿ ಹೆಂಡದಂಗಡಿಗೆ ಹೋಗಿ ಹೆಂಡ ಹೀರುತ್ತ, ಕಬಾಬನ್ನು ನೆಂಜಿಕೊಳ್ಳುತ್ತ ತನ್ನ ಪಾಲಿನ ಸುಖವನ್ನನುಭವಿಸತೊಡಗಿದ.

ಸಂಜೆಯ ಮಬ್ಬು ಹರಡುತ್ತಿತ್ತು. ಯಾವಾಗ ಸೂಳೆಗೇರಿಯ ಗಲ್ಲಿಗೆ ಬಂದನೋ ಅವನಿಗೆ ಗೊತ್ತಿಲ್ಲ. ಅದೇ ಸಮಯಕ್ಕೆ ಸರಿಯಾಗಿ ಎದುರು ಬೀದಿಯಿಂದ ಮುರಾದ್ ಅಲಿ ಬರುತ್ತಿರುವುದು ನತ್ಥೂವಿಗೆ ಕಾಣಿಸಿತು. ದಿಕ್ಕು ತೋಚದವನಂತೆ ಕ್ಷಣ ಕಾಲ ನತ್ಥೂ ಆ ಗಲ್ಲಿಯಲ್ಲಿ ನಿಂತಿದ್ದವನು ಸುಧಾರಿಸಿಕೊಂಡು, "ಸ್ವಾಮಿ, ಅಲಿ ಸಾಹೇಬರೆ, ನಾನು ಹೇಳುವುದಕ್ಕೆ ಮರೆತುಬಿಟ್ಟೆ. ಆ ಕೆಲಸವನ್ನು ಮಾಡಿ ಮುಗಿಸಿದ್ದೇನೆ ಹುಜೂರ್."

ಅವನು ಇಷ್ಟು ಹೇಳುವ ಹೊತ್ತಿಗೆ ಮುರಾದ್ ಅಲಿ ಮತ್ತೆ ಹಿಂದಿರುಗಿ ಬಿರ ಬಿರನೆ ಮುಂದೆ ಹೊರಟುಬಿಟ್ಟ ಎನಿಸಿತು. ನತ್ಥೂ ಆಶ್ಚರ್ಯದಿಂದ ಕಣ್ಣೆತ್ತಿ ನೋಡಿದ. ಮುರಾದ್ ಅಲಿ ಎಷ್ಟೋ ದೂರ ಹೋಗಿ ಬಿಟ್ಟಿದ್ದ.

ಬಾಗಿಲನ್ನು ತೆಗೆಯುತ್ತಲೇ ಹೊಸ್ತಿಲ ಮೇಲೆ ನತ್ಥೂವನ್ನು ಕಂಡ ಅವನ ಹೆಂಡತಿಯ ಮನಸ್ಸು ನಿರಾಳವಾಯಿತು. ಆತಂಕದ ಹೆಪ್ಪು ಕರಗಿದೊಡನೆಯೇ ಕಣ್ಣಲ್ಲಿ ನೀರಾಡತೊಡಗಿತು. "ನೀನು ಹೀಗೆಲ್ಲಾ ಮಾಡಬೇಡ, ಇದೆಂಥ ರೀತಿಯಪ್ಪ, ಹೀಗೆ ಗೋಳು ಹೊಯ್ದುಕೊಳ್ಳುವುದೇ ನನ್ನ," ಎನ್ನುತ್ತ ಅಳುತ್ತ, ಮಂಚದ ಮೇಲೆ ಕುಳಿತಳು.

"ಈ ಬೀದಿಯವರೆಲ್ಲ ನನ್ನ ಬಗ್ಗೆ ವಿಚಾರಿಸಿದರೆ?"

"ಕೇಳಿದರು, ಇನ್ನೇನು ಬರಬಹುದು," ಎಂದೆ.

"ಬೆಳಿಗ್ಗೆ ಆದರೂ ಉಂಡೆಯೋ ಇಲ್ಲವೋ?"

ಈಗ ಮತ್ತೊಮ್ಮೆ ನಕ್ಕು ಅವಳೆಂದಳು, "ಉಣ್ಣಲಿಲ್ಲ. ನಿನಗೋಸ್ಕರ ಕಾದುಕೊಂಡಿದ್ದೆ."

"ಒಂದು ವೇಳೆ ಇವತ್ತು ನಾನು ಬಂದಿರದಿದ್ದರೆ?"

"ನೀನು ಬಂದೇಬರುತ್ತೀ ಅಂತ ನನಗೆ ಗೊತ್ತಿತ್ತು."

ಮನಸ್ಸಿನಲ್ಲಿ ಹೇಳಿಕೊಳ್ಳಲಾಗದಂತಹ ಭೀತಿ ನತ್ಥೂವನ್ನು ಈಗಲೂ ಬಾಧಿಸುತ್ತಿತ್ತು.

"ನಿನಗೆ ಏನೋ ಅಸಮಾಧಾನ," ನತ್ಥೂ ಹಿಂತಿರುಗಿ ಹೆಂಡತಿಯ ಕಡೆ ನೋಡಿದ. ಅವಳು ಎವೆಯಿಕ್ಕದೆ ಅವನನ್ನೇ ನೋಡುತ್ತ ನಿಂತಿದ್ದಳು.

ಸರಿ ರಾತ್ರಿಯ ಹೊತ್ತು.

"ನೀನೇನೂ ಹೇಳಲೇ ಇಲ್ಲ. ಊಟ ಮಾಡುತ್ತೀಯೋ ಇಲ್ಲ ಟೀ ಮಾಡಿಕೊಡಲೋ?" ಯಾವ ಯೋಚನೆಯೂ ಇಲ್ಲದೆ ತುರುಬನ್ನು ಬಿಚ್ಚುತ್ತಿದ್ದ ಹೆಂಡತಿಯ ಕಡೆ ನೋಡುತ್ತಲೇ ನತ್ಥೂವಿನ ಮನಸ್ಸು ಹುಚ್ಚೆದ್ದು ಕುಣಿಯಿತು. ಮೈ ಬಿಸಿಯಾಯಿತು.

ಮೈದಾನದ ಆಚೆಯಿಂದ ಎಲ್ಲೋ ದೂರದಲ್ಲಿ ಗದ್ದಲವಾಗುತ್ತಿರುವುದೂ ಕೇಳಿಸಿತು.

"ಇದೇನಿರಬಹುದು? ಅಲ್ಲಿ ನೋಡು."

ನತ್ಥೂ ತಲೆಯೆತ್ತಿ ನೋಡಿ, "ಎಲ್ಲೋ ಬೆಂಕಿ ಬಿದ್ದಿದೆ," ಗದ್ಗದ ಸ್ವರದಲ್ಲಿ ಹೇಳಿ ನತ್ಥೂ ಕುಳಿತ.

ಒಂದು ಕಡೆ ಗಲಭೆಯ ಕೋಲಾಹಲ, ಘೋಷಣೆಗಳು! ಯಾವುದೋ ಹಬ್ಬವನ್ನು ಆಚರಿಸಲಾಗುತ್ತಿದೆ ಎನ್ನಿಸುತ್ತಿತ್ತು. ನತ್ಥೂವಿನ ಹೆಂಡತಿಗೆ ತಡೆಯಲಾಗಲಿಲ್ಲ. ಬಾಗಿಲನ್ನು ತೆಗೆದು ಆಚೆಗೆ ಓಡಿ ಹೋದಳು. ನತ್ಥೂ ಮಾತ್ರ ಇನ್ನೂ ಸೂರಿನ ಕಡೆಗೇ ನಿರಾಶೆ ತುಂಬಿದ ದೃಷ್ಟಿ ಬೀರುತ್ತ ಸುಮ್ಮನೆ ಕೂತಿದ್ದ.

ಇದೇ ಗಲಾಟೆ ಗಾಳಿಯಲ್ಲಿ ತೇಲುತ್ತ ಊರಾಚೆಯಿಂದ ರಿಚರ್ಡ್‌ನ ಬಂಗಲೆಯ ಗೋಡೆಗಳಿಗೂ ಅಪ್ಪಳಿಸಿತು. ಒಮ್ಮೊಮ್ಮೆ ಗಾಳಿ ಬೇರೆ ದಿಕ್ಕಿನಲ್ಲಿ ಬೀಸಿದಾಗ ಸದ್ದು ಅತ್ತ ಕಡೆಯೇ ತೇಲಿ ಹೋಗುತ್ತಿತ್ತು. ಆಮೇಲೆ ಇದ್ದಕ್ಕಿದ್ದ ಹಾಗೆ ಜೋರಾಗಿ ಕೇಳಿಸಲಾರಂಭಿಸುತ್ತಿತ್ತು.

ಕ್ಷಣ ಕಾಲ ಲೀಸಾಳಿಗೆ ದಿಕ್ಕು ತೋಚದಂತಾಯಿತು.

"ನೀನೇಕೆ ಈ ದಂಗೆಯನ್ನು ನಿಲ್ಲಿಸಲಿಲ್ಲ?"

ರಿಚರ್ಡ್ ಮಾತಾಡಲಿಲ್ಲ.

"ಈ ಜನ ಹೀಗೆ ಕಾದಾಡಿದರೆ ನಿನ್ನ ಜೀವಕ್ಕೂ ಅಪಾಯವಿರಬಹುದಲ್ಲ, ರಿಚರ್ಡ್?"



ಆತ ಲೀಸಾಳ ಕೂದಲನ್ನು ನೇವರಿಸುತ್ತ, "ಇವರೆಲ್ಲ ಈಗ ನನ್ನ ಮನೆಯ ಮುಂದೆ ನಿಂತು ನನ್ನನ್ನು ತೀರಿಸಲು ತಮ್ಮ ಬಂದೂಕುಗಳನ್ನು ಹಿಡಿದು ನಿಂತಿದ್ದರೆ ಹೇಗನ್ನಿಸುತ್ತೆ ನಿನಗೆ?"

ಲೀಸಾಳ ಮೈ ನಡುಗಿತು. ಟೆಲಿಫೋನಿನ ಗಂಟೆ ಸದ್ದು ಮಾಡತೊಡಗಿತು.

## ಅಧ್ಯಾಯ-೯

ಮರುದಿನ ಬೆಳಕು ಹರಿಯುವ ಹೊತ್ತಿಗೆ ಊರಲ್ಲೆಲ್ಲ ವಿಷವೇರಿದ ವಾತಾವರಣ. ಪೇಟೆ

ಬೀದಿ ಇನ್ನೂ ಉರಿಯುತ್ತಿತ್ತು. ಒಟ್ಟು ೧೭ ಅಂಗಡಿಗಳು ಸುಟ್ಟು ಭಸ್ಮವಾಗಿದ್ದವು. ಮೊಹಲ್ಲಾಗಳ ನಡುವೆ ಈಗ ಬೇಲಿ ಹಾಕಿದಂತಾಗಿತ್ತು. ಹಿಂದುಗಳ ಬಸ್ತಿಯಲ್ಲಿ ಮುಸಲ್ಮಾನರು, ಹಿಂದೂಗಳು, ಸಿಖ್ಖರು, ಮುಸಲ್ಮಾನರ ಮೊಹಲ್ಲಾಗಳಲ್ಲಿ ಓಡಾಡಲು ಹೆದರುತ್ತಿದ್ದರು. ನೆರೆಹೊರೆಯ ಹಿಂದೂ ಮುಸಲ್ಮಾನರು ಸೇರಿದಾಗಲೆಲ್ಲ, 'ಎಂಥಾ ಅನರ್ಥವಾಯಿತು' ಎಂದು ಉದ್ಗಾರವೆತ್ತುತ್ತಿದ್ದರು. ಈ ಕಲಕಿದ ಕಾಂಡ ಇಲ್ಲಿಗೇ ಮುಗಿಯುವುದಿಲ್ಲ. ಆದರೆ ಮುಂದೇನಾಗುವುದು ಎಂದು ಯಾರಿಗೂ ಗೊತ್ತಿರಲಿಲ್ಲ.

ಮನೆಗಳ ಬಾಗಿಲುಗಳು ಮುಚ್ಚಿದ್ದವು. ನಗರದ ಕಚೇರಿ, ಶಾಲೆ-ಕಾಲೇಜುಗಳು ಬಂದಾಗಿದ್ದವು. ವ್ಯಾಪಾರವೂ ಸ್ತಬ್ಧಗೊಂಡಿತ್ತು. ಕಾಂಗ್ರೆಸ್ಸಿನ ಪ್ರಭಾತ್‌ಫೇರಿ, ಸೇವಾ ಕಾರ್ಯಗಳು ಒಂದೇ ದಿನದಲ್ಲಿ ಮೂಲೆಗೆ ಬಿದ್ದಿದ್ದವು.

ಮೋಟರು ಮುಂದಕ್ಕೆ ಹೊರಟಿತು. ಶಾಹ್‌ನವಾಜನೇ ಗಾಡಿ ಓಡಿಸುತ್ತಿದ್ದುದನ್ನು ರಸ್ತೆಯಲ್ಲಿ ನೆರೆದಿದ್ದ ಜನ ನೋಡಿದರು. ಅವನ ಪಕ್ಕದಲ್ಲಿ ಲಾಲ್‌ಜೀ ಕುಳಿತಿದ್ದರು. ಸದರ್ ಬಜಾರ್‌ನಲ್ಲಿ ಬಂಧುಗಳ ಮನೆಗೆ ಲಾಲ್‌ಜಿಯವರ ಕುಟುಂಬವನ್ನು ತಲುಪಿಸಿ ಶಾಹ್‌ನವಾಜನು ತನ್ನ ಪರಮ ಸ್ನೇಹಿತ ರಘುನಾಥನ ಮನೆಗೆ ಹೊರಟಿದ್ದ. ಅವನು ರಘುನಾಥನ ಕ್ಷೇಮ-ಸಮಾಚಾರವನ್ನು ವಿಚಾರಿಸಲು ಬಂದಿದ್ದ.

ಆತ ಗೇಟನ್ನು ದಾಟಿ ಗಾಡಿಯನ್ನು ಮರದ ಕೆಳಗೆ ನಿಲ್ಲಿಸಿದ. ಕಿಟಕಿಯ ಬಳಿ ಪರದೆಯ ಹಿಂದೆ ನಿಂತಿದ್ದ ರಘುನಾಥನ ಪತ್ನಿ ಅವನ ಗುರುತು ಹಿಡಿದು ಕೂಡಲೇ ಗಂಡನನ್ನು ಕೂಗಿ ಹೇಳಿದಳು: "ಶಾಹ್‌ನವಾಜ್ ಬಂದಿದ್ದಾರೆ. ನಾನು ಕೂಡಿಸುತ್ತೇನೆ, ನೀವು ಬನ್ನಿ".

"ಇಲ್ಲಿನ ಪರಿಸ್ಥಿತಿ ಹೇಗಿದೆ, ಅತ್ತಿಗೆ? ನೀವು ಆ ಜಾಗವನ್ನು ಬಿಟ್ಟಿದ್ದೇ ಒಳ್ಳೆಯದಾಯಿತು."

"ಚೆನ್ನಾಗಿಯೇ ಇದೆ. ಆದರೆ ಸ್ವಂತ ಮನೆಯ ಸುಖವನ್ನು ಮರೆಯಲಾದೀತೆ?".

"ನೀವು ಕಣ್ಣೀರು ಹಾಕಬೇಡಿ ಅತ್ತಿಗೆ. ನಾನು ಬದುಕಿದ್ದರೆ ನೀವು ನಿಮ್ಮ ಮನೆಗೆ ಮತ್ತೆ ತೆರಳುವಿರಿ."

ಆಗ ರಘುನಾಥನು ಒಳಕ್ಕೆ ಬಂದ. ಗೆಳೆಯರು ಹರಟುತ್ತ ಕುಳಿತರು.

ಅತ್ತಿಗೆ ಚಹಾ ತಂದು ಮೇಜಿನ ಮೇಲಿಡುತ್ತ ಅಂದಳು; "ನಿಮ್ಮಿಂದ ಒಂದು ಕೆಲಸವಾಗಬೇಕು ಖಾನರೇ. ನಮ್ಮ ಓರಗಿತ್ತಿಯದೂ ನನ್ನದೂ ಒಡವೆಗಳ ಪೆಟ್ಟಿಗೆ ಇನ್ನೂ ಆ ಮನೆಯಲ್ಲೇ ಇದೆ."



"ಇದೇನು ಮಹಾ ಕೆಲಸ! ಎಲ್ಲಿದೆ ಹೇಳಿ!"

"ಮಹಡಿ ಮೇಲಿನ ಕೊಠಡಿಯಲ್ಲಿ, ನಾನು ಬೀಗದ ಕೈ ಕೊಡ್ತೇನಿ. ನಮ್ಮ ಆಳು ಮಿಲ್‌ಖಿ ಅಲ್ಲೇ ಇದ್ದಾನೆ."

ಝಣ ಝಣಗುಟ್ಟಿಸುತ್ತ ಅತ್ತಿಗೆ ಬೀಗದ ಕೈಗೊಂಚಲನ್ನು ತಂದಳು. ಬೀಗದ ಕೈಗಳನ್ನು ಆರಿಸಿ ತೆಗೆದು ತೋರಿಸುತ್ತ ಅವನಿಗೆ ವಿವರಿಸಲು ಮೊದಲು ಮಾಡಿದಳು. ಸ್ವಲ್ಪ ಹೊತ್ತಾದ ಮೇಲೆ ಶಾಹ್‌ನವಾಜ್ ಹೊರಡಲು ಎದ್ದು ನಿಂತ. ಗೆಳೆಯರಿಬ್ಬರೂ ಕಾರಿನ ಕಡೆಗೆ ಹೊರಟರು.

# ಪುಸ್ತಕ ವಿಭಾಗ

ಶಾಹ್‌ನವಾಜ್ ರಘುನಾಥನ ಹಳೆಯ ಮನೆಗೆ ಬಂದಾಗ ಇಳಿ. ಹೊತ್ತು. ಮಿಲ್‌ಖಿ ಬಾಗಿಲು ತೆಗೆಯುವುದಕ್ಕೆ ಹೊತ್ತಾಯಿತು. ಒಳಗೆ ಮಬ್ಬಾದ ಪಡಸಾಲೆಗೆ ಅವನು ಬಂದದ್ದು, ಆ ಮನೆಯ ವಾಸನೆ ಅವನಿಗೆ ಹಿತವೆನಿಸಿತು.

"ಖಾನ್ ಸಾಹೇಬರೇ, ಮನೆಯವರೆಲ್ಲ ಸುಖವಾಗಿರುವರೆ?"

ಶಾಹ್‌ನವಾಜನಿಗೆ ಅವನನ್ನು ಕಂಡರೆ ಆಗುತ್ತಿರಲಿಲ್ಲ.

ಅಂಗಳದಲ್ಲಿ ಅಡಿಗೆ ಮನೆಯ ಪಕ್ಕದಲ್ಲೇ ಮೆಟ್ಟಲು ಹತ್ತುತ್ತ ಶಾಹ್‌ನವಾಜ್ ಅಂಗಳವನ್ನು ನೋಡಿದ. ಅಂಗಳಕ್ಕಿದ್ದ ದೊಡ್ಡ ಕೊಠಡಿಯ ಬಾಗಿಲು ಮುಚ್ಚಿತ್ತು.

"ವಸ್ತ್ರ-ಒಡವೆ ಇಟ್ಟಿರುವ ಕೊಠಡಿ ಮೊದಲ ಮಾಳಿಗೆಯಲ್ಲಿ ಇದೆ ಅಲ್ಲವೇ?"

"ಹೌದು ಸ್ವಾಮಿ."

ಮಿಲ್‌ಖಿ ಶಾಹ್‌ನವಾಜನ ಹಿಂದೆಯೇ ಮೆಟ್ಟಲುಗಳನ್ನು ಹತ್ತಲಾರಂಭಿಸಿದ. ಗೊಂಚಲಲ್ಲಿ ಸುಮಾರು ೧೫ ಬೀಗದ ಕೈಗಳು ಇದ್ದವು. "ಈ ದೊಡ್ಡ ಬೀಗಕ್ಕೆ ಯಾವುದು ಬೀಗದ ಕೈ ಗೊತ್ತೇನಯ್ಯ?"

"ಗೊತ್ತಿದೆ ಸಾಹೇಬರೆ, ತೋರಿಸ್ತೀನಿ."

ಮಿಲ್‌ಖಿ ಬೀಗ ತೆರೆದ. ಕೊಠಡಿಯೊಳಗೆ ಕತ್ತಲು ಕವಿದಿತ್ತು. ಟ್ರಂಕುಗಳ ಮಧ್ಯೆ ಜಾಗ ಮಾಡಿಕೊಂಡು ಅವನು ಒಡವೆಗಳನ್ನಿಟ್ಟಿದ್ದ ಅಲ್‌ಮಿರಾವನ್ನು ತಲುಪಿದ. ಪೆಟ್ಟಿಗೆ ಸಿಗಲು ತಡವಾಗಲಿಲ್ಲ. ಅದನ್ನು ಜೋಪಾನವಾಗಿ ತೆಗೆದಿಟ್ಟುಕೊಂಡು ಅಲ್‌ಮಿರಾದ ಬಾಗಿಲು ಹಾಕಿದ. ಹೊರಗೆ ಬಂದು ಇಬ್ಬರೂ ಮೆಚ್ಚಲು ಇಳಿಯತೊಡಗಿದರು. ಮಿಲ್‌ಖಿಯ ಕೈಯಲ್ಲಿ ಬೀಗದ ಕೈಗೊಂಚಲಿತ್ತು. ಅವನು ಮುಂದೆ ಮುಂದೆ ಇಳಿಯುತ್ತಿದ್ದ. ಶಾಹ್‌ನವಾಜ್ ಹಿಂದೆ ಇಳಿಯುತ್ತಿದ್ದ. ಹಠಾತ್ತಾಗಿ ಮಿಲ್‌ಖಿಯ ಜುಟ್ಟನ್ನು ಕಂಡೋ ಕಳೆದ ಮೂರು ದಿನಗಳಿಂದ ಕಂಡಿದ್ದು, ಕೇಳಿದ್ದು ವಿಷದಂತೆ ಅವನ ಶರೀರವನ್ನೆಲ್ಲ ವ್ಯಾಪಿಸಿತ್ತೋ, ಗೊತ್ತಿಲ್ಲ, ಮುಂದೆ ನುಗ್ಗಿ ಶಾಹ್‌ನವಾಜ್ ಮಿಲ್‌ಖಿಯ ಬೆನ್ನಿಗೆ ಜಾಡಿಸಿ ಒದ್ದ. ಮಿಲ್‌ಖಿ ಉರುಳುತ್ತ ಹೋಗಿ ತಿರುವಿನಲ್ಲಿದ್ದ ಗೋಡೆಗೆ ಡಿಕ್ಕಿ ಹೊಡೆದ. ಅಂಗಳಕ್ಕಿಳಿದ ಮೇಲೆ ಒಮ್ಮೆ ಮಿಲ್‌ಖಿಯತ್ತ ನೋಡಿದ. ಅವನ ತೆರೆದ ಕಣ್ಣು, 'ನನ್ನ ಯಾವ ತಪ್ಪಿಗಾಗಿ ನನ್ನನ್ನು ಹೊಡೆದು ಉರುಳಿಸಿದಿರಿ,' ಎಂದು ಕೇಳುವಂತಿತ್ತು.



ಅಂದು ರಾತ್ರಿ ಅತ್ತಿಗೆಯ ಕೈಗೆ ಒಡವೆಗಳ ಪೆಟ್ಟಿಗೆಯನ್ನು ಒಪ್ಪಿಸುವಾಗ ಅವನು ನಿಶ್ಚಲನಾಗಿದ್ದ. ಆಕೆ ಕೃತಜ್ಞತೆಯಿಂದ ಮೂಕಳಾಗಿದ್ದಳು.

## ಅಧ್ಯಾಯ-೧೦

ನತ್ಥೂ ಚಡಪಡಿಸುತ್ತಿದ್ದ. ಹೊಡೆದಾಟದ ಗಾಳಿಸುದ್ದಿಯನ್ನು ಕೇಳಿದಷ್ಟು ಅವನಿಗೆ ತಲ್ಲಣ. ಮೇಲಿಂದ ಮೇಲೆ ತನಗೆ ತಾನೇ ಸಮಾಧಾನ ಮಾಡಿಕೊಳ್ಳುತ್ತಿದ್ದ. ಆಗ ಮನಸ್ಸಿಗೆ ಸ್ವಲ್ಪ ಶಾಂತಿ ಸಿಗುತ್ತಿತ್ತು.

ನತ್ಥೂನ ಹೆಂಡತಿ ಸರಗಿನಿಂದ ಕೈ ಒರೆಸಿಕೊಳ್ಳುತ್ತಾ ಹೊರಗೆ ಬಂದಳು. "ಅದೇನು ನೋಡು

ತ್ತಿರುವೆ,"ಮತ್ತೆ ಮೈದಾನದ ಆ ಕಡೆಯ ಮನುಷ್ಯ ನನ್ನು ನೋಡಿ ಪ್ರಶ್ನಿಸಿದಳು,

"ಯಾರವನು? ನಿನ್ನ ಪರಿಚಿತನೇನು?"

"ಇಲ್ಲವಲ್ಲ, ಇಷ್ಟಕ್ಕೂ ನೀನು ಇಲ್ಲಿ ನಿಂತು ಏನು ಮಾಡುತ್ತಿರುವಿ? ನಡೆ," ಎಂದು ಹೆಂಡತಿಯನ್ನು ಗದರಿಸಿದ. ಅವಳು ತಕ್ಷಣ ಒಳಕ್ಕೆ ಹೋದಳು. ಮನಸ್ಸಿಗೆ ನೆಮ್ಮದಿಯಾಯಿತು. "ಸ್ವಲ್ಪ ಚಹಾ ಮಾಡು," ಎಂದಾತ ಅವಳನ್ನು ಕರೆದು ಹೇಳಿದ.

"ಇಷ್ಟು ಹೊತ್ತಿನಲ್ಲಿ ನೀನು ಎಂದೂ ಚಹಾ ಕೇಳುತ್ತಿರಲಿಲ್ಲ. ಇವತ್ತು ಬಿಡುವು ಎಂತಲೇ?"

"ಬಿಡುವು ದಿನವೇನು, ಸುಡುವ ದಿನ," ಎನ್ನುತ್ತಾ ನತ್ಥೂ ಅಲ್ಲಿಂದ ಎದ್ದ. ಅವನಿಗೆ ಮನದಲ್ಲಿ ದುಃಖದ ಬೇಗೆ. ಕ್ಷಣಕಾಲ ಬೆಪ್ಪಾಗಿ ನಿಂತಿದ್ದವನು ಮುನ್ನುಗ್ಗಿ ಹೆಂಡತಿಯನ್ನು ತಬ್ಬಿಕೊಂಡ. ಅವನ ಕ್ಷೋಭೆ ಆವೇಶಗಳು ಹೆಚ್ಚತೊಡಗಿದವು. ಅವಳು ನತ್ಥೂನ ಹತ್ತಿರ ಬಂದು ಗಂಡನ ತಲೆಯನ್ನು ಸವರುತ್ತಾ ಕೇಳಿದಳು, "ನನಗೂ ಹೇಳಬಾರದ?"

"ಏನಾದರೂ ಇದ್ರೆ ತಾನೇ ಹೇಳೋಕೆ?" ಮೆಲ್ಲನೆ ಉಸುರಿದ.

"ಕೋಪ ಬಂತೆ? ಮಾತೆತ್ತಿದರೆ ಏಕೆ ಸಿಟ್ಟಾಗ್ತೀ?" ನಿಂದಿಸುವ ಧ್ವನಿಯಲ್ಲಿ ಕೇಳಿದಳು. ನತ್ಥೂ ಸೊಲ್ಲೆತ್ತಲಿಲ್ಲ. ನಿಜಕ್ಕೂ ಅವನು ದುಃಖಿಸುವ ಮಗುವಿನ ಹಾಗೆ ಮಾತಾಡುತ್ತಿದ್ದ. ಇದ್ದಕ್ಕಿದ್ದ ಹಾಗೆ ಮಾತಾಡಲು ಮೊದಲು ಮಾಡಿದ: "ಪೇಟೆ ಬೀದಿಗೆ ಬೆಂಕಿ ಯಾಕೆ ಬಿತ್ತು ಎನ್ನುವುದು ನಿನಗೆ ಗೊತ್ತೇ?"

"ಗೊತ್ತಿದೆ, ಮಸೀದೆಯ ಮುಂದೆ ಯಾರೋ ಸತ್ತ ಹಂದಿಯನ್ನು ಎಸೆದಿದ್ದರು. ಇದರಿಂದ ಮುಸಲ್ಮಾನರು ಪೇಟೆಗೆ ಬೆಂಕಿ ಹಚ್ಚಿದರು."

"ಆ ಹಂದಿಯನ್ನು ಕೊಂದವನು ನಾನೇ."

"ನೀನೇ? ಹಂದಿಯನ್ನು ಎಸೆಯಲು ನೀನು ಹೋಗಿದ್ದೆಯಾ?" ಅವಳು ಕೇಳಿದಳು. "ಇಲ್ಲ. ಜಲಗಾರ ಕಾಲೂ ಬಂಡಿಯ ಮೇಲೆ ಅದನ್ನು ಹಾಕಿಕೊಂಡು ಹೋದ."

ಬಹಳ ಹೊತ್ತಿನವರೆಗೆ ಅವನ ಹೆಂಡತಿ ಗಂಡನ ಮುಖವನ್ನೇ ನೋಡುತ್ತಿದ್ದಳು. ಮತ್ತೆ ತನಗೆ ತಾನೇ ಸಮಾಧಾನ ಮಾಡಿಕೊಳ್ಳುವಂತೆ ಹೇಳಿದಳು, "ನೀನು ಬಹಳ ಕೆಟ್ಟ ಕೆಲಸ ಮಾಡಿದ್ದೀ. ಆದರೆ ಇದರಲ್ಲಿ ನಿನ್ನ ತಪ್ಪಿಲ್ಲ."



ನತ್ಥೂಗೆ ಮನಸ್ಸಿನಲ್ಲೇ ಕೊರಗು. ಅವಳು ಎದ್ದು ಗಂಡನ ಬಳಿಗೆ ಹೋದಳು. "ನನಗೇನು ಗೊತ್ತಿತ್ತು? ಏನು ಸಮಾಚಾರ ಎಂದು ನೀನು ತಿಳಿಸಬೇಕಾಗಿತ್ತಲ್ಲವೇ?"

ಅವನ ಹೆಂಡತಿ ಚಹಾ ಮಾಡಲು ಒಲೆಯ ಹತ್ತಿರ ಹೋಗಿ ಕುಳಿತಳು. "ಮನಸ್ಸು ನಿರ್ಮಲವಾಗಿದ್ದರೆ ಭಗವಂತನಿಗೆ ಕೂಡ ಹೆದರಬೇಕಾಗಿಲ್ಲ. ನನಗೆ ಹೇಳಿದ್ದೇನೋ ಆಯಿತು. ಕೇರಿಯಲ್ಲಿ ಇನ್ನಾರ ಹತ್ತಿರವಾದರೂ ಹೇಳುವುದಕ್ಕೆ ಹೋದೀಯಾ!" ಅಲ್ಲಿಂದಲೆ ನತ್ಥೂ ಹೆಂಡತಿ ಹೇಳಿದಳು.

"ಎಲ್ಲಾದರೂ ಉಂಟೇ, ನಾನೇಕೆ ಹೇಳಲಿ?"

## ಪುಸ್ತಕ ವಿಭಾಗ

ಗಂಡನ ಕೈಗೆ ಚಹಾದ ಲೋಟವನ್ನು ಕೊಡುತ್ತ "ನೀನೂ ಹೊರಗೆ ನಡೆ, ನಾನೂ ಬರ್ತೀನಿ,"ಅಂದ. ನತ್ಥೂನ ಹೆಂಡತಿ ಎದ್ದವಳೇ ಮೈಮೇಲೆ ಬಂದವಳಂತೆ ಕಸಬರಿಗೆಯನ್ನು ಹಿಡಿದು ಮನೆಯನ್ನು ಗುಡಿಸಲಾರಂಭಿಸಿದಳು. ಬಹಳ ಹೊತ್ತಿನವರೆಗೆ ಗುಡಿಸಿದ ಮೇಲೆ ನೆಲವನ್ನು ತೊಳೆಯಲಾರಂಭಿಸಿದಳು.

### ಅಧ್ಯಾಯ-೧೧

ಖಾನ್‌ಪುರದಿಂದ ಹೊರಡುವ ಮೊದಲ ಬಸ್ಸು ಬೆಳಗ್ಗೆ ಎಂಟು ಗಂಟೆಗೆ ತಲುಪುತ್ತಿತ್ತು. ಇಂದು ಅದು ಬರಲೇ ಇಲ್ಲ. ಹೋಟೆಲಿನಲ್ಲಿ ಬೆಳಗ್ಗಿನಿಂದ ಕೆಟಲಿನ ತುಂಬ ನೀರು ಸುಮ್ಮನೆ ಕುದಿಯುತ್ತಲೇ ಇತ್ತು. ಅಂಗಡಿಯ ಹೊರಗೆ ಹಾಕಿದ್ದ ಬೆಂಚುಗಳೂ ಖಾಲಿಯಾಗಿದ್ದವು. ಮೊದಲು ಎಂದೂ ಬೆಂಚುಗಳು ಖಾಲಿಯಾಗಿ ಇದ್ದದ್ದೇ ಇಲ್ಲ. ನಾಲ್ಕೂ ಕಡೆ ಏನೋ ಒಂದು ಬಗೆಯ ಆತಂಕ ಹರಡಿತ್ತು.

ಹೆಂಗಸಿನ ಬುದ್ಧಿ ಸೂಕ್ಷ್ಮ. ಬಂತೋ ನಿನ್ನೆ ಸಂಜೆಯಿಂದಲೇ ಇನ್ನು ಈ ಊರನ್ನು ಬಿಟ್ಟು ಹೊರಡುವುದೇ ಲೇಸು ಎಂದು ಹೇಳುತ್ತಿದ್ದಳು. ಊರಿಗೆಲ್ಲ ಈ ಇಬ್ಬರು ಇಳಿ ವಯಸ್ಸಿನವರೇ ಸಿಖ್ಖರು. ಉಳಿದಂತೆ, ಊರಿಗೆ ಊರೇ ಮುಸಲ್ಮಾನರು. ಬಂತೋ ಹೇಳಿದ ಮಾತಿಗೆ ಹರನಾಮ್‌ಸಿಂಹ ಒಪ್ಪಲಿಲ್ಲ.

"ಇಲ್ಲಿ ಕೇಳು ಸೌಭಾಗ್ಯವತಿ, ನಾವು ಯಾರಿಗಾದರೂ ಕೇಡು ಬಗೆದಿದ್ದೇವೆಯೇ? ಹೇಳು, ನಮಗೆ ಯಾರಿಂದ ಏನಾಗಬೇಕು?" ಬಂತೋ ಮಾತಾಡಲಿಲ್ಲ. ತರ್ಕವನ್ನು ತರ್ಕದಿಂದ ಎದುರಿಸಬಹುದು, ಆದರೆ ನಂಬಿಕೆಯನ್ನು ತರ್ಕದಿಂದ ಅಲ್ಲಾಡಿಸಲು ಸಾಧ್ಯವೇ? ಹರನಾಮ್‌ಸಿಂಹನ ನಂಬಿಕೆ ಮಾತ್ರ ಅಚಲವಾಗಿತ್ತು.

ಸಂಜೆಯ ಹೊತ್ತಿಗೆ ಇಳಿಜಾರಿನಲ್ಲಿ ಯಾರೋ ಪರಿಚಿತರು ಬರುತ್ತಿರುವಹಾಗೆ ತೋರಿತು. ಕೋಲೂರಿಕೊಂಡು ಬಂದ ಕರೀಂಖಾನನನ್ನು ನೋಡಿ ಹರನಾಮ್‌ಸಿಂಹನಿಗೆ ಕೊಂಚ ಧೈರ್ಯ ಬಂದಿತು. ಗಂಟಲು ಸರಿಮಾಡಿಕೊಳ್ಳುವಂತೆ ನಟಿಸುತ್ತ "ಹರನಾಮ್‌ಸಿಂಹ, ಪರಿಸ್ಥಿತಿ ಚೆನ್ನಾಗಿಲ್ಲ. ನೀನು ಇಲ್ಲಿಂದ ಹೊರಟುಬಿಡು,"ಎಂದು ಎಚ್ಚರಿಸಿ ಮುಂದೆ ನಡೆದುಬಿಟ್ಟ. ಈಗ ಮೊದಲ ಬಾರಿಗೆ ಹರನಾಮ್‌ಸಿಂಹನ ನಂಬಿಕೆ ಅಲ್ಲಾಡುವಂತಾಯಿತು. ಎಲ್ಲಿಗೆ ಹೋಗುವುದು? ಮೈಲುಗಟ್ಟಲೆ ರಸ್ತೆಗಳು, ಮೈದಾನಗಳು ಮತ್ತು ಕಣಿವೆಗಳು. ಮತ್ತೆ ಅಂತರಾತ್ಮನ ವಾಣಿ: ಹರನಾಮ್‌ಸಿಂಹ! ನೀನು ಇಲ್ಲೇ ಇರು. ದಂಗೆಕೋರರು ಬಂದರೆ ಅಂಗಡಿಯನ್ನು ಒಪ್ಪಿಸು. ಪ್ರಾಣವನ್ನೂ ಒಪ್ಪಿಸಿಬಿಡು. ಹರನಾಮ್‌ಸಿಂಹನು ಎದ್ದು ಬಂತೋ ಕೂತಿದ್ದ ಕೋಣೆಗೆ ಹೋದ. "ಹೊರಗಿನಿಂದ ದಂಗೆಕೋರರು ಬರಬಹುದು ಈಗಲೇ ಹೊರಟುಬಿಡಿ ಎಂದು ಹೇಳಿದ ಕರೀಂಖಾನ್"ಬಂತೋಳ ಮುಖ ಬಿಳುಚಿಕೊಂಡಿತು.

"ಆದರೆ ಎಲ್ಲಿಗೂ ಹೋಗೋದು ಬೇಡ," ಎನ್ನುತ್ತ ಹರನಾಮ್‌ಸಿಂಹನು ಗೋಡೆಗೆ ನೇತು ಹಾಕಿದ್ದ ಬಂದೂಕನ್ನು ತೋರಿಸುತ್ತ ಬಂತೋಗೆ ಹೇಳಿದ: "ಒಂದು ವೇಳೆ ಹೊಡೆದಾಟಗಳಾಗಿ ಪ್ರಾಣ ತೆರುವ ಸಂದರ್ಭ ಬಂದರೆ ನಾನು ನಿನ್ನನ್ನು ಮೊದಲು ಮುಗಿಸಿ ಬಿಡುತ್ತೇನೆ, ಆಮೇಲೆ ನನ್ನ ಪ್ರಾಣವನ್ನು ತೆಗೆದುಕೊಳ್ಳುತ್ತೇನೆ."

ಅವಳು ಏನು ಜವಾಬು ಹೇಳಿಯಾಳು? ಸುಮ್ಮನಿದ್ದಳು.

ಹರನಾಮ್‌ಸಿಂಹನು ಅಂಗಡಿಗೆ ಬಂದು ಪೆಟ್ಟಿಗೆಯಲ್ಲಿ ಕೂಡಿಟ್ಟಿದ್ದ ನೋಟಿನ ಕಟ್ಟನ್ನು ಜೇಬಿಗೆ ಸೇರಿಸಿ ಬಂದೂಕನ್ನು ಹೆಗಲಿಗೇರಿಸಿಕೊಂಡ. ಯಾವ ಸಾಮಾನನ್ನು ಜೊತೆಯಲ್ಲಿ ಕೊಂಡೊಯ್ಯಬಹುದು, ಯಾವುದನ್ನು ಇಲ್ಲೇ ಬಿಡಬೇಕಾಗುತ್ತದೆ ಒಂದೂ ತೋಚಲಿಲ್ಲ.

ಬಂತೋ ಕೂಡ ಇಂತಹುದೇ ಸಂದಿಗ್ಧ ಪರಿ

ಸ್ಥಿತಿಯನ್ನು ಎದುರಿಸುತ್ತಿದ್ದಳು. ಹಾಕಿಕೊಂಡಿದ್ದ ಬಟ್ಟೆಗಳ ಒಳಗಡೆ ಹಲವು ಆಭರಣಗಳನ್ನು ತೊಟ್ಟು, ಕೆಲವನ್ನು ವಸ್ತ್ರದಲ್ಲಿ ಸುತ್ತಿ ಟ್ರಂಕಿನಲ್ಲಿಟ್ಟು, ಮಿಕ್ಕವನ್ನು ತರಕಾರಿ ಗಿಡಗಳ ಪಠಾರಿಯಲ್ಲಿ ಹೂತು ಬಂದಳು. ಕೊಠಡಿಯಲ್ಲಿ ಪೆಟ್ಟಿಗೆಗಳು, ಜಮಖಾನೆಗಳು ಮತ್ತಿತರ ಸಾಮಾನುಗಳು ತುಂಬಿದ್ದವು. ಅಷ್ಟರಲ್ಲಿ ದೂರದಿಂದ ತಮಟೆಯ ಸದ್ದು ಕೇಳಿ ಬಂತು. ಇವರು ಪರಸ್ಪರ ಮುಖ ನೋಡುತ್ತ ನಿಂತರು. ಆಗ ಕೊಠಡಿಯ ಮಧ್ಯೆ ಮೇಲ್ಛಾವಣಿಗೆ ತೂಗುಹಾಕಿದ್ದ ಪಂಜರದಲ್ಲಿದ್ದ ಮೈನಾ ಹಕ್ಕಿ ಹರನಾಮ್‌ಸಿಂಹನ ಕಣ್ಣಿಗೆ ಬಿತ್ತು. "ಬಂತೋ! ಪಂಜರವನ್ನು ಕೊಂಡೊಯ್ದು ಹಕ್ಕಿಯನ್ನು ಹಾರಿ ಬಿಡು." ಅವಳು ಪಂಜರವನ್ನು ಹೊರಕ್ಕೆ ತಂದ ತಕ್ಷಣ ಬಾಯಿಪಾಠವಾಗಿ ಹೋಗಿದ್ದ ಬಂತೋ, ದೇವರು ದೊಡ್ಡವನು 'ನಮ್ಮೆಲ್ಲರನ್ನು ಕಾಪಾಡುತ್ತಾನೆ' ಎಂಬ ಉದ್ಗಾರ ಮೈನಾ ಹಕ್ಕಿಯ ಬಾಯಿಂದ ಹೊರಬಿತ್ತು. ಅದನ್ನು ಕೇಳಿ ಬಂತೋಗೆ ಗಂಟಲು ಉಬ್ಬಿ ಕಣ್ಣಲ್ಲಿ ನೀರಾಡಿತು.

ಉಟ್ಟ ಬಟ್ಟೆಯಲ್ಲೇ ಹರನಾಮ್‌ಸಿಂಹ ಮತ್ತು ಬಂತೋ ಮನೆ ಬಿಟ್ಟು ಹೊರಟರು. ರಸ್ತೆಯಿಂದಾಚೆಗೆ ಕೊಂಚ ದೂರದಲ್ಲೇ ಒಂದು ನಾಲೆ ಹರಿಯುತ್ತಿತ್ತು. ನಾಲೆಯ ನೀರು ಬತ್ತಿ ಅದರ ಮೂಲಕ ಹೋಗಲು ಅನುಕೂಲವಿತ್ತು.

"ನಿಲ್ಲುವುದು ಬೇಡ. ಮುಂದೆ ಹೋಗುವುದೇ ಲೇಸು," ಬಂತೋ ಸಲಹೆ ನೀಡಿದಳು. ಅವರು ಮೆಲ್ಲನೆ ಮುಂದೆ ಮುಂದೆ ನಡೆದರು.

"ಊರು ಹಿಂದೆಬಿದ್ದರೆ ಸಾಕು, ಮುಂದೆ ಭಗವಂತನ ಇಚ್ಛೆ."

ಅವರು ಒಂದು ಬಂಡೆಯ ಹಿಂದೆ ಅವಿತು ನಿಂತರು. ಅಲ್ಲಿ ಅಂಗಡಿಯ ಬಾಗಿಲು ಕಳಚಿ ಬಿದ್ದ ಸದ್ದು. ಘಾತಕರು ಒಳಕ್ಕೆ ನುಗ್ಗಿದ್ದರು.

"ಅಯ್ಯೋ, ನಮ್ಮ ಮನೆ ಮಠ ಎಲ್ಲಾ ದೋಚಿ ಬಿಡುತ್ತಿದ್ದಾರಲ್ಲಾ!"

ಊರು ಹಿಂದೆ ಬಿತ್ತು. ಸ್ವಲ್ಪ ದೂರ ನಡೆಯುವಷ್ಟರಲ್ಲೂ ನಾಲೆಯ ಎತ್ತರವಾದ ದಡದ ಹಿಂದೆ ಊರಿನ ನೇರಕ್ಕೆ ಆಕಾಶ ಕೆಂಪೇರಲಾರಂಭಿಸಿತು. ಬಂತೋ, "ಅಲ್ಲಿ ನೋಡಿದೆಯಾ," ಎಂದಳು.

"ಇನ್ನೇನು, ನಮ್ಮ ಅಂಗಡಿಗೆ ಬೆಂಕಿ ಇಟ್ಟಿದ್ದಾರೆ ಅಷ್ಟೇ." ಹರನಾಮ್‌ಸಿಂಹನು ಒಂದು ಕ್ಷಣ ಅಲ್ಲೇ ನಿಂತು ಏಳುತ್ತಿದ್ದ ಉರಿಯ ಕಡೆ ನೋಡಿದ. "ಎಲ್ಲ ಸುಟ್ಟು ಬೂದಿಯಾಯಿತು," ಸಿಂಹನು ದೈನ್ಯದಿಂದ ನುಡಿದ. ಬಂತೋ ಮರುಗಿದಾಗ ಅವನು, "ದೇವರ ಚಿತ್ತ;ಹೋಗಲಿ ಬಿಡು!" ಎಂದು ಸಂತೈಸಿದ.

ಸ್ವಲ್ಪ ದೂರ ನಡೆಯುವಷ್ಟರಲ್ಲಿ ಅವರಿಬ್ಬರಿಗೂ ಬಹಳ ಆಯಾಸವಾಯಿತು. ಜೀವ ಉಳಿದರೆ ಸಾಕೆಂದು ಧಾವಿಸುತ್ತಿರುವಾಗಲೇ ಅವರಿಬ್ಬರನ್ನು ಇನ್ನಷ್ಟು ಹಣ್ಣು ಮಾಡುತ್ತಿತ್ತು ಮಕ್ಕಳ ಚಿಂತೆ.

ಬೆಳಕು ಹರಿಯುವ ಹೊತ್ತಿಗೆ ಅವರೊಂದು ಸಣ್ಣ ತೊರೆಯ ಬಳಿ ತಲುಪಿ ಕಲ್ಲಿನ ಮೇಲೆ ಕುಳಿತರು. ಮುರೀದ್‌ಪುರವೆಂಬ ಸಣ್ಣ ಗ್ರಾಮ ಅದು.

ಚೆನ್ನಾಗಿ ಬೆಳಗಾದ ಮೇಲೆ ಅವರು ಎದ್ದು ಹಳ್ಳಿಯ ಕಡೆ ನಡೆದರು. ಹಳ್ಳಿಯ ಹೊರವಲಯವನ್ನು ತಲುಪಿ ಮೊದಲು ಸಿಕ್ಕಿದ್ದ ಮನೆಯ ಮುಂದೆ ನಿಂತರು. ಹರನಾಮ್‌ಸಿಂಹ ದೇವರ ಮೇಲೆ ಭಾರ ಹಾಕಿ ಬಾಗಿಲು ತಟ್ಟತೊಡಗಿದ.

## ಅಧ್ಯಾಯ-೧೨

ಗುರುದ್ವಾರ ಕಿಕ್ಕಿರಿದು ತುಂಬಿತ್ತು. ಎಲ್ಲೆಲ್ಲೂ ತನ್ಮಯತೆ. ಅದೊಂದು ಅಪೂರ್ವ ಸನ್ನಿವೇಶ. ಕೀರ್ತನಕಾರ ಕಣ್ಣು ಮುಚ್ಚಿ ಹಾಡುತ್ತಿದ್ದ: "ನಿನ್ನ ಬಿಟ್ಟು ಅನ್ಯರಿಲ್ಲವೆನಗೆ ದೇವ." ಒಳಗೆ ಹೋಗುತ್ತಲೇ ಎಡಗಡೆಗೆ ಹೆಂಗಸರು ಕುಳಿತಿದ್ದರು. ಎಲ್ಲರ ಕಂಗಳಲ್ಲಿಯೂ ಆತ್ಮಾರ್ಪಣೆಯ ಜ್ಯೋತಿ. ಇಂದು ಆತ್ಮಸಮರ್ಪಣೆಯ ವ್ರತವನ್ನು ತೊಟ್ಟು ರಣರಂಗ

ಕ್ಕಳಿಯುವುದರ ಮೂಲಕ ನಾವೆಲ್ಲ ಆ ಪುಣ್ಯ ಪರಂಪರೆಗೆ ಸೇರಿ ಹೋಗುತ್ತೇವೆ ಎಂದು ಅಲ್ಲಿದ್ದ ಪ್ರತಿಯೊಬ್ಬ ಗಂಡಸೂ, ಹೆಂಗಸೂ ಬಲವಾಗಿ ನಂಬಿದ್ದರು.

ಹಿಂಬದಿಯ ಉದ್ದಕ್ಕಿದ್ದ ಕೈಸಾಲೆಯಲ್ಲೂ ಉಗ್ರಾಣದಲ್ಲೂ ಆಯುಧಗಳನ್ನು ಪೇರಿಸಿಡುತ್ತಿದ್ದರು. ಊರಿನ ಏಳು ಜನ ಸಿಖ್ಖ ಪ್ರಮುಖರ ಬಳಿ ಬಂದೂಕುಗಳ ಮತ್ತು ತೋಟಾಗಳ ಐದು ಪೆಟ್ಟಿಗೆಗಳು ಇದ್ದವು. ಎರಡನೆಯ ಮಹಾಯುದ್ಧದಲ್ಲಿ ಸೆಣಸಿ ಅನುಭವ ಪಡೆದಿದ್ದ ಜತ್ಥೇದಾರ್



ಕಿಶನ್‌ಸಿಂಹನು ರಕ್ಷಣೆಯ ಹೊಣೆಯನ್ನು ಹೊತ್ತಿದ್ದ. ಬೀದಿಯ ಎಡ ತುದಿಯಲ್ಲಿನ ಮನೆಯೊಂದರಲ್ಲಿ ಎರಡು ಬಂದೂಕುಧಾರಿಗಳ ಒಂದು ತುಕಡಿಯನ್ನು ನಿಲ್ಲಿಸಲಾಗಿತ್ತು. ಇದೇ ರೀತಿ ಬೀದಿಯ ಬಲ ತುದಿಯಲ್ಲೂ ಹರಿಸಿಂಹನ ಮನೆಯಲ್ಲಿ ಎರಡು ಬಂದೂಕುಧಾರಿಗಳ ಠಾಣೆಯನ್ನೇ ಏರ್ಪಡಿಸಲಾಗಿತ್ತು. ಮೂರು ಬಂದೂಕುಗಳ ನೆಲೆಯೊಂದನ್ನು ಗುರುದ್ವಾರಗ ಮಾಳಿಗೆಯ ಮೇಲೆ ಸ್ಥಾಪಿಸಲಾಯಿತು. ಕಿಶನ್‌ಸಿಂಹ ಸದಾ ಇಲ್ಲಿಯೇ ಕುಳಿತಿರುತ್ತಿದ್ದ. ಗುರುದ್ವಾರದ ತಾರಸಿಯ ಮೇಲೆ ನಿಹಂಗ್ ಮತದ ಯೋಧರಿಬ್ಬರು ಪಹರೆ ಮಾಡುತ್ತಿದ್ದರು. ಗುರುದ್ವಾರದಲ್ಲಿನ ವಾತಾವರಣ ಮಳೆ ತುಂಬಿದ ಮೇಘದಂತೆ ರುದ್ರ ಗಂಭೀರವಾಗಿತ್ತು. ಗುಂಡಿನ ಕಾಳಗ ಗುರುದ್ವಾರದ ಹಿಂಬದಿಯಿಂದ ಆರಂಭವಾಗುವ ನಿರೀಕ್ಷೆಯಿತ್ತು. ಊರಿನ ಮುಸಲ್ಮಾನರು ಆಯುಧಗಳನ್ನು ಶೇಖರಿಸುತ್ತಿದ್ದ ಶೇಖ್ ಸಾಹೇಬರ ಹಸಿರು ತಾರಸಿ ಮನೆ ಇದ್ದುದು ಆ ಭಾಗದಲ್ಲೇ! ಕಾಫಿರರಿಗೆ ಎದುರಾಗಿ ಧರ್ಮಯುದ್ಧ ನಡೆಸಲು ಎಲ್ಲಾ ಸಿದ್ಧತೆ ನಡೆದಿತ್ತು.

ಊರಿನ ಮುಖ್ಯಸ್ಥರಾದ ಸರದಾರ ತೇಜಸಿಂಹನು ಗುರುದ್ವಾರದೊಳಕ್ಕೆ ಹೆಜ್ಜೆ ಇಡುತ್ತಿದ್ದಂತೆಯೇ ಎಲ್ಲರೂ ಕಾತರರಾಗಿ ಅವನನ್ನೇ ನೋಡುತ್ತ ಕೂತರು. ತೇಜಸಿಂಹನು ಮುಂದಕ್ಕೆ ಬಗ್ಗಿ ಹೊಸ್ತಿಲನ್ನು ಕಣ್ಣುಗಳಿಗೆ ಒತ್ತಿಕೊಂಡ. ಎದ್ದು ಮೆಲ್ಲಮೆಲ್ಲನೆ ಒಂದು ಹಳೆಯ ಕತ್ತಿಯನ್ನಿಟ್ಟಿದ್ದ ಕಂಬದ ಬಳಿ ಬಂದು ನಿಂತ. ಖಡ್ಗವನ್ನು ತೇಜಸಿಂಹನು ಎತ್ತಿದ್ದೇ ತಡ, ಜನರೆಲ್ಲ ಒಕ್ಕೊರಲಿನಲ್ಲಿ, "ಜೋ ಬೋಲೇ ಸೋ ನಿಹಾಲ್! ಸತ್ ಶ್ರೀ ಅಕಾಲ್!" ಎಂದು ಉದ್ಗಾರವೆತ್ತಿದರು. ಕಂಪಿಸುವ ಗದ್ಗದ ಸ್ವರದಲ್ಲಿ ಆತನು ಮಾತನಾಡಲು ಮೊದಲಿಟ್ಟನು.

"ಇದು ನಮ್ಮ ಪರೀಕ್ಷೆಯ ಕಾಲ. ಈಗ ಗುರುದೇವನು ನಮ್ಮೆಲ್ಲರಿಂದ ಅಪೇಕ್ಷಿಸುವುದು ಆತ್ಮ ಬಲಿದಾನವನ್ನು" 'ಆತ್ಮ ಬಲಿದಾನ.' ಎಂಬ ಶಬ್ದದಲ್ಲಿ ಅವನ ಹೃದಯದ ಸಮಸ್ತ ಭಾವನೆಗಳು ಅಡಗಿದ್ದವು.

"ಭಕ್ತಿ ಗೀತೆಗಳನ್ನು ಹಾಡಿ ಗುರುಭಕ್ತರೇ!" ಸಭೆಯಲ್ಲಿದ್ದವರೆಲ್ಲ ಕೈಜೋಡಿಸಿ ಒಂದೇ ಸ್ವರದಲ್ಲಿ ಹಾಡಲಾರಂಭಿಸಿದರು. "ಸಿಖ್ಖರದೇ ಸಿಂಹಾಸನ, ಉಳಿದವರ ಪಲಾಯನ." ಪ್ರಾರ್ಥನೆ ಮುಗಿಯುತ್ತಿದ್ದಂತೆ ಬಾಗಿಲಲ್ಲಿ ಪಹರೆ ನಿಂತಿದ್ದ ನಿಹಂಗ್ ಸಿಂಹನು ಉದ್ಗಾರವೆತ್ತಿದ, "ಜೋ ಬೋಲೇ ಸೋ ನಿಹಾಲ್" ನೆರೆದವರೆಲ್ಲ ತಾವೂ ಕೈಯೆತ್ತಿ, "ಸತ್ ಶ್ರೀ ಅಕಾಲ್! ಎಂದು ಜವಾಬುಕೊಟ್ಟರು.

# ತಮಸ್

ಕೊಂಚ ದೂರದಿಂದ ಮುಸಲ್ಮಾನರ ಘೋಷಣೆಗಳು ಕೇಳಿ ಬಂದವು:

"ಅಲ್ಲಾ ಹೋ ಅಕಬರ್!"ಪ್ರವೇಶ ದ್ವಾರದಲ್ಲಿ ಕಾಯುತ್ತಿದ್ದ ನಿಹಂಗಸಿಂಹನು ಮುಷ್ಟಿ ಕಟ್ಟಿ ಕೈ ಮೇಲಕ್ಕೆತ್ತಿದ. ಇನ್ನೇನು ಘೋಷಣೆಯನ್ನು ಕೂಗಬೇಕು ಎನ್ನುವಷ್ಟರಲ್ಲಿ ತೇಜಸಿಂಹನು ಅವನನ್ನು ತಡೆದು ಹೇಳಿದ:

"ಸಾಕು ನಿಲ್ಲಿಸು, ಶತ್ರುವಿಗೆ ತಿಳಿದೇ ಹೋಗಿದೆ."

ತೆಳು ಮೈಯ ಯುವಕನೊಬ್ಬ ಎದ್ದು ನಿಂತು ಮಾತನಾಡಲಾರಂಭಿಸಿದ: "ಮುಸಲ್ಮಾನರನ್ನು ನಮ್ಮ ವಿರುದ್ಧ ಎತ್ತಿ ಕಟ್ಟುವವರು ಆಂಗ್ಲರು ಎಂಬುದನ್ನು ನಾವು ಮರೆಯಬಾರದು. ಸಹೋದರರೇ, ಶೇಖ್ ಗುಲಾಮ್ ರಸೂಲ್ ಮತ್ತು ಊರಿನ ಇತರ ಚಿಂತನಶೀಲ ಮುಸಲ್ಮಾನರನ್ನು ನಾವು ಕಾಣಬೇಕು. ಅವರ ಸಹಕಾರದಿಂದ ಶಾಂತಿ ನೆಲೆಸುವಂತೆ ಮಾಡಬೇಕು."

ಸ್ವಲ್ಪ ಹೊತ್ತು ಗುರುದ್ವಾರದಲ್ಲಿ ಮೌನ ಆವರಿಸಿತು. ಆಗ ಗುರುದ್ವಾರದ ಮಧ್ಯಕ್ಕೆ ಬಂದು ನಿಂತು ತೇಜಸಿಂಹನು ಕಂಪಿಸುವ ಧ್ವನಿಯಲ್ಲಿ ಹೇಳಿದ, "ನಮ್ಮ ಮಕ್ಕಳೇ, ತಪ್ಪು ಹಾದಿ ಹಿಡಿದು ಈ ರೀತಿ ಮಾತನಾಡುತ್ತಿರುವುದನ್ನು ಕಂಡು ನನ್ನ ಮನಸ್ಸು ಮುರಿದು ಬೀಳುತ್ತಿದೆ. ಸಿಖ್ಖರ ಶಾಲೆಯ ಮೇಲೆ ಆಕ್ರಮಣ ನಡೆದಿದೆ. ಅಲ್ಲಿಯ ಆಳು-ಪಂಡಿತನನ್ನು ಕೊಲ್ಲಲಾಗಿದೆ. ಅವನ ಹೆಂಡತಿ ತುರುಕರ ಪಾಲಾಗಿದ್ದಾಳೆ" ಮತ್ತೆ ಸಭೆಯು ದುಃಖ ಕೋಪಗಳ ನೆಲೆಯಾಯಿತು.

ಇದೇ ಸಮಯಕ್ಕೆ ಸರಿಯಾಗಿ ಮುಸಲ್ಮಾನರ ಕೇರಿಯಲ್ಲೂ ಬುದ್ಧಿ ಹೇಳುತ್ತಿದ್ದ ಮೀರ್‌ದಾದನ ಪ್ರಾಣ ಸಂಕಟಕ್ಕೀಡಾಗಿತ್ತು. ಅವನು ಅವರ ಕೋಪಕ್ಕೆ ತುತ್ತಾಗಿದ್ದ.

"ಪೇಟೆಯಲ್ಲಿ ಇಷ್ಟೊಂದು ಜನ ಮುಸಲ್ಮಾನರನ್ನು ಕೊಂದಿದ್ದಾರೆ. ಇವರನ್ನೆಲ್ಲ ಕೊಂದವರು ಇಂಗ್ಲೀಷರೇನು? ನಾವು ಪರಸ್ಪರ ಜಗಳವಾಡುತ್ತಿದ್ದರೆತಾನೇ ಅವರ ಸ್ಥಿತಿ ಭದ್ರವಾಗಿರುವದು!

ಈ ವಾದವನ್ನು ಕೇಳಿ ಕೇಳಿ ಜನರು ಬೇಸತ್ತಿದ್ದರು. ಈಗ ಕಾಲ ಮಿಂಚಿ ಹೋಗಿತ್ತು. ನಿಹಂಗನು ಓಡುತ್ತ ಬಂದು ಕೂಗಿಕೊಂಡ, "ತುರುಕರು ಬಂದರು!"

ಗುರುದ್ವಾರದಲ್ಲಿ ವಿದ್ಯುತ್ ಸಂಚಾರವಾದಂತಾಯಿತು. ಸ್ವಲ್ಪ ಹೊತ್ತು ತೇಜಸಿಂಹನಿಗೆ ದಿಕ್ಕು ತೋಚದೆ ಹೋಯಿತು. ತಮಟೆಯ ಸದ್ದು ಹತ್ತಿರವಾಗುತ್ತಿತ್ತು. 'ಯಾ ಅಲಿ!" ಎಂಬ ಘೋಷಣೆ ಹತ್ತಿರದಿಂದ ಕೇಳಿಬರುತ್ತಿತ್ತು. ಒಂದು ಕ್ಷಣ ಸಭೆಯಲ್ಲಿ ಆತಂಕ ಹರಡಿತು.

ಮತ್ತೆ ಮೊದಲಿನಂತೆ ಭಾವಾವೇಶ.

"ಗುರುಭಕ್ತನಾದ ಯಾವ ಸಿಖ್ ಸೋದರನೂ ಹೊರಕ್ಕೆ ಹೋಗಕೂಡದು." ಜಸ್‌ಬೀರ್ ಕೌರಳ ಕೈ ಕಠಾರಿಯ ಹಿಡಿಯ ಮೇಲೆ ಬಿಗಿಯಾಯಿತು. ಆಗ ಬಲದೇವ್‌ಸಿಂಹನಿಗೆ ತನ್ನ ತಾಯಿಯ ನೆನಪಾಯಿತು. ತಮ್ಮ ಮುದಿ ತಾಯಿ ತಂದೆಗಳ ಗತಿ ಏನು? ಎಂದು ತವಕಪಡುವ ಇನ್ನೂ ಅನೇಕರು ಆ ಸಭೆಯಲ್ಲಿದ್ದರು. ನೋಡನೋಡುತ್ತಿದ್ದಂತೆಯೇ ಅವನು ಕತ್ತಿಯನ್ನು ಹಿರಿದು ತನ್ನ ಮನೆಯ ಕಡೆಗೆ ಓಡಿದ.

ಸ್ವಲ್ಪ ಹೊತ್ತಿನಲ್ಲಿಯೇ ಅವನು ಗುರುದ್ವಾರದತ್ತ ಬರುತ್ತಿದ್ದುದು ಕಾಣಿಸಿತು. ಯಾರನ್ನೋ ಕೊಂದು ಬಂದಿರಬೇಕೆಂದು ಕೆಲವರು ಊಹಿಸಿದರು. ತಾಯಿಯನ್ನು ರಕ್ಷಿಸುವುದು ಸಾಧ್ಯವಿಲ್ಲ. ತುರುಕರು ಆಕೆಯನ್ನು ಕೊಲ್ಲುತ್ತಾರೆ ಎಂದು ಯೋಚಿಸಿದ ಅವನು ಮುಯ್ಯಿಗೆ ಮುಯ್ಯಾಗಿ ಮುದಿ ಕರೀಂ ಭಕ್ಷನನ್ನು ಬಲಿ ತೆಗೆದುಕೊಂಡಿದ್ದ.

## ಅಧ್ಯಾಯ-೧೩

ಹರನಾಮ್‌ಸಿಂಹನು ಹಿಂದೆ ಮುಂದೆ ನೋಡುತ್ತ ನಿಂತ. ಬಂತೋ ಬಾಗಿಲು ತಟ್ಟೆ

ಗಟ್ಟಿಯಾಗಿ ಕೂಗಿದಳು, "ಪುಣ್ಯಾತ್ಮರೇ, ಬಾಗಿಲು ತೆರೆಯಿರಿ, ಕಷ್ಟಕ್ಕೆ ಸಿಕ್ಕಿ ಪರದೇಶಿಗಳಾಗಿ ನಾವು ನಿಮ್ಮ ಬಾಗಿಲಿಗೆ ಬಂದಿದ್ದೇವೆ."

ಮನೆಯ ಒಳಗಿಂದ ಕಾಲಸಪ್ಪಳ ಕೇಳಿತು. ಬಾಗಿಲು ತೆಗೆದವಳು ಪ್ರೌಢ ವಯಸ್ಸಿನ ದಪ್ಪನಾದ ಹೆಂಗಸು. ಅವಳ ಹಿಂದೆ ಯುವತಿಯೊಬ್ಬಳು ನಿಂತಿದ್ದಳು.

"ನೀವಾರು?" ಇಳಿ ವಯಸ್ಸಿನ ಹೆಂಗಸು ಕೇಳಿದಳು.

"ನಾವು ಥೋಕ್ 'ಇಲಾಹಿ ಬಕ್ಷ್ ಊರಿನಿಂದ ಬಂದಿದ್ದೇವೆ. ನಮ್ಮ ಮನೆ ಮಠಗಳನ್ನು ಕೊಳ್ಳೆ ಹೊಡೆದರು. ಇರುಳೆಲ್ಲ ನಡೆದು ಬಂದಿದ್ದೇವೆ."

"ಬನ್ನಿ, ಒಳಕ್ಕೆ ಬನ್ನಿ."

"ಗಂಡಸರು ಎಲ್ಲಿಗೆ ಹೋಗಿದ್ದಾರೆ?" ಹರನಾಮ್‌ಸಿಂಹನು ಕೇಳಿದ. ಆ ಹೆಂಗಸು ತಿರುಗಿ ಸಿಂಹನನ್ನು ನೋಡಿದಳು. ಒಮ್ಮೆಲೆ ಹರನಾಮ್‌ಸಿಂಹನಿಗೆ ಹೊಳೆಯಿತು. ಶರೀರ ನಡುಗಲಾರಂಭಿಸಿತು.

ತರುಣಿ ಮನೆಯೊಳಕ್ಕೆ ಹೊರಟುಹೋಗಿದ್ದಳು. ಆ ಹೆಂಗಸು ಒಂದು ಮಣ್ಣಿನ ಮುಂತೆಯಲ್ಲಿ ಲಸ್ಸಿಯನ್ನು ಹಾಕಿಕೊಂಡು ತಂದಳು.

"ಇಕೋ, ಲಸ್ಸಿ ಕುಡಿಯಿರಿ."

"ತಂಗಿ, ನಿನಗೆ ಒಳ್ಳೆಯದಾಗಲಮ್ಮ. ಭಗವಂತ ಯಾರನ್ನೂ ಪರದೇಶಿಯನ್ನಾಗಿ ಮಾಡದಿರಲಿ," ಹರನಾಮ್‌ಸಿಂಹ ಅರ್ಧ ಲಸ್ಸಿ ಕುಡಿದು ಪಾತ್ರೆಯನ್ನು ಬಂತೋ ಕಡೆಗೆ ಚಾಚಿದ.

"ಸರದಾರರೇ! ನಿಮ್ಮಿಂದ ನಾನು ಏನೂ ಮರೆಮಾಚುವುದಿಲ್ಲ," ಮನೆಯ ಒಡತಿ ಹೇಳಿದಳು- "ನನ್ನ ಗಂಡ, ಮಗ ಊರಿನವರೊಂದಿಗೆ ಹೊರಗೆ ಹೋಗಿದ್ದಾರೆ. ಇನ್ನೇನು ಅವರು ವಾಪಸು ಬರುವ ಸಮಯ. ನನ್ನ ಮಗ ಮುಸ್ಲಿಂ ಲೀಗಿನವನು, ನಿಮ್ಮೊಂದಿಗೆ ಹೇಗೆ ವ್ಯವಹರಿಸುತ್ತಾನೋ ನನಗೆ ಗೊತ್ತಿಲ್ಲ."

ಸ್ವಲ್ಪ ಹೊತ್ತಿನವರೆಗೆ ಸಿಂಹನು ತೀವ್ರ ಚಿಂತೆಯಲ್ಲಿ ಮುಳುಗಿದ್ದ. ಆಮೇಲೆ ಕ್ಷೀಣ ಧ್ವನಿಯಲ್ಲಿ ಹೇಳಿದ, "ಭಗವಂತನ ಆಜ್ಞೆ! ನಡೆ ಬಂತೋ," ಗಂಡ ಹೆಂಡತಿ ಬಾಗಿಲ ಕಡೆ ಹೆಜ್ಜೆ ಇಟ್ಟರು. ಚಿಲಕ ತೆಗೆಯಲು ಕೈಯೆತ್ತಿದಾಗ ಆ ಹೆಂಗಸು ತಡೆಯುತ್ತ ಹೇಳಿದಳು, "ನಿಲ್ಲಿ, ಏನೇ ಆಗಲಿ, ಹೋಗಬೇಡಿ."

ಕತ್ತಲ ಕೋಣೆಯ ಹೊಸಲಲ್ಲಿ ಅಕರಾ ಅತ್ತೆಯನ್ನೇ ನೋಡುತ್ತಿದ್ದಳು. ಎರಡು ಹೆಜ್ಜೆಯನ್ನು ಮುಂದಿಟ್ಟು ಹೇಳಿದಳು, "ಅವರು ಹೋಗಲಿ ಬಿಡು. ನಾವು ಗಂಡಸರನ್ನು ಕೇಳಿಲ್ಲ."

'ನಾನು ಹೇಳಿಕೊಳ್ಳುತ್ತೇನೆ. ನೀನು ಒಳಗೆ ಹೋಗಿ ಏಣಿ ತೆಗೆದುಕೊಂಡು ಬಾ."

"ಅಕರಾ ಏಣಿ ತಂದಳು. ಅತ್ತೆ ಅದನ್ನು ಕೋಣೆಯ ಗೋಡೆಗೆ ಆನಿಸಿದಳು. ಕೋಣೆಯ ಮೇಲೆ ಒಂದು ಸಣ್ಣ ಅಟ್ಟವಿತ್ತು.

"ನೀವಿಬ್ಬರೂ ಏಣಿ ಹತ್ತಿ. ನೀವು ಇಲ್ಲಿರುವುದು ಯಾರಿಗೂ ತಿಳಿಯುವುದು ಬೇಡ. ಮುಂದೆ ದೇವರ ಇಚ್ಛೆ."

ಅತ್ತೆ ಸೊಸೆಯ ಮುಖವನ್ನೇ ನೋಡುತ್ತ ನಿಂತಳು. ಎಷ್ಟೋ ದಿನದಿಂದ ರಮ್‌ಜಾನನ ತಲೆ ಕೆಟ್ಟಿದೆ. ಆಗ ಈ ಸರದಾರನು ಮೇಲಿಂದ ಗುಂಡು ಹಾರಿಸಿದರೆ! ಆಕೆ ಎದ್ದು ಹೋಗಿ ಅಟ್ಟದ ಕೆಳಗೆ ನಿಂತಳು. "ಸರದಾರರೇ! ನಿಮ್ಮ ಬಂದೂಕನ್ನು ಇತ್ತ ತನ್ನಿ".

"ನಾನು ಬಂದೂಕನ್ನು ಹೇಗೆ ತಾನೆ ಒಪ್ಪಿಸಲಿ, ತಾಯಿ?"

ಇಬ್ಬರೂ ಮೌನವಾಗಿದ್ದರು. ಹರನಾಮ್‌ಸಿಂಹನು ಒಮ್ಮೆ ಪತ್ನಿಯ ಮುಖ ನೋಡಿದ. ಮತ್ತೆ ಮಾತಿಲ್ಲದೆ ಬಂದೂಕನ್ನು ಕೆಳಕ್ಕೆ ಇಳಿಯಬಿಟ್ಟ. ಸ್ವಲ್ಪ ಹೊತ್ತಿನಲ್ಲಿ ಅಕರಾ ಮತ್ತು ಅವಳ ಮಾವ ದೊಡ್ಡ ಕರಿಯ ಟ್ರಂಕನ್ನು ಅಂಗಳಕ್ಕೆ

# ತಮಸ್

ಹೊತ್ತು ತಂದರು.

ಕೈಯೆತ್ತಿಯೇ ಹರನಾಮ್‌ಸಿಂಹನು ಹೆಂಡತಿಯ ಮೊಣಕಾಲನ್ನು ತಿವಿದ. "ಟ್ರಂಕು ನಮ್ಮದೇ. ನಮ್ಮ ಅಂಗಡಿಯನ್ನೇ ಕೊಳ್ಳೆ ಹೊಡೆಯುತ್ತಿದ್ದರೆಂದು ಕಾಣುತ್ತದೆ."

ಇತ್ತ ಇವರಿಬ್ಬರೂ ಪೆಟ್ಟಿಗೆಯ ಬೀಗವನ್ನು ಒಡೆಯಲು ಪ್ರಾರಂಭಿಸಿದರು.

ಮನೆಯಲ್ಲಿ ಒಬ್ಬ ಸಿಖ್ಖ ಮತ್ತು ಅವನ ಹೆಂಡತಿಗೆ ಆಶ್ರಯ ಕೊಟ್ಟಿದ್ದೇನೆಂಬುದು ಅವನ ಹೆಂಡತಿ ರಾಜೋ ತಿಳಿಸಿದಳು.

ಅಟ್ಟದ ಬಾಗಿಲನ್ನು ತೆಗೆದು ಸಿಂಹನು ಹೇಳಿದ, "ಬೀಗವನ್ನು ಏಕಮ್ಮ ಒಡೆಯುತ್ತೀ? ಬೀಗದ ಕೈ ಇಲ್ಲಿದೆ, ಅಹಸಾನ್ ಅಲಿ! ನಾನಪ್ಪ ಹರನಾಮ್‌ಸಿಂಹ. ನಿನ್ನ ಮೇಲೆ ಗುರುಕೃಪೆ ಇರಲಿ."

ತಲೆಯೆತ್ತಿ ನೋಡಿದ ಅಲಿ ಪೆಚ್ಚಾದ. ಅಕರಾಳ ಕೈ ತಟಸ್ಥವಾಗಿತ್ತು.

"ಹರನಾಮ್‌ಸಿಂಹ, ಸ್ವಲ್ಪ ಕೆಳಗಿಳಿ. ನಿನ್ನೆ ರಾತ್ರಿಯೇ ಜನ ನಿನ್ನನ್ನು ಹುಡುಕುತ್ತಿದ್ದರು. ಇಬ್ಬರೂ ಕೆಳಗಿಳಿದು ಬಂದಿದ್ದರು. ಅಹಸಾನ್ ಅಲಿ ಹೇಳಿದ, "ಇವರನ್ನು ಬೂಸಾ ಇರುವ ಕೋಣೆಯಲ್ಲಿ ಕೂಡಿಸು ರಾಜೋ."

ಹೊತ್ತು ಸಾಗುತ್ತಿತ್ತು. ಅವರಿಗೆ ಎಚ್ಚರವಾದದ್ದು ಯಾರೋ ಬಾಗಿಲನ್ನು ಕೊಡಲಿಯಿಂದ ಹೊಡೆಯುತ್ತಿದ್ದಾಗಲೇ. ಯಾರೋ ಕೂಗಿ ಕರೆಯುತ್ತಿದ್ದರು: "ಬನ್ನಿರೋ ಹೊರಗೆ." ಮತ್ತೆರಡು ಏಟಿಗೆ ಅಗಳಿ ಮುರಿದು ಬಿತ್ತು. "ನಿನ್ನ... ಏನ್ ಮಾಡ್ತೀನಿ..." ಎಂದ ರಮ್‌ಜಾನನು ಹರನಾಮ್‌ಸಿಂಹನ ಕುತ್ತಿಗೆ ಹಿಡಿದುಕೊಂಡ. ಅವನು ಸಿಂಹನನ್ನು ಗುರುತಿಸಿದ. ಜಾತಿ ವೈಷಮ್ಯವಿರಲಿ ಸಂಸ್ಕಾರದ ಒಂದಾನೊಂದು ಲಕ್ಷ್ಮಣ ರೇಖೆಯನ್ನು ದಾಟುವುದೂ ಸುಲಭವಾಗಿರಲಿಲ್ಲ. ರಮ್‌ಜಾನನೂ ಅದನ್ನು ದಾಟಲಾರದೇ ಹೋದ.

ಅರ್ಧ ರಾತ್ರಿಯ ಸಮಯ ರಾಜೋ ಮುಂದೆ ಮುಂದೆ ಹೋಗುತ್ತಿದ್ದಳು. ಹರನಾಮ್ ಸಿಂಹ್ ಮತ್ತು ಬಂತೋ ಅವಳ ಹಿಂದೆ ನಡೆಯುತ್ತಿದ್ದರು. ಮತ್ತೆ ಅವರು ನದಿ ದಡದ ಕಡೆಗೆ ಹೊರಟಿದ್ದರು. ರಾಜೋ ತೋಪಿನ ಅಂಚಿನಲ್ಲಿ ಮುಂದೆ ಮುಂದೆ ಸಾಗುತ್ತಿದ್ದಳು. ತನ್ನ ಕೈಯಲ್ಲಿದ್ದ ಬಂದೂಕನ್ನು ರಾಜೋ ಹರನಾಮ್‌ಸಿಂಹನ ಕೈಗಿತ್ತಳು. "ಹೋಗಿ ಬನ್ನಿ, ಮುಂದೆ ನಿಮ್ಮ ಅದೃಷ್ಟ." ಅವಳ ಧ್ವನಿ ಆರ್ದ್ರವಾಗಿತ್ತು.

ರಾಜೋ ತನ್ನ ಕುರ್ತಾ ಜೇಬಿಗೆ ಕೈ ಹಾಕಿ ಒಂದು ಸಣ್ಣ ಗಂಟನ್ನು ತೆಗೆದಳು.

"ಇವು ನಿನ್ನ ಎರಡು ಒಡವೆಗಳು. ಮುಂದೆ ನಿಮಗೆ ಕಷ್ಟಕಾಲ. ಹತ್ತಿರ ಎರಡು ಒಡವೆ ಇದ್ದರೆ ಸಮಯಕ್ಕೆ ಒದಗುತ್ತವೆ."

"ತಂಗಿ, ಯಾವುದೋ ಜನ್ಮದ ಸುಕೃತದಿಂದಲೇ ನೀನು ನಮಗೆ ಸಿಕ್ಕಿದ್ದು" ಎನ್ನುತ್ತಾ ಬಂತೋ ಕಣ್ಣೀರು ಒರೆಸಿಕೊಂಡಳು.

ಆ ವೃದ್ಧ ದಂಪತಿಗಳು ಇಳಿಜಾರಿನಲ್ಲಿ ಇಳಿಯಲಾರಂಭಿಸಿದರು. ರಾಜೋ ದಿಬ್ಬದ ಮೇಲೆ ನಿಂತು ಇವರ ಕಡೆ ನೋಡುತ್ತಿದ್ದಳು.

## ಅಧ್ಯಾಯ-೧೪

ಈ ಮಧ್ಯೆ ಹಳ್ಳಿಗಾಡಿನ ಹುಲ್ಲುತಿಟ್ಟುಗಳಲ್ಲಿ ಇನ್ನೊಂದು ಬಗೆಯ ನಾಟಕ ನಡೆದಿತ್ತು. ಘೋಕ್ ಇಲಾಹಿ ಬಕ್ಷ್ ಮತ್ತು ಮುರೀದ್‌ಪುರಗಳಿಂದ ಕೊಳ್ಳೆಯ ಸಾಮಾನು ಹೊತ್ತು ರಂಜಾನ ಮತ್ತು ಅವನ ಸಂಗಡಿಗರು ಹರಟುತ್ತ ಹಿಂದಿರುಗುತ್ತಿದ್ದಾಗ ದೂರದ ದಿಬ್ಬವೊಂದರ ಬಳಿ ತಪ್ಪಿಸಿಕೊಂಡು ಓಡುತ್ತಿರುವ ಸಿಖ್ಖನೊಬ್ಬ ಕಣ್ಣಿಗೆ ಬಿದ್ದ. ಅವನು ಗುಡ್ಡ ಕಣಿವೆಗಳ ದಾರಿಯನ್ನೇ ಹಿಡಿದಿದ್ದ. ಸರದಾರನು ಕಾಣಿಸಿದ ಸ್ಥಳಕ್ಕೆ ಅವರು ಧಾವಿಸಿಬಂದಾಗ ಅವನು ಅಲ್ಲಿ ಇರಲಿಲ್ಲ.

"ಯಾವುದಾದರೋ ಗವಿಯಲ್ಲಿ ಅಡಗಿಕೊಂಡರ

ಬೇಕು," ಎಂದ ನೂರ್‌ದೀನ್. ಅವರು ಗವಿಯನ್ನೆಲ್ಲ ಶೋಧಿಸಿದರು. ಆದರೆ ಸರದಾರ ಸಿಕ್ಕಲಿಲ್ಲ.

ಆ ಗುಂಪಿಗೆ ಸೇರಿದವನೊಬ್ಬ ಕೂಗಿ ಹೇಳಿದ, "ಅಗೋ ಅಲ್ಲಿ ಹೋಗುತ್ತಿದ್ದಾನೆ." ಸರದಾರನ ಹೊಳೆಯುತ್ತಿದ್ದ ಬಟ್ಟೆಗಳು ಅವನ ಕಣ್ಣಿಗೆ ಬಿದ್ದಿದ್ದವು. ಎಲ್ಲರೂ ಆ ಕಡೆಗೆ ಓಡಿದರು. ಒಮ್ಮೆಗೆ ಕಲ್ಲು ತೂರಲಾರಂಭಿಸಿದರು. ಅಷ್ಟರಲ್ಲಿ ಅವನು ಗಟ್ಟಿಯಾಗಿ ಹೇಳಿದ, "ನಿಲ್ಲಿ, ಹೆಂಟೆಗಳಿಂದ ಹೊಡೆಯಬೇಡಿ."

ಬಹಳ ಜನ ಎತ್ತಿದ ಕೈಗಳನ್ನು ಕೆಳಗಿಳಿಸಿದರು.

"ಹೇಳಯ್ಯಾ ಸರದಾರ, ಮುಸಲ್ಮಾನನಾಗಲು ಒಪ್ಪುವಿಯೋ ಇಲ್ಲವೋ?"

"ಲೋ ಸಿಖ್ಖ ಬಡ್ಡೀ...!"

ಈಗಲೂ ಸೊಲ್ಲಿಲ್ಲ. ಮತ್ತೆ ಎಲ್ಲರೂ ಕಲ್ಲುಗಳನ್ನು ಎತ್ತಿಕೊಂಡು ಎಸೆಯತೊಡಗಿದರು. "ಹೇಳು, ಖುರಾನಿನ ಕಲಮಾ ಓದುವಿಯಾ?" ರಂಜಾನ್ ಕೇಳಿದ. ನೂರ್‌ದೀನನ ಹಿಂದೆ ನಿಂತಿದ್ದ ಒಬ್ಬನು ಸರದಾರನನ್ನು ಗುರುತಿಸಿದ. ಮೀರ್‌ಪುರದಲ್ಲಿ ಬಟ್ಟೆಯಂಗಡಿ ಇಟ್ಟಿದ್ದ ಇಕ್ಬಾಲ್‌ಸಿಂಹ ಇವನು.

"ಕಲಮಾ ಓದುತ್ತೇನೆ," ಬಿಕ್ಕಳಿಸುತ್ತಾ ಇಕ್ಬಾಲ್‌ಸಿಂಹನು ಉಸುರಿದ. ರಂಜಾನನು ಕಲ್ಲನ್ನು ಒಂದೆಡೆಗೆ ಎಸೆದ. "ಎದ್ದುಬಾ ನೀನೀಗ ನಮ್ಮ ಸಹೋದರ," ಅಂದ.

ಮತ್ತೆ ಮೆರವಣಿಗೆ ಗಾಣಿಗ ಇಮಾಮ್‌ದ್ದೀನ್ ಮನೆಯ ಕಡೆ ಹೊರಟಿತು. ವಾತಾವರಣ ಗಂಭೀರವಾಗಿತ್ತು. ಸಂಜೆಯಾಗುವ ವೇಳೆಗೆ ಇಕ್ಬಾಲ್ ಅಹಮದನಿಗೆ ಸುನ್ನತ್ ಆಯಿತು. ಸಂಜೆಗತ್ತಲು ಕವಿಯುವುದರೊಳಗಾಗಿ ಇಕ್ಬಾಲ್‌ಸಿಂಹನ ಮೈಮೇಲೆ ತುರುಕರ ಎಲ್ಲಾ ಲಕ್ಷಣಗಳು ಕಾಣತೊಡಗಿದವು. ಮುಸಲ್ಮಾನರ ಮನೆಯ ಬಾಗಿಲುಗಳು ಅವನಿಗೆ ಈಗ ತೆರೆದಿದ್ದವು.

## ಅಧ್ಯಾಯ–೧೫

ತುರುಕರು ಬಂದಿದ್ದರು. ತಮ್ಮ ಹಳೆಯ ಶತ್ರುಗಳಾದ ಸಿಖ್ಖರ ಮೇಲೆ ಆಕ್ರಮಣ ನಡೆಸುತ್ತಿದ್ದೇವೆ ಎಂದು ತುರುಕರೂ, ಇನ್ನೂರು ವರ್ಷಗಳ ಹಿಂದೆ ನಮ್ಮ ಪೂರ್ವಜರು ಹತ್ತಿಕ್ಕಿದ್ದ ತುರುಕರೇ ಇವರು ಎಂದು ಸಿಖ್ಖರೂ ನಂಬಿದ್ದರು. ಅವರ ದೃಷ್ಟಿಯಲ್ಲಿ ಹಿಂದಿನಿಂದ ನಡೆದು ಬಂದ ಯುದ್ಧಗಳ ಸಾಲಿನಲ್ಲಿ ಇಂದಿನ ಹೋರಾಟವೂ ಒಂದಾಗಿತ್ತು. ಭಾರಿ ಕಾಳಗವಾಯಿತು. ಎರಡು ದಿನ ಎರಡು ರಾತ್ರಿಗಳವರೆಗೂ ಹೋರಾಟ ನಡೆಯಿತು. ಕೊನೆಗೊಮ್ಮೆ ಶಸ್ತ್ರಗಳು ಮುಗಿದುಹೋಗಿ ಯುದ್ಧ ಮುಂದುವರಿಯುವುದು ಅಸಾಧ್ಯವಾಯಿತು. ಪವಿತ್ರ ಗುರುಗ್ರಂಥದ ಪೀಠದ ಹಿಂದುಗಡೆ ಏಳುಶವಗಳನ್ನು ಬಿಳಿಯ ಬಟ್ಟೆಯಲ್ಲಿ ಸುತ್ತಿಟ್ಟಿದ್ದರು. ಊರ ಒಳಗೆ ಇನ್ನೂ ಅನೇಕ ಶವಗಳು ಬಿದ್ದಿದ್ದವು.

ಶೇಖ್ ಗುಲಾಂ ರಸೂಲನ ಮನೆಯ ಜಗುಲಿಯ ಮೇಲೆ ಕೆಲವರು ಕುಳಿತು ಮಾತಾಡುತ್ತಿದ್ದರು. ಹೆಣಗಳನ್ನು ಸಾಗಿಸಲು ಇವರಿಗೂ ಅವಕಾಶ ಸಿಕ್ಕಿರಲಿಲ್ಲ. ಜಗಲಿಯ ಮೇಲೆ ಕುಳಿತಿದ್ದ ಧರ್ಮಯೋದ್ಧರು ಹೊರಗಿನವರು. ಎಲ್ಲರೂ ತಂತಮ್ಮ ಸಾಹಸಗಳನ್ನು ಕೊಚ್ಚಿಕೊಳ್ಳುತ್ತಾ ವಿವರಿಸುತ್ತಿದ್ದರು:

"ನಾವು ಬೀದಿಗೆ ನುಗ್ಗಿದ ತಕ್ಷಣ ಕಾಫಿರರು ಓಟಕಿತ್ತರು. ಹಿಂದೂ ಹುಡುಗಿಯೊಬ್ಬಳು ಮಾಳಿಗೆಯ ಮೇಲಕ್ಕೆ ಹತ್ತಿದಳು. ಹತ್ತು ಹನ್ನೆರಡು ಜನ ಅವಳನ್ನು ಅಟ್ಟಿಸಿಕೊಂಡು ಹೋದೆವು. ಹಿಡಿದೇಬಿಟ್ಟೆವು. ನಬಿ, ಲಾಲೂ, ಮಾಝಾ, ಮುರ್ತಜಾ ಎಲ್ಲರೂ ಅವಳ ಮೇಲೆ ಬಿದ್ದೆವು. ನನ್ನ ಸರದಿ ಬಂದಾಗ ನೋಡಿದರೆ ಹುಡುಗಿ ಸತ್ತಿದ್ದಾಳೆ."

ಇನ್ನೊಬ್ಬ ಧರ್ಮಯೋದ್ಧನು ಕೊಚ್ಚುತ್ತಿದ್ದ: 'ಓಡುತ್ತಿದ್ದ ಹೆಂಗಸೊಬ್ಬಳನ್ನು ನಾವು ಬೀದಿಯಲ್ಲಿ ಹಿಡಿದೆವು. "ನನ್ನನ್ನು ಕೊಲ್ಲಬೇಡಿ. ನೀವು ಏಳೂ ಜನ ನನ್ನನ್ನು ಇಟ್ಟುಕೊಳ್ಳಿ," ಎಂದು ಹೆಂಗಸು ಕೂಗಿಕೊಳ್ಳಲಾರಂಭಿಸಿದಳು.

"ಮುಂದಕ್ಕೆ?"

"ಮುಂದಕ್ಕೇನು? ಅಜೀಜ ಕಠಾರಿಯಿಂದ ಒಂದೇ ಏಟಿಗೆ ಅವಳನ್ನು ಮುಗಿಸಿದ." ತಾಳ ತಮ್ಮಟೆಗಳ ಸದ್ದು ಊರಲ್ಲಿ ಕೇಳಿಸಲಾರಂಭಿಸಿತು. ನಾಲ್ಕೂ ಕಡೆಯಿಂದ ಘೋಷಣೆಗಳ ಗರ್ಜನೆ ಮತ್ತು ಗುಂಡಿನ ಸುರಿಮಳೆ.

"ಸತ್ ಶ್ರೀ ಅಕಾಽಽಲ್"ಕತ್ತಿಗಳನ್ನು ಝಳಪಿಸುತ್ತಾ ಸಿಖ್ಖರ ಗುಂಪೊಂದು ಹೊರಬಿತ್ತು. ಅದರ ಮಧ್ಯದಲ್ಲಿ ಬಕ್ಷಿ. ಕೊಲ್ಲಲು ಇಲ್ಲವೇ ಸಾಯಲು ಅವರು ಸಿದ್ಧರಾಗಿದ್ದರು.



ಗುರುದ್ವಾರದಲ್ಲಿ ಎಡಗೋಡೆಯ ಬಳಿ ಹೆಂಗಸರು ಮಕ್ಕಳು ನೆರೆದಿದ್ದರು. ಜಸ್‌ಬೀರ್ ಕೌರಳ ಮುಖದಲ್ಲಿ ದೃಢನಿರ್ಧಾರದ ಕಳೆ ಏರಿತ್ತು. ಸೊಂಟದಲ್ಲಿ ತೂಗಾಡುತ್ತಿದ್ದ ಕಠಾರಿಯನ್ನು ಆಕೆ ಇನ್ನೂ ಬಿಗಿಮುಷ್ಟಿಯಲ್ಲೇ ಹಿಡಿದಿದ್ದಳು. ಮಹಿಳೆಯರು ಗಾಯತ್ರಿಯನ್ನು ಜಪಿಸಲಾರಂಭಿಸಿದರು.

ಗುರುದ್ವಾರದ ಹೊರಗಡೆ ಸಿಖ್ಖರ ಜಾಥಾ ಕತ್ತಿಗಳನ್ನು ಝಳಪಿಸುತ್ತ ಗಲ್ಲಿಯ ಅಂಧಕಾರದಲ್ಲಿ ಕಣ್ಮರೆಯಾಯಿತು.

ಗುರುದ್ವಾರದಿಂದ ಹೊರಬಿದ್ದ ಸ್ತ್ರೀಯರ ಸಾಲು ಗಲ್ಲಿಯ ಬಲಭಾಗದಲ್ಲಿ ಎಡಕ್ಕೆ ತಿರುಗಿತು. ಮಂತ್ರಮುಗ್ಧರಾಗಿ ಅವರೆಲ್ಲ ಮುಂದೆ ಮುಂದೆ ನಡೆಯುತ್ತಿದ್ದರು. ನಾವು ಎಲ್ಲಿಗೆ ಹೋಗುತ್ತಿದ್ದೇವೆ, ಏಕೆ ಹೋಗುತ್ತಿದ್ದೇವೆ ಎನ್ನುವುದರ ಬಗ್ಗೆ ಅವರಲ್ಲಿ ಯಾರಿಗೂ ಗಮನವಿರಲಿಲ್ಲ.

ಎಲ್ಲರಿಗಿಂತ ಮೊದಲು ಬಾವಿಗೆ ಹಾರಿದವಳು ಜಸ್‌ಬೀರ್ ಕೌರ್. ತಕ್ಷಣ ಬಾವಿಯ ಕಟ್ಟೆಯ ಮೇಲೆ ಅನೇಕ ಮಹಿಳೆಯರು ಹತ್ತಿದರು. ಮೊದಲು ಹರಿಸಿಂಹನ ಹೆಂಡತಿ ಬಾವಿಯ ಕಟ್ಟೆಯ ಮೇಲೆ ಹತ್ತಿದಳು. ಮತ್ತೆ ತನ್ನ ನಾಲ್ಕು ವರ್ಷದ ಮಗನನ್ನು ಎಳೆದುಕೊಂಡು ಒಂದೇ ಏಟಿಗೆ ಬಾವಿಗೆ ಹಾರಿದಳು. ಸ್ವಲ್ಪ ಹೊತ್ತಿನಲ್ಲಿಯೇ ಊರಿನ ಹತ್ತಾರು ಹೆಂಗಸರು ತಮ್ಮ ಮಕ್ಕಳ ಸಮೇತ ಬಾವಿಯ ಪಾಲಾದರು.

ಗಲ್ಲಿಯ ಎಡಗಡೆಯಿಂದ ಹೆಣಗಳನ್ನು ಮೆಟ್ಟುತ್ತಾ ತುರುಕರು ಬಂದಾಗ ಗುರುದ್ವಾರದಲ್ಲಿ ಒಬ್ಬಳಾದರೂ ಹೆಂಗಸು ಇರಲಿಲ್ಲ.

ಬೆಳಗಾಗುತ್ತಿದ್ದಂತೆಯೇ ಅಸಂಖ್ಯ ಹದ್ದುಕಾಗೆಗಳು ಆಕಾಶದಲ್ಲಿ ಹಾರಾಡಲಾರಂಭಿಸಿದುವು. ಅನೇಕ ರಣಹದ್ದುಗಳು ಕಾಣಿಸಿಕೊಂಡವು. ಗುರುದ್ವಾರದಿಂದ ಬಾವಿಯ ಕಡೆ ಹೋಗುವ ದಾರಿಯಲ್ಲಿ ಉದ್ದಕ್ಕೂ ಹೆಂಗಸರ ಸಣ್ಣಪುಟ್ಟ ಒಡವೆಗಳು, ಬಳೆಯ ಚೂರುಗಳು ಬಿದ್ದಿದ್ದವು. ರಾತ್ರಿಯೆಲ್ಲ ಬೀಸಿದ್ದ ಪ್ರಚಂಡ ಬಿರುಗಾಳಿಯ ಗುರುತುಗಳು ಎಲ್ಲೆಲ್ಲೂ ಕಣ್ಣಿಗೆ ಬೀಳುತ್ತಿದ್ದವು.

ವಿಮಾನವು ಹಳ್ಳಿಯನ್ನು ಮೂರು ಸುತ್ತು ಹೊಡೆಯಿತು. ಮೂರನೆಯ ಸುತ್ತಿನಲ್ಲಿ ಕೆಳಗೆ ನಿಂತಿದ್ದ ಹಳ್ಳಿಯ ಜನರು ವೈಮಾನಿಕನ ವಂದನೆಗೆ ಅಭಿವಂದನೆ ಮಾಡಿದರು.

ಹಳ್ಳಿಯಲ್ಲಿ ಈಗ ವಾತಾವರಣವೇ ಬದಲಾಗಿತ್ತು. ಜನರು ಹೊರಗೆ ಬರಲಾರಂಭಿಸಿದರು.

ಗಲಭೆ ಮುಗಿದಿತ್ತು. ಬೆಂಕಿಯ ಪ್ರಕರಣಗಳೂ ಕೊಲೆ ಸುಲಿಗೆಗಳೂ ಹೇಳಹೆಸರಿಲ್ಲದೆ ಮಾಯವಾದವು.

## ಅಧ್ಯಾಯ ೧೬

ಕುತುಬುದ್ದೀನ ಮೊಹಲ್ಲಾದಲ್ಲಿ ಮಸೀದಿಯ ಎದುರು, ರಸ್ತೆಯಾಚೆ ಆಯುಧ ಹಿಡಿದ ನಾಲ್ವರು ಸಿಪಾಯಿಗಳು ಕುರ್ಚಿಯ ಮೇಲೆ ಕುಳಿತಿದ್ದರು. ಊರಿಗೆ ಸೈನ್ಯ ಬಂದಿತ್ತು. ಐದನೆಯ ದಿನವಾದ ಇಂದು ಕರ್ಫ್ಯೂ ಅವಧಿಯನ್ನು ಸಂಜೆ ಆರರಿಂದ ಬೆಳಿಗ್ಗೆ ಆರರ ತನಕ ಸಡಿಲಿಸಲಾಗಿತ್ತು. ಕಚೇರಿ, ಶಾಲೆ-ಕಾಲೇಜುಗಳನ್ನು ಇನ್ನೂ ತೆರೆದಿರಲಿಲ್ಲ.

ನಿರೀಕ್ಷಣೆಗೆಂದು ಹೊರಟಿದ್ದ ರಿಚರ್ಡನ ಜೀಪು ಗಾಡಿ ಆರೋಗ್ಯಾಧಿಕಾರಿಯ ಮನೆಯ ಮುಂದೆ ಬಂದು ನಿಂತಿತು. "ನಿರಾಶ್ರಿತರ ಶಿಬಿರಗಳಲ್ಲಿ ನೀರಿನ, ವ್ಯವಸ್ಥೆಯ ಬಗ್ಗೆ ಗಮನ ಕೊಡಬೇಕು," ಎಂದಾತ ಅಧಿಕಾರಿಗಳಿಗೆ ಹೇಳಿದ.

ಡೆಪ್ಯುಟಿಕಮೀಶನರ್ ಸಾಹೇಬ ಹಿಡಿದದ್ದು ನಗರದ ನಾಡಿಯಲ್ಲ, ಇಡೀ ಜಿಲ್ಲೆಯ ನಾಡಿಯನ್ನು.

"ಶವಗಳ ವಿಲೇವಾರಿಯನ್ನು ಪೌರಸಮಿತಿಯವರು ಕೈಗೊಂಡರೆ ಒಳ್ಳೆಯದು ಅನ್ನಿಸುತ್ತೆ ನನಗೆ." ಇದಕ್ಕೆ ಆರೋಗ್ಯಾಧಿಕಾರಿಯ ಪೂರ್ಣ ಸಮ್ಮತಿಯಿತ್ತು. ಹತ್ತು ನಿಮಿಷಗಳೊಳಗೆ ಅವನು ನೆರವು ಸಮಿತಿಯ ಕಾರ್ಯಾಲಯದಲ್ಲಿ ಊರಿನ ಗಣ್ಯರಿಗೆ ಸರಕಾರದ ನೆರವು ಯೋಜನೆಯ ವಿವರಗಳನ್ನು ಕೊಡುತ್ತಿದ್ದ: "ಸೈನಿಕರ ಕಾವಲು ಮತ್ತು ಪೊಲೀಸಿನವರ ಗಸ್ತು ಮುಂದುವರಿಯುತ್ತವೆ. ನಗರದಿಂದ ಶವಗಳನ್ನು ಸಾಗಿಸುವ ಕೆಲಸ ಮುಗಿದಿದೆ. ಅಂಚೆ-ಕಚೇರಿಗಳು ಇಂದು ಮಧ್ಯಾಹ್ನದಿಂದ ತೆರೆಯುತ್ತವೆ." ಅವನು ಕುಳಿತುಕೊಳ್ಳುವಷ್ಟರಲ್ಲಿಯೇ ಲಾಲ ಲಕ್ಷ್ಮೀನಾರಾಯಣ ಹೇಳಿದ, "ಈ ಊರಿನ ನಾಗರಿಕರು ಹಾಗೂ ಸಾರ್ವಜನಿಕ ಸಂಸ್ಥೆಗಳೂ ಸರ್ಕಾರದೊಡನೆ ಸಹಕರಿಸುವರೆಂಬ ಭರವಸೆಯನ್ನು ಡೆಪ್ಯುಟಿಕಮೀಶನರ್ ಸಾಹೇಬರಿಗೆ ನೀಡಬಯಸುತ್ತೇನೆ." ಇಷ್ಟರಲ್ಲಿ ರಿಚರ್ಡ್ ಎದ್ದು ಸಮಿತಿಯ ಸದಸ್ಯರ ಅಪ್ಪಣೆ ಪಡೆದು ಹೊರಗೆ ನಡೆದ. ಸಭೆ ಹದಿನೈದು ನಿಮಿಷಗಳಲ್ಲಿ ಮುಗಿದಿತ್ತು.

ರಿಚರ್ಡ್ ನಗರ ವೀಕ್ಷಣೆಯಲ್ಲಿ ತೊಡಗಿದ್ದಾಗ ಮನೆಯಲ್ಲಿ ಲೀಸಾ ಬೇಸರದಿಂದ ಕಂಗೆಟ್ಟಿದ್ದಳು. ರಿಚರ್ಡ್ ಮನೆಗೆ ಬಂದಾಗ ಲೀಸಾ ಮತ್ತೇರಿ ಸೋಫಾದ ಮೇಲೆಯೇ ಒರಗಿ ನಿದ್ರಿಸುತ್ತಿದ್ದಳು. ಅವಳ ತಲೆ ಸೋಫಾದ ಒಂದು ಮೂಲೆಯಿಂದ ಜೋತಾಡುತ್ತಿತ್ತು. "ಈ ದೇಶಕ್ಕೂ ಈ ಜೀವನಕ್ಕೂ ಧಿಕ್ಕಾರ!" ಸೋಫಾ ಮುಂದೆ ನಿಂತು ರಿಚರ್ಡ ಬಡಬಡಿಸಿದ.

ಮಂಚದ ಹತ್ತಿರವಿದ್ದ ಆರಾಮ ಕುರ್ಚಿಯ ಮೇಲೆ ಲೀಸಾಳನ್ನು ಕೂಡಿಸಿದ. "ಊಟ ಮಾಡುತ್ತೀಯಾ ಲೀಸಾ?"

"ಊಟವೇ? ಎಂಥ ಊಟ? ನೀನು ಯಾವಾಗ ಬಂದೆ?"

ಅವಳ ಭುಜದ ಮೇಲೆ ಕೈಯಿಟ್ಟು ಹೇಳಿದ, "ನನಗೆ ಈಗ ಕೆಲಸ ಹೆಚ್ಚು. ಗ್ರಾಮಾಂತರ ಪ್ರದೇಶದಲ್ಲಿ ನೂರಮೂರು ಹಳ್ಳಿಗಳು ಬೆಂಕಿಯ ಪಾಲಾಗಿವೆ."

"ಏನಂದೆ? ನೂರಮೂರು ಹಳ್ಳಿಗಳು ಸುಟ್ಟು ಹೋದುವೇ? ನನಗೆ ಗೊತ್ತಾಗಲೇ ಇಲ್ಲವಲ್ಲ?"

"ಮಲಗು ಲೀಸಾ."

"ಇಷ್ಟು ಹಳ್ಳಿಗಳು ಸುಟ್ಟು ಹೋದುವಲ್ಲ, ರಿಚರ್ಡ್, ನಿನಗೆ ಇನ್ನೂ ಕೆಲಸವಿದೆಯೇ?" ರಿಚರ್ಡ್ ಬೆಚ್ಚಿಬಿದ್ದ. ಈ ಲೀಸಾ ಪರಿಹಾಸ್ಯ ಮಾಡುತ್ತಿರುವಳೇ? ಆದರೂ ಲೀಸಾ ಸುಮ್ಮನಿದ್ದಳು. "ನಾನು ಇನ್ನು ಹೊರಡಬೇಕು ಲೀಸಾ, ನನಗೆ ಬಹಳ ಕೆಲಸವಿದೆ," ಎನ್ನುತ್ತಾ ಅವನು ಎದ್ದುನಿಂತ. ಲೀಸಾ ಬಹಳ ಹೊತ್ತಿನವರೆಗೂ ತೆರೆದ ಬಾಗಿಲನ್ನು ನೋಡುತ್ತಾ ಇದ್ದಳು. ಒಮ್ಮೆ

ಅವಳ ಮೈ ಜುಮ್ಮೆಂದಿತು. ಕೋಣೆಯೆಲ್ಲ ಮತ್ತೆ ಹಾಳು ಸುರಿಯುತ್ತಿತ್ತು.

## ಅಧ್ಯಾಯ-೧೭

"ನಮಗೆ ಅಂಕಿಗಳು ಬೇಕಪ್ಪ, ಅಂಕಿಅಂಶಗಳು. ನೀವು ಕತೆ ಹೇಳಬೇಡಿ. ಎಷ್ಟು ಜನ ಸತ್ತರು, ಗಾಯಗೊಂಡವರು ಎಷ್ಟುಮಂದಿ, ಆಸ್ತಿಪಾಸ್ತಿ ಎಷ್ಟು ನಷ್ಟವಾಯ್ತು? ತೆರೆದ ರಿಜಿಸ್ಟರುಗಳ ಮುಂದೆ ಕುಳಿತ ನೆರವು ಸಮಿತಿಯ ಕಾರಕೂನ ಹೇಳುತ್ತಿರುವಾಗ ಶರಣಾರ್ಥಿಗಳಿಗೆ ಏನೂ ಅರ್ಥ ವಾಗುತ್ತಿರಲಿಲ್ಲ. ನನಗೆ ಬೇಕಾದುದು ಅಂಕಿ ಅಂಶ ಮಾತ್ರ ಎಂದರೂ ಕರ್ತರ್‌ಸಿಂಹನು ಕೈಕಟ್ಟಿಕೊಂಡು ಕಂತೆಯನ್ನೇ ಬಿಚ್ಚುತ್ತಲೇ ಇದ್ದಾನೆ. ಮಾಹಿತಿ ಪಡೆ ಯುತ್ತಿದ್ದ ಗುಮಾಸ್ತೆ ತಲೆ ತಗ್ಗಿಸಿಕೊಂಡು ಪ್ರಶ್ನೆ ಕೇಳಿ ಉತ್ತರಗಳನ್ನು ಬರೆದುಕೊಳ್ಳುತ್ತಿದ್ದ.

"ಹೆಸರು?"

"ಹರನಾಮ್ ಸಿಂಹ"

"ಗ್ರಾಮ?"

"ಢೋಕ್ ಇಲಾಹಿ ಬಕ್ಷ್."

"ಪ್ರಾಣಹಾನಿ ಎಷ್ಟು?"

"ಮಗ ಇಕ್ಬಾಲ್ ಸಿಂಹನು ಮೀರ್‌ಪುರದಲ್ಲಿದ್ದ. ಅವನ ಬಗ್ಗೆ ಏನೂ ತಿಳಿದಿಲ್ಲ. ಮಗಳು ಜಸ್‌ಬೀರ್ ಸೈಯ್ಯದ್‌ಪುರದಲ್ಲಿದ್ದಳು. ಅವಳು ಬಾವಿಯಲ್ಲಿ ಹಾರಿ ಸತ್ತಳು."

ಸ್ವಲ್ಪ ಹೊತ್ತಿನ ಮೇಲೆ ಗುಮಾಸ್ತೆ ಕೆಳಗಿಳಿದು ಬಂದ. ಒಂದೇ ಸಮನೆ ಕುಳಿತಿರುವುದು ಅವನಿಗೆ ಕಷ್ಟವಾಗುತ್ತಿತ್ತು. ಸಂಜೆಯ ವೇಳೆಗೆ ಅಂಕಿಅಂಶಗಳ ಮೂರು ಪ್ರತಿಗಳನ್ನು ತಯಾರಿಸಬೇಕಾಗುತ್ತಿತ್ತು. ಸತ್ತವರ ಸಂಖ್ಯೆಯನ್ನು ನೋಡಿದರೆ ಹಿಂದೂ ಮುಸಲ್ಮಾನರಲ್ಲಿ ಹೆಚ್ಚು ವ್ಯತ್ಯಾಸವಿರಲಿಲ್ಲ.

ನೆರವು ಸಮಿತಿಯ ಕಾರ್ಯಾಲಯದ ಅಂಗಳ ದಲ್ಲಿ ಓಡಾಡುತ್ತಿದ್ದ ಪ್ರತಿಯೊಬ್ಬವ್ಯಕ್ತಿಯೂ ತನ್ನದೇ ಆದ ಅನುಭವವನ್ನು ಹೊತ್ತು ತಂದಿದ್ದ. ಶೂನ್ಯದತ್ತ ನೋಟ. ಇಲ್ಲವೆ ತಲೆ ಆಡಿಸಿ ಆಡಿಸಿ ಎಲ್ಲರ ಮಾತನ್ನು ಕೇಳುವುದನ್ನು ಬಿಟ್ಟರೆ ಯಾರಿಗೂ ಏನೂ ಹೊಳೆಯುತ್ತಿರಲಿಲ್ಲ. ತಾನು ಏನು ಮಾಡ ಬೇಕು, ಎಲ್ಲಿಗೆ ಹೋಗಬೇಕು ಎನ್ನುವುದು ಯಾರಿಗೂ ತಿಳಿದಿರಲಿಲ್ಲ. ಸೂತ್ರದ ಬೊಂಬೆಗ ಳಂತೆ ಚಲಿಸುವವರೇ ಎಲ್ಲರೂ.

## ಅಧ್ಯಾಯ-೧೮

ಶಾಂತಿ ಸಮಿತಿಯ ಸಭೆಯಲ್ಲಿ ಪಾಲ್ಗೊಳ್ಳಲು ಸದಸ್ಯರು ಮಿಶನ್ ಕಾಲೇಜಿನ ಸಭಾಂಗಣದಲ್ಲಿ ಬಂದು ನೆರೆಯುತ್ತಿದ್ದರು. ಊರಿನ ಎಲ್ಲ ಪಂಗಡ ಗಳ ಪ್ರತಿನಿಧಿಗಳೂ ಸಭೆಯಲ್ಲಿ ಭಾಗವಹಿಸುವವ ರಿದ್ದರು. ದಂಗೆಯಾದ ಮೇಲೆ ನಗರದಲ್ಲಿ ಒಂದು ಹೊಸ ಧೋರಣೆ ಕಂಡುಬರುತ್ತಿತ್ತು. ಮುಸಲ್ಮಾ ನರು ಹೆಚ್ಚಾಗಿದ್ದ ಸ್ಥಳಗಳಿಂದ ಹಿಂದುಗಳೂ ಸಿಖ್ಖರೂ, ಸಿಖ್ಖರೂ ಹಿಂದುಗಳೂ ಜಾಸ್ತಿಯಾಗಿ ವಾಸವಾಗಿದ್ದ ಕಡೆಗಳಿಂದ ಮುಸಲ್ಮಾನರೂ ಮನೆ ಮಠಗಳನ್ನು ಮಾರಿ ಬೇರೆಡೆಗೆ ಹೋಗುತ್ತಿದ್ದರು.

ಲೀಗಿನ ಸದಸ್ಯ ಎದ್ದು ನಿಂತು, "ಪಾಕಿಸ್ತಾನ ವನ್ನು ಪಡೆದೇ ಪಡೆಯುತ್ತೇವೆ," ಎಂದು ಹೇಳಿದ. "ಜಿಂದಾಬಾದ್" ಎಂದು ಅಲ್ಲಲ್ಲಿ ಹತ್ತು ಕಡೆಯಿಂದ ಕೂಗು. ಲೂಕಾಸ್ ಸಾಹೇಬರು ಮಾತಾಡಲು ಪ್ರಾರಂಭಿಸಿದರು. "ಈಗ ನಾವೆಲ್ಲರೂ ಸೇರಿ ನಗರದ ಪರಿಸ್ಥಿತಿಯನ್ನು ಸುಧಾರಿಸಲು ಯತ್ನಿಸು ವುದು ಒಳ್ಳೆಯದು ಎಂದು ನನಗನ್ನಿಸುತ್ತದೆ. ಈಗ ಒಂದು ಶಾಂತಿ ಸಮಿತಿಯನ್ನು ಸ್ಥಾಪಿಸಬೇಕು. ಅದು ಗಲ್ಲಿಗಲ್ಲಿಗೂ ಹೋಗಿ ಶಾಂತಿಯ ಪ್ರಚಾರ ಮಾಡ ಬೇಕು. ಅದರಲ್ಲಿ ಎಲ್ಲಾ ರಾಜಕೀಯ ಪಂಗಡಗಳ ಪ್ರತಿನಿಧಿಗಳೂ ಇರಬೇಕು."

ಈಗ ಮಾಸ್ಟರ್ ರಾಮದಾಸ್ ಹೇಳಿದ, "ಪ್ರಧಾನ ಕಾರ್ಯದರ್ಶಿಯ ಸ್ಥಾನಕ್ಕೆ ನಾನು ದೇವದತ್ತರ ಹೆಸರನ್ನು ಸೂಚಿಸುತ್ತೇನೆ. ಶಾಂತಿ ಸಮಿತಿಯು ಬಹಳ ವಿವೇಕದಿಂದ ಹೆಜ್ಜೆ ಇಡಬೇ

ಕಾಗುತ್ತದೆ. ಈ ಕೆಲಸಕ್ಕೆ ಹೇಳಿಮಾಡಿಸಿದ ವ್ಯಕ್ತಿ ಎಂದರೆ ಕಾಮ್ರೇಡ್ ದೇವದತ್ ಒಬ್ಬರೇ."

"ಊರಿನಲ್ಲಿ ಯುವಕರೆಲ್ಲ ಸತ್ತು ಹೋಗಿದ್ದಾರೆಯೇ?" ಮನೋಹರಲಾಲನ ಧ್ವನಿ. ಅವನು ಸಭೆಯಿಂದ ಹೊರಡಲನುವಾದ. ಅಷ್ಟರಲ್ಲಿ ಬಹಳ ಜನ ಮುಸಲ್ಮಾನರು ಎದ್ದು ಬಾಗಿಲ ಕಡೆ ಹೊರಟರು, ಈ ಸಮಿತಿಯಲ್ಲಿ ಹಿಂದೂಗಳ ಆಧಿಕ್ಯ ಇದೆ. ಇದು ಹಿಂದೂಗಳ ಕಿತಾಪತಿ ಎಂದು. ದೇವದತ್ತನೂ ಸೇರಿದಂತೆ ಹತ್ತಾರು ಮಂದಿ ಅವರನ್ನು ತಡೆಯಲು ಹೊರಟರು.

ನಿರ್ಣಯವನ್ನು ಕೈಗೊಳ್ಳುವ ಮೊದಲೇ ಹೊರಗಡೆ ಹಾರನ್ ಸದ್ದಾಯಿತು. ದೇವದತ್ತ ಹೇಳಿದ, "ಸಜ್ಜನರೇ, ಶಾಂತಿ ಸಮಿತಿಯ ಬಸ್ಸು ಬಂದಿದೆ," ಜನ ಎದ್ದುನಿಂತು ಹೊರಗೆ ಬರಲಾರಂಭಿಸಿದರು. ಬಸ್ಸು ಬಿಳಿಯ ಮತ್ತು ಗುಲಾಬಿಪಟ್ಟಿಗಳುಳ್ಳದ್ದಾಗಿತ್ತು. ಮುಂಭಾಗದಲ್ಲಿ ಒಂದು ಕಡೆ ಮುಸ್ಲಿಂ ಲೀಗಿನ ಬಾವುಟ ಮತ್ತೊಂದು ಕಡೆ ಕಾಂಗ್ರೆಸ್ಸಿನ ಬಾವುಟಗಳನ್ನು ಕಟ್ಟಲಾಗಿತ್ತು.

"ಹಿಂದೂ ಮುಸ್ಲಿಂ ಒಟ್ಟಾಗಿ. ಶಾಂತಿ ಸಮಿತಿಗೆ ಜಯವಾಗಲಿ."ಜನರು ಬಸ್ಸಿನೊಳಗೆ ಇಣುಕಿ ನೋಡಲಾರಂಭಿಸಿದರು. ಬಸ್ಸಿನಲ್ಲೇ ಕುಳಿತು ಈಗ ಘೋಷಣೆ ಕೂಗುತ್ತಿರುವ ವ್ಯಕ್ತಿ ಯಾರಿರಬಹುದೆಂದು ಎಲ್ಲರಿಗೂ ಕುತೂಹಲ. ನತ್ಥೂ ಈಗ ಸತ್ತು ಹೋಗಿದ್ದ. ಅವನು ಒಂದು ವೇಳೆ ಬದುಕಿದ್ದಿದ್ದರೆ ಈ ಅಸಾಮಿಯನ್ನು ಸುಲಭವಾಗಿ ಗುರುತು ಹಿಡಿಯುತ್ತಿದ್ದ. ಅವನು ಇನ್ನಾರೂ ಆಗಿರದೆ ಮುರಾದ್ ಅಲಿ ಆಗಿದ್ದ. ಶಾಂತಿಯಾತ್ರೆಗೆ ಹೊರಡುವುದಕ್ಕೆ ಮೊದಲು ಒಂದು ಸಣ್ಣ ಚರ್ಚೆ ನಡೆಯಿತು. ಯಾವ ಯಾವ ಸೀಟಿನಲ್ಲಿ ಯಾರು ಕೂಡಬೇಕು. ಮುಂದೆಯಾರು ಹಿಂದೆಯಾರು?

ಹಿಂದುಮುಂದು ಬೇಡ ಎಂದು ಕಾಂಗ್ರೆಸ್ ಮತ್ತು ಮುಸ್ಲಿಂ ಲೀಗಿನ ನಾಯಕರು ಚಾಲಕನ ಹಿಂಭಾಗದ ಸೀಟಿನಲ್ಲಿ ಜೊತೆಯಾಗಿ ಕುಳಿತರು. ಮುಸ್ಲಿಂ ಲೀಗಿನ ಮುಖ್ಯಸ್ಥನೊಡನೆ ಕುಳಿತಿದ್ದ ಬಕ್ಷಿಯವರು ಬಹಳ ಚಿಂತಾಕ್ರಾಂತರಾಗಿದ್ದರು. 'ಹದ್ದು ಹಾರಾಡುವವು. ಇನ್ನೂ ಹೆಚ್ಚಾಗಿ ರಣಹದ್ದುಗಳು ಹಾರಾಡುವವು' ಎಂದೆನ್ನುತ್ತಿತ್ತು ಅವರ ಮನಸ್ಸು.

ಬಂಗಲೆಯಲ್ಲಿ ಊಟದ ಕೊಠಡಿಯ ಮಂದ ಪ್ರಕಾಶದಲ್ಲಿ ರಿಚರ್ಡ್ ಮತ್ತು ಲೀಸಾ ಮುಂದಿನ ಕಾರ್ಯಕ್ರಮವನ್ನು ಯೋಚಿಸುತ್ತಿದ್ದರು. ಲೀಸಾ ಈಗ ಬಹಳ ಸುಧಾರಿಸಿದ್ದಳು. ರಿಚರ್ಡ್‌ಗೆ ಇಂದು ವಿರಾಮವಿತ್ತು.

"ಇಲ್ಲೇ ಇನ್ನೂ ಕೆಲವು ದಿನ ಇರಬೇಕೆಂದು ನನಗೆ ಮನಸ್ಸಿತ್ತು. ತಕ್ಷಶಿಲೆಯ ಪ್ರಾಚ್ಯ ವಸ್ತು ಸಂಗ್ರಹಾಲಯದಲ್ಲಿ ಸ್ವಲ್ಪ ಕೆಲಸಮಾಡುವ ಬಯಕೆಯೂ ಇತ್ತು. ಆದರೆ ಇಲ್ಲಿ ಇನ್ನು ಹೆಚ್ಚು ದಿನಗಳು ಇರುವುದು ಸಾಧ್ಯವಿಲ್ಲ ವೆನ್ನಿಸುತ್ತದೆ."

ಇದನ್ನು ಕೇಳಿ ಲೀಸಾಗೆ ಬಹಳ ಸಂತೋಷವಾಯಿತು. "ಹಾಗಾದರೆ ನಿನಗೆ ವರ್ಗವಾಗುವುದೇ? ಅಂದರೆ ನಿನಗೆ ಬಡ್ತಿಯೂ ಸಿಗುತ್ತೆ ಅಂತ ಅರ್ಥವಲ್ಲವೇ? ಅಂದಹಾಗೆ ನೀನು ಬರೆಯಬೇಕೆಂದಿದ್ದ ಪುಸ್ತಕದ ವಿಷಯ ಏನಾಯಿತು?"

ರಿಚರ್ಡ್ ಭುಜ ಕುಣಿಸಿ ಪೈಪನ್ನು ಹೊತ್ತಿಸಿಕೊಂಡ. ನಗುತ್ತ ಕೇಳಿದ," "ಎಲ್ಲಿಂದ ಆರಂಭ ಮಾಡಲಿ."

"ಯಾವುದನ್ನು ಎಲ್ಲಿಂದ ಆರಂಭಿಸುವೆ?" ಹುಬ್ಬುಗಳನ್ನು ಗಂಟಿಕ್ಕುತ್ತ ಲೀಸಾಕೇಳಿದಳು.

"ಇಲ್ಲಿ ಏನು ನಡೆಯಿತು? ಹೇಗೆ ನಡೆಯಿತು? ಎನ್ನುವುದನ್ನು ತಿಳಿದುಕೊಳ್ಳಬೇಕೆಂದು ಬಯಸಿರಲಿಲ್ಲವೇ ನೀನು?"

ಈಗ ಲೀಸಾ ಭುಜ ಕುಣಿಸಿದಳು. ಅವಳ ಮುಖದ ಮೇಲೆ, 'ನೀನು ಹೇಳಿದರೂ ಒಂದೇ, ಬಿಟ್ಟರೂ ಒಂದೇ; ಅದರಿಂದ ಯಾರಿಗೇನು?' ಎನ್ನುವಭಾವ ಎದ್ದುಕಾಣುತ್ತಿತ್ತು.




# ಹೃದಯಾಘಾತ

— ಡಾ.ಆರ್. ನಾಗೇಶ್

# 'ಹೃದಯಾಘಾತ'

'ಹೃದಯಾಘಾತ'- ಹೃದಯದ ಕರೊನರಿ ರಕ್ತನಾಳಗಳ ಅಸಮರ್ಪಕ ರಕ್ತ ಪೂರೈಕೆಯಿಂದ ಉದ್ಭವಿಸುವ ಒಂದು ಗಂಭೀರ ಹೃದಯರೋಗ. ಹೃದಯ ಶೂಲೆ **(Angina),** ಹೃದಯ ಸ್ತಂಭನಗಳೂ ಕರೊನರಿ ರಕ್ತನಾಳಗಳಲ್ಲಿನ ರಕ್ತ ಪೂರೈಕೆಯಲ್ಲಿನ ಅಡಚಣೆಗಳಿಂದ ಉಂಟಾಗುವ ಹೃದಯ ರೋಗಗಳು. ಒಟ್ಟಾರೆ ಈ ರೋಗಗಳಿಗೆ 'ಕರೊನರಿ ಹೃದಯ ರೋಗಗಳು' ಎನ್ನುತ್ತೇವೆ. ಹೃದಯ ಶೂಲೆ ಅಪಾಯಕಾರಿಯಲ್ಲದಿದ್ದರೂ, ಹೃದಯಾಘಾತ ಮತ್ತು ಹೃದಯ ಸ್ತಂಭನಗಳು ತುರ್ತು ಚಿಕಿತ್ಸೆ ಅಗತ್ಯವಿರುವ ಪ್ರಾಣಾಂತಿಕ ಸಮಸ್ಯೆಗಳು.

ವಿಶ್ವಾದ್ಯಂತ ಕಂಡುಬರುವ ಹೃದಯಾಘಾತ ಮುಂದುವರಿದ ರಾಷ್ಟ್ರಗಳಲ್ಲಿ ಹೆಚ್ಚು. ನಗರ ಪ್ರದೇಶದ ಜನಗಳಲ್ಲಿ ಹೆಚ್ಚು ಸಾವು ನೋವುಗಳನ್ನುಂಟುಮಾಡುವ ಇದು ಬದುಕುಳಿದವರನ್ನು ದುರ್ಬಲಗೊಳಿಸಿ ಉಳಿದ ಜೀವನಾವಧಿಯನ್ನು ಕಟ್ಟುಪಾಡುಗಳಿಗೆ ಒಳಪಡಿಸುತ್ತದೆ. ಸಮಾಜದ ಮೇಲ್ವರ್ಗದ ಜನಸಮೂಹದಲ್ಲಿ ಹೆಚ್ಚಾಗಿ ಕಂಡುಬರುವ ಹೃದಯಾಘಾತಕ್ಕೆ ಬಲಿಯಾಗುವವರು ಪ್ರಮುಖವಾಗಿ ಪುರುಷರು. ೪೦ ರಿಂದ ೬೦ ವರ್ಷಗಳ ವಯೋಮಿತಿಯಲ್ಲಿ ಇದರ ಸಂಭವ ಹೆಚ್ಚು, ಸ್ತ್ರೀವರ್ಗದಲ್ಲಿ ಋತುಬಂಧದ ನಂತರ ಇದರ ಹಾವಳಿ ಹೆಚ್ಚು. ಈಗೀಗ ೩೦ ರ ಸುತ್ತಮುತ್ತಲಿನ ವಯೋವರ್ಗದಲ್ಲೂ ಹೃದಯಾಘಾತ ಸಾಮಾನ್ಯವಾಗುತ್ತಿದೆ.

ಭಾರತದಲ್ಲಿ ಹೃದಯಾಘಾತದಿಂದ ಮರಣಹೊಂದುತ್ತಿರುವವರ ಸಂಖ್ಯೆಗೇನೂ ಕಡಿಮೆಯಿಲ್ಲ, ಅನಿರೀಕ್ಷಿತವಾಗಿ ಹಠಾತ್ತನೆ ಹೃದಯಾಘಾತ ಸಂಭವಿಸುವುದರಿಂದ, ವೈದ್ಯಕೀಯ ನೆರವಿಗಾಗಿ ಧಾವಿಸುವಷ್ಟರಲ್ಲಿ ಸಾವು ಉಂಟಾಗಿರುತ್ತದೆ. ಆಧುನಿಕ ಜಗತ್ತಿನ ಆತಂಕದ ಜೀವನ, ಬದಲಾಗುತ್ತಿರುವ ಆಹಾರಾಭ್ಯಾಸಗಳು, ಹೆಚ್ಚುತ್ತಿರುವ ದುಶ್ಚಟಗಳು, ರಕ್ತದೊತ್ತಡ ಹಾಗೂ ಮಧುಮೇಹದಂತಹ ದೀರ್ಘಕಾಲದ ವ್ಯಾಧಿಗಳು ಹೃದಯಾಘಾತಕ್ಕೆ ಪ್ರಮುಖ ಕಾರಣಗಳಾಗುತ್ತಿವೆ. ದಿನೆ ದಿನೆ ಹೆಚ್ಚುತ್ತಿರುವ ಈ ಕಾಯಿಲೆ ಒಂದು ಆರೋಗ್ಯ ಸಮಸ್ಯೆಯಾದರೆ ಆಶ್ಚರ್ಯವಿಲ್ಲ. ಇದನ್ನು ತಡೆಗಟ್ಟಲು ಮತ್ತು ಸಂಭವಗಳನ್ನು ಕಡಿಮೆ ಮಾಡಲು ಸಮುದಾಯದಲ್ಲಿ ಅರಿವು ಮಾಡಬೇಕಾಗಿರುವುದು ಅಗತ್ಯ.

## ಹೃದಯ: ಜೀವದ ನೆಲೆ

ಹೃದಯ ಮಾನವನ ಅತ್ಯವಶ್ಯಕ ಅಂಗ. ಎದೆಯ ಮೂಳೆಗಳ ಹಂದರದೊಳಗಡಗಿರುವ ಹೃದಯ ಶರೀರದಲ್ಲಿ ಬೇರೆಲ್ಲೂ ಕಾಣದ ವಿಶೇಷ ರೀತಿಯ ಅನೈಚ್ಛಿಕ

ಮಾಂಸದೆಳೆಗಳಿಂದ ರಚನೆಗೊಂಡಿದೆ. 'ಮೂರ್ತಿ ಚಿಕ್ಕದಾದರೂ ಕೀರ್ತಿ ದೊಡ್ಡದು', ಎಂಬಂತೆ ಗಾತ್ರದಲ್ಲಿ ಎಡಗೈ ಮುಷ್ಟಿಯಷ್ಟಿರುವ ಹೃದಯ ಚೈತನ್ಯದ ಆಗರ. ನಾಲ್ಕು ಚಿಕ್ಕ ಚಿಕ್ಕ ಕೋಣೆಗಳನ್ನು ಹೊಂದಿರುವ ಇದು ಒಂದು ಸ್ವಯಂಚಾಲಿತ ಯಂತ್ರವಿದ್ದಂತೆ. ದೇಹದ ಕಣ ಕಣಗಳಿಗೆ ಸದಾ ರಕ್ತ ಪೂರೈಕೆ ಮಾಡುವ ಹೊಣೆ ಹೊತ್ತಿರುವ ಒಂದು ಮುಖ್ಯ ಅಂಗ. ದಿನದ ೨೪ ಗಂಟೆಗಳೂ ನಿರಂತರವಾಗಿ ಮಿಡಿಯುವ ಹೃದಯ ಒಂದು ಜೀವಂತ ಶಕ್ತಿಶಾಲಿ ಪಂಪ್ ಇದ್ದಂತೆ. ಗರ್ಭದೊಳಗೆ ಜೀವವೊಂದು ಮೊಳೆಯುತ್ತಿರುವಾಗಲೇ ತನ್ನ ಕೆಲಸವನ್ನಾರಂಭಿಸಿಕೊಳ್ಳುವ ಹೃದಯ ಹುಟ್ಟಿನಿಂದ ಸಾವಿನವರೆಗೆ ಅವಿರತವಾಗಿ ದುಡಿದು ತನ್ನ ಜವಾಬ್ದಾರಿಯಿಂದ ಮುಕ್ತಿಹೊಂದುವುದು ಮರಣದ ಅಂಚಿನಲ್ಲಿ- ದೇಹ ತನ್ನ ಕೊನೆ ಉಸಿರೆಳೆದಾಗ. ದೇಹದ ಉದ್ದಗಲಕ್ಕೂ ಸದಾ ಅಮೃತಸಮಾನವಾದ ರಕ್ತದ ಧಾರೆಯನ್ನೆರೆಯುವುದು ಜೀವದ ನೆಲೆಯಾದ ಹೃದಯ.

**ರಕ್ತ ಪರಿಚಲನೆ:**

ಸ್ನಾಯುಗಳಿಂದ ರಚಿತವಾಗಿರುವ ಹೃದಯ ನಾಲ್ಕು ಕೋಣೆಗಳನ್ನು ಹೊಂದಿದೆ. ಮೇಲಿನ ಎರಡು ಕೋಣೆಗಳಿಗೆ ಹೃತ್ಕುಕ್ಷಿಗಳೆಂದು ಕರೆಯುತ್ತೇವೆ. ಹೃತ್ಕರ್ಣದಿಂದ ಹೃತ್ಕುಕ್ಷಿಗೆ ಹರಿಯುವ ರಕ್ತ ಏಕಮುಖವಾಗಿ ಸಂಚರಿಸಲು ನಡುವೆ ಕವಾಟಗಳ ವ್ಯವಸ್ಥೆಯಿದೆ. ಹೃದಯಕ್ಕೆ ರಕ್ತವನ್ನು ತರುವ ರಕ್ತನಾಳಗಳಿಗೆ ಅಭಿಧಮನಿಗಳೆಂದೂ, ಹೃದಯದಿಂದ ರಕ್ತವನ್ನು ಹೊರಕ್ಕೆ ಕೊಂಡೊಯ್ಯುವ ರಕ್ತನಾಳಗಳಿಗೆ ಅಪಧಮನಿ ಗಳೆಂದೂ ಕರೆಯಲಾಗುತ್ತದೆ. ಹೃದಯದ ಲಯಬದ್ಧ ಮಿಡಿತಗಳನ್ನುಂಟು ಮಾಡಲು ಬಲಹೃತ್ಕರ್ಣದ ಗೋಡೆಯೊಳಗೆ ವಿಶೇಷ ನರಗಳಿಂದ ಮಾಡಲ್ಪಟ್ಟ 'ಸೈನೋಏಟ್ರಿ ಯಲ್ ನೋಡ್'ಎಂಬುದಿದೆ. ಇದರಿಂದ ಉತ್ಪತ್ತಿಯಾಗುವ ವಿದ್ಯುತ್ ತರಂಗಗಳು ನರತಂತುಗಳ ಜಾಲದ ವ್ಯವಸ್ಥೆಯ ಮೂಲಕ ಪ್ರವಹಿಸಿ, ಹೃತ್ಕುಕ್ಷಿಗಳ ಸ್ನಾಯುಗ ಳೊಳಗೆ ವ್ಯಾಪಿಸಿ ಹೃದಯಸ್ಪಂದನವನ್ನು ನಿಯಂತ್ರಿಸುತ್ತವೆ.

ದೇಹದ ಎಲ್ಲಾ ಅಂಗಗಳಿಂದ ಸಂಗ್ರಹಿಸಲ್ಪಟ್ಟ ಮಲಿನ (ಆಮ್ಲಜನಕ ರಹಿತ), ರಕ್ತವನ್ನು ಉಚ್ಚ ಮತ್ತು ನೀಚ ಅಭಿಧಮನಿಗಳು ಬಲಹೃತ್ಕರ್ಣಕ್ಕೆ ಸುರಿಯುತ್ತದೆ. ಬಲಹೃತ್ಕರ್ಣ ಸಂಕುಚಿಸಿ ರಕ್ತವನ್ನು ಬಲಹೃತ್ಕುಕ್ಷಿಗೆ ಸುರಿಯುತ್ತವೆ. ಇಲ್ಲಿಂದ ಮಲಿನ ರಕ್ತವು ಪಲ್ಮನರಿ ಅಪಧಮನಿಯ ಮುಖಾಂತರ ಶ್ವಾಸಕೋಶಗಳನ್ನು ತಲುಪುತ್ತದೆ. ಶ್ವಾಸಕೋಶಗಳಲ್ಲಿ ಮಲಿನ ರಕ್ತವು ತನ್ನಲ್ಲಿನ ಇಂಗಾಲದ ಡೈ ಆಕ್ಸೈಡ್‌ನ್ನು ಬಿಡುಗಡೆ ಮಾಡಿ ಗಾಳಿಯಲ್ಲಿನ ಆಮ್ಲಜನಕವನ್ನು ಹೀರಿಕೊಂಡು ಶುದ್ಧರಕ್ತವಾಗುತ್ತದೆ. ಇದು ಪಲ್ಮನರಿ ಅಭಿಧಮನಿಗಳ ಮುಖಾಂತರ ಮರಳಿ ಹೃದಯದ ಎಡ ಹೃತ್ಕರ್ಣವನ್ನು ಸೇರುತ್ತದೆ. ಎಡ ಹೃತ್ಕರ್ಣ ಸಂಕುಚಿಸಿ ಎಡ ಹೃತ್ಕುಕ್ಷಿಗೆ ರಕ್ತವನ್ನು ಸುರಿಯುತ್ತದೆ. ಇಲ್ಲಿಂದ ಪ್ರಾರಂಭವಾಗುವ ದೇಹದ ಅತಿದೊಡ್ಡ ಅಪಧಮನಿ 'ಅಯೋರ್ಟಾ'ಎಡ ಹೃತ್ಕುಕ್ಷಿಯಲ್ಲಿನ ರಕ್ತವನ್ನು ಹೃದಯದಿಂದ ಹೊರಗೊಯ್ದು ಶರೀರದ ಎಲ್ಲಾ




ಹೃದಯದ ಅಡ್ಡಸೀಳಿದ ಚಿತ್ರ

ಭಾಗಗಳಿಗೆ ಹಂಚುತ್ತದೆ. ಶುದ್ಧ ರಕ್ತವು ಶರೀರದ ಅಂಗಾಂಶಗಳ ಜೈವಿಕ ಚಟುವಟಿಕೆಗಳಿಗೆ ಉಪಯೋಗಿಸಲ್ಪಟ್ಟು ಅಲ್ಲಿ ಬಿಡುಗಡೆಯಾದ ಇಂಗಾಲದ ಡೈ ಆಕ್ಸೈಡ್‌ಅನ್ನು ಹೀರಿಕೊಂಡು ಮಲಿನ ರಕ್ತವಾಗಿ ಮತ್ತೆ ಹೃದಯಕ್ಕೆ ಬರುತ್ತದೆ. ಹೃದಯದ ಕೋಣೆಗಳ ಮೂಲಕ ಹಾಯ್ದು ಶ್ವಾಸಕೋಶಗಳನ್ನು ತಲುಪಿ ಶುದ್ಧರಕ್ತ ವಾಗಿ ಮಾರ್ಪಾಟಾಗುತ್ತದೆ. ಇದು ದೇಹದಲ್ಲಿ ನಡೆಯುವ 'ರಕ್ತ ಪರಿಚಲನೆ'. ಮಲಗಿರುವಾಗ, ಎಚ್ಚರವಿರುವಾಗ, ಕುಳಿತಾಗ, ನಿಂತಾಗ, ಸದಾ ಬಿಡುವಿಲ್ಲದಂತೆ ನಡೆಯುವ ಈ ಅನೈಚ್ಛಿಕ ಕ್ರಿಯೆ ಪುನರಾವರ್ತನೆಗೊಳ್ಳುತ್ತಲೇ ಇರುತ್ತದೆ.

## ಕರೊನರಿ ಅಪಧಮನಿಗಳು: ಜೀವದ ಝರಿಗಳು

ದೇಹದ ಪ್ರತಿಯೊಂದು ಜೀವಕೋಶಗಳ ಚಟುವಟಿಕೆಗಳಿಗೆ ರಕ್ತದ ಪೂರೈಕೆ ಅತ್ಯಗತ್ಯ. ಒಂದು ಕ್ಷಣ ರಕ್ತ ಪೂರೈಕೆ ನಿಂತರೂ ಜೀವಕೋಶಗಳ ಅವನತಿ ಆರಂಭವಾಗುತ್ತದೆ. ರಕ್ತದಲ್ಲಿನ ಆಮ್ಲಜನಕವೇ ಜೀವಕೋಶಗಳ ಆಹಾರ. ಆಮ್ಲಜ ನಕ ಅಂಗಾಂಶಗಳ ಜೈವಿಕ ಕ್ರಿಯೆಗಳಿಗೆ ಅತ್ಯಗತ್ಯ. ಜೊತೆಗೆ ನಾವು ತಿಂದ ಆಹಾರದಲ್ಲಿನ ಪೌಷ್ಟಿಕಾಂಶಗಳೂ ಕರುಳಿನಿಂದ ಹೀರಲ್ಪಟ್ಟ ರಕ್ತದ ಮೂಲಕವೇ ಅಂಗಾಂಶಗಳನ್ನು ಸೇರಬೇಕು. ದೇಹದ ಎಲ್ಲಾ ಅಂಗಗಳಿಗೆ ರಕ್ತ ಪೂರೈಕೆ ಮಾಡುವ ಹೃದಯ ತನ್ನ ಸ್ನಾಯುಗಳಿಗೆ ರಕ್ತ ಪೂರೈಸಿಕೊಳ್ಳುವ ಬಗೆಯಾದರೂ ಹೇಗೆ? ಈ ಕಾರ್ಯಕ್ಕಾಗಿಯೇ ಎರಡು ವಿಶೇಷ ಧಮನಿಗಳಿವೆ. ಇವೇ ಹೃದಯದ ಸ್ನಾಯುಗಳಿಗೆ ರಕ್ತ ಪೂರೈಕೆ ಮಾಡುವ ಕರೊನರಿ ಅಪಧಮನಿಗಳು. ಅಯೋರ್ಟಾ ಬುಡದಿಂದ

ಹೊರಡುವ ಪ್ರಥಮ ಕವಲುಗಳೇ ಎಡ ಮತ್ತು ಬಲ ಕರೊನರಿ ಅಪಧಮನಿಗಳು. ಎಡ ಹೃತ್ಕುಕ್ಷಿಯ ಸಂಕುಚನದೊಂದಿಗೆ ಅಯೋರ್ಟಾಗೆ ನೂಕಲ್ಪಟ್ಟ ರಕ್ತ ಮೊದಲು ಕರೊನರಿ ಅಪಧಮನಿಗಳ ಮುಖಾಂತರ ಹೃದಯದ ಸ್ನಾಯುಗಳಿಗೆ ಹಂಚಲ್ಪಡುತ್ತದೆ. ಹೃದಯದ ಮೈ ತುಂಬಾ ಹರಡಿಕೊಂಡಿರುವ ಕರೊನರಿ ಅಪಧಮನಿಗಳು ಹೃದಯವನ್ನು ತಣಿಸುವ ಜೀವದ ಝರಿಗಳು. ಎಡ ಕರೊನರಿ ಅಪಧಮನಿ ಪ್ರಮುಖವಾಗಿ ಎಡ ಹೃತ್ಕರ್ಣ, ಎಡ ಹೃತ್ಕುಕ್ಷಿ, ಬಲ ಹೃತ್ಕರ್ಣದ ಮುಂಭಾಗ ಹಾಗೂ ಹೃತ್ಕುಕ್ಷಿಗಳ ನಡುವಿನ ಗೋಡೆಯ ಮುಂಭಾಗಕ್ಕೂ ಮತ್ತು ಬಲ ಕರೊನರಿ ಅಪಧಮನಿ ಬಲ ಹೃತ್ಕರ್ಣ, ಬಲ ಹೃತ್ಕುಕ್ಷಿ ಹಾಗೂ ಹೃತ್ಕುಕ್ಷಿಗಳ ನಡುವಿನ ಗೋಡೆಯ ಹಿಂಭಾಗಕ್ಕೂ ರಕ್ತವನ್ನು ಪೂರೈಸುತ್ತವೆ.

ಹೃದಯಾಘಾತದಲ್ಲಿ ಮುಖ್ಯಪಾತ್ರ ಈ ಕರೊನರಿ ಅಪಧಮನಿಗಳದು. ಕರೊನರಿ ಅಪಧಮನಿಗಳ ರಕ್ತ ಪರಿಚಲನೆಯಲ್ಲಿ ಕೆಲವು ಅನಾನುಕೂಲಗಳಿವೆ. ಅವುಗಳೆಂದರೆ ಹೃದಯದ ಸ್ನಾಯುಗಳೊಳಗೆ ಹುದುಗಿರುವ ಕರೊನರಿ ಅಪಧಮನಿಗಳ ಕವಲುಗಳು ಹೃದಯ ಸಂಕುಚಿಸಿದಾಗ ಹಿಸುಕಲ್ಪಡುತ್ತವೆ. ಇದರಿಂದ ಹೃದಯಕ್ಕೆ ಸರಬರಾಜಾಗುವ ರಕ್ತದ ಪ್ರಮಾಣ ಕಡಿಮೆಯಾಗುತ್ತದೆ. ಹೃದಯದ ಎಡ ಮತ್ತು ಬಲ ಕರೊನರಿ ಅಪಧಮನಿಗಳ ಕವಲುಗಳ ನಡುವಿನ ಅಡ್ಡ ಕೂಡಿಕೆಗಳು **(Anastomosis)** ಸಾಕಷ್ಟು ಇಲ್ಲದಿರುವುದರಿಂದ ಒಂದು ಕವಲಿನಲ್ಲಿ ರಕ್ತ ಸಂಚಾರಕ್ಕೆ ಅಡಚಣೆಯಾದರೆ ಹೃದಯದ ಆ ಭಾಗಕ್ಕೆ ಶಾಶ್ವತವಾಗಿ ರಕ್ತ ಸಂಚಾರ ನಿಲ್ಲುತ್ತದೆ. ಹೃದಯಕ್ಕೆ ಪ್ರಮುಖವಾಗಿ ರಕ್ತ ಪೂರೈಕೆಯಾಗುವುದು ಅದರ ವ್ಯಾಕೋಚನದಲ್ಲಿ. ಹೃದಯ ವ್ಯಾಕೋಚನಗೊಂಡಾಗ ಶರೀರದ ಎಲ್ಲ ಅಪಧಮನಿಗಳಂತೆ ಕರೊನರಿ ಅಪಧಮನಿಗಳಲ್ಲೂ ರಕ್ತದ ಒತ್ತಡ ಕಡಿಮೆಯಾಗುತ್ತದೆ. ಇದರಿಂದ ಆಗ ರಕ್ತ ಸರಬರಾಜು ಕಡಿಮೆಯಾಗಬಹುದು. ಈ ಅಸಮರ್ಪಕ ವ್ಯವಸ್ಥೆಗಳು ಹೃದಯಾಘಾತದಲ್ಲಿ ಹೆಚ್ಚಿನ ಪಾತ್ರವಹಿಸುತ್ತವೆ.

## ಹೃದಯಾಘಾತವಾಗುವುದು ಹೇಗೆ?

ಹೃದಯದ ಕರೊನರಿ ರಕ್ತನಾಳಗಳಲ್ಲಿನ ಅಚಡಣೆಯಿಂದ ಹೃದಯದ ಒಂದು ಭಾಗಕ್ಕೆ ರಕ್ತ ಪೂರೈಕೆ ನಿಂತು, ಆ ಭಾಗ ತನ್ನ ಕಾರ್ಯ ಚಟುವಟಿಕೆಗಳಲ್ಲಿ ನಿಷ್ಫಲವಾಗುವುದೇ ಹೃದಯಾಘಾತ.

ಕರೊನರಿ ರಕ್ತನಾಳಗಳಲ್ಲಿನ ಅಡಚಣೆಯಿಂದ ಹೃದಯದ ಸ್ನಾಯುಗಳ ಆಮ್ಲಜನಕದ ಬೇಡಿಕೆ ಮತ್ತು ಕರೊನರಿ ರಕ್ತನಾಳಗಳ ಆಮ್ಲಜನಕದ ಪೂರೈಕೆ ಇವುಗಳ ಅಸಮತೆಯಿಂದ ಉದ್ಭವಿಸುವ ಸ್ಥಿತಿಯೇ ಹೃದಯಾಘಾತಕ್ಕೆ ನಾಂದಿ. ಆಮ್ಲಜನಕಯುಕ್ತ ರಕ್ತದ ಕೊರತೆಯಿಂದ ಹೃದಯದ ಸ್ನಾಯುಗಳು ನಿರ್ಜೀವವಾಗುತ್ತವೆ. ಇದರಿಂದ ಆ ಭಾಗದ ಜೀವಕೋಶಗಳು ಸತ್ತು ಅವುಗಳ ಚಟುವಟಿಕೆಗಳು ಸ್ತಬ್ಧವಾಗಿ ಹೃದಯದ ಸಹಜ ಕ್ರಿಯೆಗೆ ಅಡ್ಡಿಯುಂಟಾಗುತ್ತದೆ.

## ಅಥೆರೋಸ್ಕ್ಲೀರೋಸಿಸ್:

ಬಹುತೇಕ ಕರೊನರಿ ಹೃದಯರೋಗಗಳಿಗೆ ಪ್ರಮುಖ ಕಾರಣ ಕರೊನರಿ ರಕ್ತನಾಳಗಳಲ್ಲಿ ಉದ್ಭವಿಸುವ 'ಅಥೆರೋಸ್ಕ್ಲೀರೋಸಿಸ್'. ಇದು ಕರೊನರಿ ಅಪಧಮನಿಗಳೂ ಸೇರಿದಂತೆ ಶರೀರದ ಮಧ್ಯಮ ಗಾತ್ರದ ಅಪಧಮನಿಗಳಲ್ಲಿ ವಯಸ್ಸಾದಂತೆ ಕಾಣಿಸಿಕೊಳ್ಳುವ ರಕ್ತನಾಳಗಳ ನಶಿಸುವ ರೋಗ. ರಕ್ತದಲ್ಲಿನ ಹೆಚ್ಚಿನ ಕೊಲೆಸ್ಟಿರಾಲ್ ಮತ್ತು ಇತರ ಜಿಡ್ಡಿನ ಅಂಶಗಳು ಪದರ ಪದರವಾಗಿ ರಕ್ತನಾಳಗಳ ಒಳಗೋಡೆಗಳ ಮೇಲೆ ಸಂಗ್ರಹವಾಗಿ ಧಮನಿಯ ಒಳ ವ್ಯಾಸವನ್ನು ಕಿರಿದುಗೊಳಿಸುತ್ತವೆ. ಇದರಿಂದ ಈ ನಾಳಗಳಲ್ಲಿ ಹರಿಯುವ ರಕ್ತದ ಪ್ರಮಾಣ ಕಡಿಮೆಯಾಗುತ್ತದೆ. ಈ ಜಿಡ್ಡಿನ ಪದರಗಳಲ್ಲಿ ರಕ್ತದಲ್ಲಿನ ಫೈಬ್ರಿನ್ (ರಕ್ತ ಹೆಪ್ಪುಗಟ್ಟಲು ಬೇಕಾಗುವ ವಸ್ತು) ಮತ್ತು ಪ್ಲಾಟಿಲೆಟ್ಸ್ (ರಕ್ತ ಹೆಪ್ಪುಗಟ್ಟಲು ಬೇಕಾಗುವ ರಕ್ತಕಣಗಳು)ಗಳೂ ಸಂಗ್ರಹವಾಗಿ ರಕ್ತನಾಳಗಳ ರಂಧ್ರಗಳನ್ನು ಸಂಪೂರ್ಣವಾಗಿ ಮುಚ್ಚಿಬಿಡಬಹುದು. ಇದರಿಂದ ರಕ್ತ ಸಂಚಾರ ನಿಂತು ಅಂಗಾಂಶಗಳು ನಿರ್ಜೀವವಾಗುತ್ತವೆ. ಹೀಗೆ ಉಂಟಾದ ಜಿಡ್ಡಿನ ಮತ್ತು ಇತರ ವಸ್ತುಗಳ ಕರಣೆಗಳಿಗೆ 'ಅಥೆರೋಮಾ' ಎನ್ನಲಾಗುತ್ತದೆ. ಇದರೊಳಗೆ ಒಮ್ಮೊಮ್ಮೆ ರಕ್ತಸ್ರಾವವಾಗಿ ರಕ್ತ ಹೆಪ್ಪುಗಟ್ಟುತ್ತದೆ. ಅಥೆರೋಮಾದ ಒಂದು ಸಿಬಿರು ಸ್ಥಾನಪಲ್ಲಟಗೊಂಡು ರಕ್ತದ ಪ್ರವಾಹದ ಜೊತೆ ಕೊಚ್ಚಿಹೋಗಿ ಮುಂದೆ ಕಿರಿದಾಗುವ ರಕ್ತನಾಳಗಳಲ್ಲಿ ಕಟ್ಟಿಕೊಂಡು ರಕ್ತನಾಳವನ್ನು ಮುಚ್ಚಿಬಿಡಬಹುದು. ಹೀಗೆ ಕರೊನರಿ ಅಪಧಮನಿಗಳಲ್ಲಿ ಅಡಚಣೆಯಾಗುವುದೇ ಹೃದಯಾಘಾತಕ್ಕೆ ಪ್ರಮುಖ ಕಾರಣ.

## ರಕ್ತದಲ್ಲಿನ 'ಕೊಲೆಸ್ಟಿರಾಲ್':

ರಕ್ತನಾಳಗಳ ಅಥೆರೋಸ್ಕ್ಲೀರೋಸಿಸ್‌ಗೆ ಪ್ರಮುಖ ಕಾರಣ ರಕ್ತದಲ್ಲಿನ ಹೆಚ್ಚಿನ ಪ್ರಮಾಣದ ಕೊಲೆಸ್ಟಿರಾಲ್ ಮತ್ತು ಇತರ ಜಿಡ್ಡಿನಂಶಗಳು. ಕೆಲಜನರಲ್ಲಿ ಮತ್ತು ಸ್ಥೂಲದೇಹಿಗಳಲ್ಲಿ ಇದರ ಪ್ರಮಾಣ ಸಹಜತೆಗಿಂತ ಹೆಚ್ಚಿರುತ್ತದೆ. ನಾವು ತಿನ್ನುವ ಆಹಾರದಲ್ಲಿ ಅಂದರೆ ಪ್ರಾಣಿಗಳ ಮಾಂಸದಲ್ಲಿನ ಕೊಬ್ಬು, ಮೀನು, ಮೊಟ್ಟೆ ಮುಂತಾದವುಗಳಲ್ಲಿ- ಹೇರಳವಾಗಿರುವ ಕೊಲೆಸ್ಟಿರಾಲ್ ರಕ್ತಕ್ಕೆ ಸೇರುತ್ತದೆ. ಇದು ರಕ್ತನಾಳಗಳ ಅಥೆರೋಸ್ಕಿರೋಸಿಸ್‌ಗೆ ಕಾರಣವಾಗುತ್ತದೆ. ನಾವು ತಿನ್ನುವ ಆಹಾರ ಗಳಲ್ಲಿನ ಕೊಲೆಸ್ಟಿರಾಲ್ ಅಗತ್ಯಕ್ಕಿಂತ ಹೆಚ್ಚಿಗೆ ದೇಹಕ್ಕೆ ಸೇರದಂತೆ ನಿಯಂತ್ರಿಸುವ ಒಂದು ವ್ಯವಸ್ಥೆ ದೇಹದಲ್ಲಿದೆ. ನಾವು ತಿಂದ ಆಹಾರ ವಸ್ತುಗಳು ಹಾಗೂ ತರಕಾರಿಗಳು ಪಚನವಾದ ನಂತರ ಉಳಿಯುವ ವಸ್ತುಗಳೆಂದರೆ ನಾರಿನ ಅಂಶಗಳು. ಇವು ಜೀರ್ಣವಾಗದೆ ಮಲದಲ್ಲಿ ಹೊರಹೋಗುತ್ತವೆ. ನಾರಿನಲ್ಲಿರುವ ಪೆಕ್ಟಿನ್ ಮತ್ತು ಲಿಕ್ಟಿನ್‌ಗಳು ಕರುಳಿನಲ್ಲಿ ಆಹಾರ ವಸ್ತುಗಳಲ್ಲಿನ ಕೊಲೆಸ್ಟಿರಾಲ್‌ನೊಂದಿಗೆ ಬೆರೆತು ಸಂಕೀರ್ಣ ವಸ್ತುಗಳಾಗುತ್ತವೆ. ಇವುಗಳನ್ನು ದೇಹ ಹೀರಿಕೊಳ್ಳಲಾಗದೆ ಮಲದಲ್ಲಿ ಹೊರಹಾಕುತ್ತದೆ. ಇದು ದೇಹಕ್ಕೆ ಸೇರುವ ಕೊಲೆಸ್ಟಿರಾಲ್ ನಿಯಂತ್ರಣಕ್ಕೆ ಇರುವ ಒಂದು ನೈಸರ್ಗಿಕ ವ್ಯವಸ್ಥೆ. ಈಗ ನಗರಗಳಲ್ಲಿ ಹೆಚ್ಚು ಜನಪ್ರಿಯವಾಗುತ್ತಿ

ರುವ ಸಂಸ್ಕರಿಸಿದ ಹಾಗೂ ಶುದ್ಧಗೊಳಿಸಿದ ಆಹಾರ ಪದಾರ್ಥಗಳಲ್ಲಿ ನಾರಿನಂಶ ಇರುವುದಿಲ್ಲ. ಇಂತಹ ಆಹಾರ ಪದಾರ್ಥಗಳನ್ನು ಸೇವಿಸುವುದರಿಂದ ತಿಂದ ಎಲ್ಲ ಕೊಲೆಸ್ಟಿರಾಲ್ ಅಂಶವೂ ರಕ್ತಕ್ಕೆ ಹೀರಲ್ಪಡುತ್ತದೆ.

ಹೃದಯಾಘಾತಕ್ಕೆ ಕಾರಣವಾಗುವ ಇತರ ಅಂಶಗಳನ್ನು ಗಮನಿಸೋಣ.

## ಧೂಮಪಾನ ಅಥವಾ ಆರೋಗ್ಯ:ಆಯ್ಕೆ ನಿಮ್ಮದು

ಧೂಮಪಾನ ಹೃದಯಾಘಾತಕ್ಕೆ ಒಂದು ಪ್ರಮುಖ ಹೊಣೆಯಾಗುವ ಅಂಶ. ಧೂಮಪಾನಿಗಳಲ್ಲಿ ಹೃದಯಾಘಾತದ ಸಂಭವಗಳು ಇತರರಿಗಿಂತ ೩ ರಿಂದ ೬ ಪಾಲು ಹೆಚ್ಚು. ಹೆಚ್ಚು ಹೆಚ್ಚು ಸಿಗರೇಟ್ ಸೇದುವವರು ಇತರರಿಗಿಂತ ಮುಂಚಿತವಾಗಿಯೇ ಹೃದಯಾಘಾತಕ್ಕೀಡಾಗುತ್ತಾರೆ. ಪ್ರತಿ ಸಿಗರೇಟೂ ಮನುಷ್ಯನ ಆಯಸ್ಸನ್ನು ಕಡಿಮೆ ಮಾಡುತ್ತಾ ಹೋಗುತ್ತದೆ. ಧೂಮಪಾನದಲ್ಲಿ ಹೃದಯದ ಮೇಲೆ ದುಷ್ಪರಿಣಾಮ ಬೀರುವ ವಸ್ತು ತಂಬಾಕಿನಲ್ಲಿರುವ 'ನಿಕೊಟಿನ್'ಎಂಬ ರಸಾಯನಿಕ ಪದಾರ್ಥ. ಇದು ಶ್ವಾಸಕೋಶಗಳ ಮೂಲಕ ರಕ್ತವನ್ನು ಸೇರುತ್ತದೆ. ರಕ್ತದಲ್ಲಿ ಬೆರೆತ ನಿಕೊಟಿನ್ ದೇಹದ ಅಡ್ರಿನಲ್ ಗ್ರಂಥಿಗಳ ಮಧ್ಯ ಭಾಗವನ್ನು ಪ್ರಚೋದಿಸಿ, 'ಕೆಟಕೋಲಮಿನ್ಸ್'ಗಳೆಂಬ ರಾಸಾಯನಿಕಗಳನ್ನು ರಕ್ತಕ್ಕೆ ಬಿಡುಗಡೆ ಮಾಡುತ್ತವೆ. ಇವು ರಕ್ತನಾಳಗಳನ್ನು ಸಂಕುಚಿಸಿ ರಕ್ತದೊತ್ತಡವನ್ನು ಏರಿಸುತ್ತವೆ. ಏರಿದ ರಕ್ತದೊತ್ತಡದಿಂದ ಹೃದಯದ ಮೇಲೆ ಹೆಚ್ಚಿನ ಶ್ರಮವುಂಟಾಗುತ್ತದೆ. ಈ ರಾಸಾಯನಿಕಗಳು ನೇರವಾಗಿ ಹೃದಯದ ಮೇಲೂ ಪರಿಣಾಮ ಬೀರಿ ಹೃದಯ ಬಡಿತದ ವೇಗ ಮತ್ತು ಸಂಕೋಚನಾಬಲವನ್ನು ವೃದ್ಧಿಸಿ ಮತ್ತಷ್ಟು ದಣಿಸುತ್ತವೆ. ಈ ಪರಿಸ್ಥಿತಿಯನ್ನು ಸರಿದೂಗಿಸಲು ಹೃದಯದ ಸ್ನಾಯುಗಳಿಗೆ ಹೆಚ್ಚಿನ ಆಮ್ಲಜನಕದ ಅವಶ್ಯಕತೆ ಉಂಟಾಗುತ್ತದೆ. ಅದೇ ವೇಳೆಗೆ ಸಿಗರೇಟಿನ ಧೂಮದಿಂದ ರಕ್ತದಲ್ಲಿನ 'ಕಾರ್ಬಾಕ್ಸಿ ಹೀಮೋಗ್ಲಾಬಿನ್' ಪ್ರಮಾಣ ಹೆಚ್ಚಾಗಿ, ಇದು ಹೃದಯಕ್ಕೆ ದೊರೆಯಬೇಕಾದ ಆಮ್ಲಜನಕವನ್ನು ಕುಂಠಿತಗೊಳಿಸುತ್ತದೆ. ಈ ಏರುಪೇರುಗಳು ಹೃದಯಕ್ಕೆ ಹಾನಿಯನ್ನುಂಟುಮಾಡಿ ಹೃದಯರೋಗಗಳಿಗೆ ಅಡಿಪಾಯ ಹಾಕುತ್ತವೆ.

**ಮನಸ್ಸು ಮತ್ತು ಹೃದಯ:** ಮನಸ್ಸು ಮತ್ತು ದೇಹ ಒಂದಿಲ್ಲದೆ ಇನ್ನೊಂದಿಲ್ಲ. ಮಾನಸಿಕ ಆತಂಕ-ಉದ್ವೇಗಗಳೂ ಹೃದಯಾಘಾತಕ್ಕೆ ಕಾರಣವಾಗುತ್ತವೆ. ನಾಗರಿಕ ಜಗತ್ತಿನ ಮಾನವನಿಗೆ ಮಾನಸಿಕ ಒತ್ತಡಗಳು ಒಡನಾಡಿಗಳು. ಕೌಟುಂಬಿಕ ಸಮಸ್ಯೆಗಳಿಂದಲೋ, ವೈಯಕ್ತಿಕ ಸಮಸ್ಯೆಗಳಿಂದಲೋ, ಹೊರಗಿನ ಸಾಮಾಜಿಕ ಸಮಸ್ಯೆಗಳಿಂದಲೋ ಮಾನಸಿಕ ಕ್ಲೇಶಕ್ಕೆ ಒಳಗಾಗುವುದು ಸಹಜ. ಸತತವಾದ ಮಾನಸಿಕ ಒತ್ತಡ ರಕ್ತದೊತ್ತಡವನ್ನು ಏರಿಸುವುದರಲ್ಲಿ ಯಶಸ್ವಿಯಾಗುತ್ತದೆ.

ಅಧಿಕ ರಕ್ತದೊತ್ತಡ ಹೃದಯದ ಮೇಲೆ ನೇರವಾಗಿ ಪರಿಣಾಮ ಬೀರಿ ಹೃದಯಾಘಾತಕ್ಕೆ ಸಹಾಯ ಮಾಡುತ್ತದೆ. ತೀವ್ರವಾದ ಮಾನಸಿಕ ಆಘಾತಗಳ ನಂತರ ಹೃದಯಾಘಾತವಾಗುವುದು ಸಾಮಾನ್ಯ.




ಹೃದಯದ ಕರೋನರಿ ಅಪಧಮನಿಗಳು

## ಸ್ಥೂಲದೇಹ: ಹೃದಯಕ್ಕೆ ಹೊರೆ

ಹೃದಯಾಘಾತದ ಸಂಭವ ಸಾಮಾನ್ಯರಿಗಿಂತ ಸ್ಥೂಲದೇಹಿಗಳಲ್ಲಿ ಹೆಚ್ಚು. ಸ್ಥೂಲಕಾಯತ್ವ ಅತಿಪೌಷ್ಟಿಕತೆಯಿಂದ ಉಂಟಾಗುವ ಪರಿಸ್ಥಿತಿ. ಈ ಸ್ಥಿತಿಯಲ್ಲಿ ಹೆಚ್ಚಿನ ಕೊಬ್ಬಿನಂಶಗಳೂ ದೇಹದಲ್ಲಿ ಶೇಖರವಾಗುವುದಲ್ಲದೆ ರಕ್ತದಲ್ಲಿನ ಕೊಲೆಸ್ಟಿರಾಲ್ ಮತ್ತು ಜಿಡ್ಡಿನಂಶಗಳ ಏರಿಕೆಗೆ ಕಾರಣವಾಗಿ ಕರೊನರಿ ರಕ್ತನಾಳಗಳ ಅಥೆರೋಸ್ಕ್ಲೀರೋಸಿಸ್‌ಗೆ ಆಹ್ವಾನ ನೀಡುತ್ತದೆ. ದೇಹದ ಅತಿಯಾದ ತೂಕದಿಂದ ಹೃದಯದ ಮೇಲೆ ಹೆಚ್ಚಿನ ಹೊರೆ. ಇದರಿಂದ ಸ್ಥೂಲ ದೇಹಕ್ಕೆ ರಕ್ತ ಪೂರೈಸಲು ಹೆಚ್ಚಿನ ಶ್ರಮ ಹೃದಯಕ್ಕೆ. ಸ್ಥೂಲಕಾಯರು ಜಡ ಶರೀರಿಗಳಾಗುವುದರಿಂದ ದೇಹದ ಅವಯವಗಳಿಗೆ ಚಟುವಟಿಕೆಗಳು ಕಡಿಮೆ. ಇದರಿಂದ ರಕ್ತ ಸಂಚಾರ ಕುಂಠಿತವಾಗಿ ರಕ್ತನಾಳಗಳಲ್ಲಿ ರಕ್ತ ಹೆಪ್ಪುಗಟ್ಟುವ ಸಾಧ್ಯತೆಗಳಿರುತ್ತವೆ. ಅಲ್ಲದೆ ಪ್ಲಾಟಿಲೈಟ್ಸ್‌ಗಳು ಒಂದಕ್ಕೊಂದು ಮೆತ್ತಿಕೊಂಡು ಈ ಸಾಧ್ಯತೆಗಳನ್ನು ಮತ್ತಷ್ಟು ಹೆಚ್ಚಿಸುತ್ತವೆ. ಕರೊನರಿ ರಕ್ತ ಧಮನಿಗಳಲ್ಲಿ ಹೀಗೆ ಆದಾಗ ಹೃದಯಾಘಾತ ಶತಃಸಿದ್ಧ. ಶ್ರಮಜೀವನ ಹಾಗೂ ವ್ಯಾಯಾಮಗಳಿಂದ ದೇಹದ ಮೇದಸ್ಸಿನ ಅಂಶ ಕರಗುವುದಲ್ಲದೆ, ರಕ್ತ ಸಂಚಾರ

ಉತ್ತಮಗೊಂಡು, ಪ್ಲಾಟಿಲೆಟ್ಸ್‌ಗಳ ಅಂಟುವಿಕೆ ಕಡಿಮೆಯಾಗಿ, ರಕ್ತ ಹೆಪ್ಪುಗಟ್ಟುವುದು ಕಡಿಮೆಯಾಗುತ್ತದೆ. ದೇಹದ ತೂಕ ಕಡಿಮೆಯಾದರೆ ಹೃದಯದ ಮೇಲಿನ ಶ್ರಮ ಕಡಿಮೆಯಾಗುತ್ತದೆ.

## ರಕ್ತದೊತ್ತಡ ಮತ್ತು ಡಯಾಬಟಿಸ್:

ಅಧಿಕ ರಕ್ತದೊತ್ತಡದಿಂದ ಬಳಲುವವರಲ್ಲಿ ಹೃದಯಾಘಾತದ ಸಂಭವ ಇತರರಿಗಿಂತ ಮೂರು ಪಾಲು ಹೆಚ್ಚಿರುತ್ತದೆ. ರಕ್ತದೊತ್ತಡದ ಆಗಮನಕ್ಕೆ ಸಹಾಯಕವಾಗುವ ಅಂಶಗಳೆಂದರೆ ಮಾನಸಿಕ ಒತ್ತಡ, ಹೆಚ್ಚು ಉಪ್ಪು ಮತ್ತು ಜಿಡ್ಡಿನಿಂದ ಕೂಡಿದ ಆಹಾರಗಳ ಸೇವನೆ, ಸ್ಥೂಲಕಾಯತ್ವ, ಅಥೆರೋಸ್ಕ್ಲೀರೋಸಿಸ್ ಮುಂತಾದವುಗಳು.

ಹೃದಯಾಘಾತಕ್ಕೆ ಸಹಕರಿಸುವ ಇನ್ನೊಂದು ಸಾಮಾನ್ಯ ಕಾಯಿಲೆ ಸಿಹಿಮೂತ್ರ ರೋಗ **(Diabetes).** ಇನ್‌ಸುಲಿನ್ ಎಂಬ ಹಾರ್ಮೋನಿನ ಕೊರತೆಯಿಂದ ಉಂಟಾಗುವ ಸ್ಥಿತಿ. ನಾವು ತಿಂದ ಆಹಾರದಲ್ಲಿನ ಶರ್ಕರ ಪಿಷ್ಟಗಳು ಪಚನವಾಗಿ ಗ್ಲೂಕೋಸ್ ರೂಪದಲ್ಲಿ ರಕ್ತಕ್ಕೆ ಸೇರುತ್ತವೆ. ದೇಹದಲ್ಲಿನ ಮೇದೋಜೀರಕಾಂಗ **(Pancreas)** ಸ್ರವಿಸುವ ಇನ್‌ಸುಲಿನ್ ರಕ್ತದಲ್ಲಿನ ಗ್ಲುಕೋಸ್ ಪ್ರಮಾಣವನ್ನು ನಿಯಂತ್ರಿಸುತ್ತದೆ. ಇದರ ಕೊರತೆಯಿಂದ ರಕ್ತದಲ್ಲಿನ ಗ್ಲೂಕೋಸ್ ಪ್ರಮಾಣ ಹೆಚ್ಚಾಗಿ ಮೂತ್ರದಲ್ಲಿ ಹೊರಹಾಕಲ್ಪಡುತ್ತದೆ. ಇದು ಸಿಹಿಮೂತ್ರ ರೋಗ. ಈ ರೋಗದಲ್ಲಿ ಹೆಚ್ಚಿನ ಸಕ್ಕರೆಯ ಪ್ರಮಾಣ ಮೇದಸ್ಸಾಗಿ ಪರಿವರ್ತನ ಹೊಂದಿ ದೇಹದಲ್ಲಿ ಶೇಖರವಾಗುತ್ತದೆ. ಜೊತೆಗೆ ಜಿಡ್ಡಿನಂಶಗಳೂ ಹೆಚ್ಚಾಗುತ್ತವೆ. ರಕ್ತದಲ್ಲಿನ ಅಧಿಕ ಸಕ್ಕರೆ ರಕ್ತನಾಳಗಳ ಕಾಯಿಲೆಗೆ ಕಾರಣವಾಗುತ್ತದೆ.

ಒಂದೇ ಕುಟುಂಬದ ಹಲವು ಸದಸ್ಯರಲ್ಲಿ ಹೃದಯಾಘಾತವಾಗಿರುವ ಪ್ರಕರಣಗಳು ಸಾಕಷ್ಟಿವೆ. ಇದರಿಂದ ಹೃದಯಾಘಾತ ಅನುವಂಶೀಯವಾಗಿ ಬರುವ







ರಕ್ತನಾಳಗಳಲ್ಲಿ ಅಥೆರೋಸ್ಕ್ಲೀರೋಸಿಸ್ ಬೆಳವಣಿಗೆ

ರೋಗವೆ? ಎಂಬ ಪ್ರಶ್ನೆ ಏಳುವುದು ಸಹಜ. ಆದರೂ ಈ ವರೆಗಿನ ಮಾಹಿತಿಯ ಪ್ರಕಾರ ಅನುವಂಶೀಯ ರೋಗವೆಂದು ಹೇಳಲು ಸ್ಪಷ್ಟ ಆಧಾರಗಳಿಲ್ಲ. ಕುಟುಂಬದ ಹಲವಾರು ಸದಸ್ಯರಲ್ಲಿ ಹೃದಯಾಘಾತವಾಗಲು ಅವರೆಲ್ಲರ ಪರಿಸರ, ಆಹಾರಾಭ್ಯಾಸಗಳು ಒಂದೇ ಆಗಿರುವುದೂ ಕಾರಣವಿರಬಹುದು.

## ಎದೆನೋವು: ಹೃದಯಾಘಾತದ ಸೂಚನೆ!

ಬಹುಪಾಲು ಹೃದಯಾಘಾತಗಳು ಸಂಭವಿಸುವುದು ದೈಹಿಕ ಶ್ರಮದ ನಂತರ ಇಲ್ಲವೆ ಮಾನಸಿಕ ಆಘಾತಗಳಿಗೆ ಒಳಗಾದಾಗ. ವಿಶ್ರಾಂತ ಸ್ಥಿತಿಯಲ್ಲಿ ಇದರ ಸಂಭವ ಕಡಿಮೆ. ಅನಿರೀಕ್ಷಿತವಾಗಿ ಬರಸಿಡಿಲಿನಂತೆ ಬಂದೆರಗುವ ಎದೆ ನೋವು ಹೃದಯಾಘಾತದ ಮೊದಲ ಲಕ್ಷಣ. ಇಳಿವಯಸ್ಸಿನವರಲ್ಲಿ ಮಾನಸಿಕ ಆಘಾತ ಇಲ್ಲವೆ ದೈಹಿಕ ಪ್ರಯಾಸದ ನಂತರ ಎದೆಯಲ್ಲಿ ನೋವು ಕಾಣಿಸಿಕೊಂಡರೆ ಅದು ಹೃದಯಾಘಾತದ ಸೂಚನೆ. ಮಲಮೂತ್ರ ವಿಸರ್ಜನೆ ಸಮಯದಲ್ಲಿ ತಿಣುಕಿದಾಗಲೋ, ಪುಷ್ಕಳವಾದ ಕಂಠಪೂರ್ತಿ ಭೋಜನದ ನಂತರವೋ, ಮೈನಡುಗಿಸುವ ಚಳಿಯಲ್ಲಿ ನಡೆಯುವಾಗಲೋ, ಮಹಡಿಯ ಮೆಟ್ಟಿಲುಗಳನ್ನೇರುವಾಗಲೋ, ಭಾವೋದ್ರೇಕಕ್ಕೊಳಗಾದಾಗಲೋ ಎದೆಯಲ್ಲಿ ಹಠಾತ್ತನೆ ನೋವು ಕಾಣಿಸಿಕೊಂಡರೆ ಅದು ಬಹುಪಾಲು ಹೃದಯಾಘಾತವೇ. ಹೃದಯ ಶೂಲೆ ಇರುವವರಲ್ಲಿ, ಹೃದಯಾಘಾತದಿಂದ ಚೇತರಿಸಿಕೊಂಡವರಲ್ಲಿ ಆಕಸ್ಮಿಕವಾಗಿ ಸತತವಾದ ಎದೆನೋವು ಉಂಟಾದರೆ ಅದು ಹೃದಯಾಘಾತವೆಂಬುದರಲ್ಲಿ ಸಂದೇಹವಿಲ್ಲ. ಎದೆಯ ಮಧ್ಯಭಾಗದಲ್ಲಿ ಆರಂಭವಾಗುವ ವೇದನೆ ವ್ಯಕ್ತಿಯನ್ನು ಅಶಕ್ತನನ್ನಾಗಿಸುತ್ತದೆ. ಈ ನೋವು ಸಾಮಾನ್ಯವಾಗಿ ಎಡ ತೋಳಿಗೆ, ಎಡಕೈಗೆ ಇಲ್ಲವೆ ಎಡ ಭುಜಕ್ಕೆ ವ್ಯಾಪಿಸುತ್ತದೆ. ಒಮ್ಮೊಮ್ಮೆ ಎಡಕಿವಿ ಮೂಗಿನ ತುದಿ, ಕತ್ತಿನ ಎಡ ಪಾರ್ಶ್ವಕ್ಕೆ ಇಲ್ಲವೆ ಬೆನ್ನಿಗೂ ವ್ಯಾಪಿಸಬಹುದು. ತುಂಬಾ ಅಪರೂಪದ ಸಂದರ್ಭಗಳಲ್ಲಿ ಹೊಟ್ಟೆಯ ಮೇಲ್ಭಾಗಕ್ಕೂ ವಿಸ್ತರಿಸಬಹುದು. ಇದು ಜಠರದ ಹುಣ್ಣು ಇಲ್ಲವೆ ಊರಿಯೂತಗಳ ರೋಗದಂತಿದ್ದು ಹೃದಯಾಘಾತವನ್ನು ಮರೆಮಾಡಿ ವೈದ್ಯರನ್ನು ಬೇಸ್ತು ಬೀಳಿಸಬಹುದು.

ಇನ್ನು ಕೆಲವು ಸಂದರ್ಭಗಳಲ್ಲಿ ಅಜೀರ್ಣ ಇಲ್ಲವೆ ಕುತ್ತಿಗೆ ಅಥವಾ ಎದೆಯಲ್ಲಿ ಏನೋ ಸಿಕ್ಕಿಕೊಂಡ ಹಾಗೆ ಅನುಭವವಾಗುವುದು ಹೃದಯಾಘಾತದ ಸಂಭವವನ್ನು ತಳ್ಳಿ ಹಾಕುವುದಿಲ್ಲ. ಎದೆಯಲ್ಲಿ ಭಾರವಿಟ್ಟಂತೆ, ಬಿಗಿದಂತೆ, ಇಲ್ಲವೆ ಎದೆಯನ್ನು ಬಲವಾಗಿ ಹಿಸುಕಿದಂತೆ ಆಗುವ ನೋವು ಅಸಹನೀಯವಾಗಿರುತ್ತದೆ. ಧುತ್ತನೆ ಬಂದೆರಗಿದ ನೋವಿನಿಂದ ಬಿಳಿಚಿಕೊಂಡ ರೋಗಿಯ ಮುಖ, ಕಳವಳಕಾರಿ ಪರಿಸ್ಥಿತಿ, ಬೆವರಿನಿಂದ ತೊಯ್ದುಹೋದ ದೇಹ, ರೋಗಿಯ ಹೊರಳಾಟ-ನರಳಾಟಗಳು ಹೃದಯಾಘಾತವನ್ನು ಸ್ಪಷ್ಟವಾಗಿ ಸೂಚಿಸುತ್ತವೆ. ಹೃದಯಾಘಾತದ ನೋವು ವಿಶ್ರಾಂತಿಯಿಂದಲೂ ಶಮನವಾಗುವುದಿಲ್ಲ. ಇತರ ಲಕ್ಷಣಗಳೆಂದರೆ ಅತೀವ ಸುಸ್ತು, ಉಸಿರಾಟದ ತೊಂದರೆ, ವಾಂತಿ ಮುಂತಾದವು. ಹೃದಯಾಘಾತದ

ತೀವ್ರತೆ ಆಘಾತಕ್ಕೊಳಗಾದ ಹೃದಯದ ಭಾಗ ಅದರ ವ್ಯಾಪ್ತಿ ಹಾಗೂ ಪ್ರಮಾಣಗಳಿಗೆ ಅನುಗುಣವಾಗಿರುತ್ತದೆ.

## ವಿವಿಧ ರೋಗಗಳಲ್ಲಿನ ಎದೆನೋವು:

ಹೃದಯವಲ್ಲದೆ ಎದೆಯೊಳಗಿನ ಇತರ ಅಂಗಗಳ ಕಾಯಿಲೆಗಳಿಂದಲೂ ಎದೆ ನೋವು ಉಂಟಾಗುತ್ತದೆ. ಆದುದರಿಂದ ಆ ನೋವುಗಳೂ ಹೃದಯಕ್ಕೆ ಸಂಬಂಧಿಸಿರಬೇಕೆಂದಿಲ್ಲ. ಅದಕ್ಕಾಗಿ ಅನಗತ್ಯ ಆತಂಕ ಪಡಬೇಕಿಲ್ಲ. ಹೃದಯಕ್ಕೆ ಸಂಬಂಧಿಸಿದ ಎದೆಯನೋವಿನಿಂದ ಇತರ ರೋಗಗಳಲ್ಲಿನ ಎದೆನೋವುಗಳನ್ನು ಸುಲಭವಾಗಿ ಪ್ರತ್ಯೇಕಿಸಬಹುದು.

ಎದೆಯ ಗೋಡೆಯ ಅವಯುವಗಳಾದ ಚರ್ಮ, ಮೂಳೆ, ಮಾಂಸಖಂಡಗಳ ಅನಾರೋಗ್ಯದಲ್ಲಿ ಎದೆನೋವು ಕಾಣಿಸುತ್ತದೆ. ಈ ನೋವು ಹಠಾತ್ತಾಗಿ ಉಂಟಾಗದೆ, ಬೇರೆಡೆಗೆ ವಿಸ್ತರಿಸಿಕೊಳ್ಳುವುದಿಲ್ಲ. ನೋವಿರುವ ಜಾಗದಲ್ಲಿ ಅದುಮಿದಾಗ ವೇದನೆ ಹೆಚ್ಚಾಗುತ್ತದೆ. ಮೂಳೆಗಳ ಅಥವಾ ಮಾಂಸಖಂಡಗಳ ಚಾಲನೆಯಿಂದ ನೋವು ಹೆಚ್ಚಾಗುತ್ತದೆ. ಶ್ವಾಸಕೋಶಗಳ ರೋಗಗಳಲ್ಲಿಯೂ ಎದೆನೋವು ಉಂಟಾಗುತ್ತದೆ. ಇಲ್ಲಿ ಎದೆನೋವಿಗಿಂತ ಮುಂದೆ ಜ್ವರ, ಕೆಮ್ಮು ಅಥವಾ ಉಸಿರಾಟದ ತೊಂದರೆಗಳಿದ್ದು ನಂತರ ಅಥವಾ ಜೊತೆಯಲ್ಲಿ ಎದೆನೋವು ಬರಬಹುದು. ರೋಗಕ್ಕೀಡಾದ ಶ್ವಾಸಕೋಶದ ಭಾಗಕ್ಕೆ ಎದೆನೋವು ಸೀಮಿತವಾಗಿರುತ್ತದೆ. ಮತ್ತು ನೋವು ಹೃದಯಾಘಾತದ ನೋವಿನಷ್ಟು ತೀವ್ರವಾಗಿರುವುದಿಲ್ಲ. ಕೆಮ್ಮಿದಾಗ ನೋವು ಹೆಚ್ಚಾಗಬಹುದು. ಶ್ವಾಸಕೋಶಗಳನ್ನು ಸುತ್ತುವರಿದ ತೆಳುವಾದ ಪೊರೆ 'ಪ್ಲೂರಾ'ಗಳಿಗೆ ಸಂಬಂಧಿಸಿದ ರೋಗಗಳಲ್ಲಿಯೂ ಎದೆನೋವು ಉಂಟಾಗುತ್ತದೆ. ಈ ಸ್ಥಿತಿಗಳಲ್ಲಿನ ನೋವು ಕೆಮ್ಮಿದಾಗ, ಸೀನಿದಾಗ, ಜೋರಾಗಿ ಉಸಿರೆಳೆದುಕೊಂಡಾಗ ಹೆಚ್ಚಾಗುತ್ತದೆ. ಎದೆಯ ಒಂದು ಪಾರ್ಶ್ವಕ್ಕೆ ಸೀಮಿತವಾಗಿರುವ ನೋವು ಬೇರೆಡೆಗೆ ವ್ಯಾಪಿಸುವುದಿಲ್ಲ; ಜ್ವರ, ಕೆಮ್ಮಿನಂತಹ ಲಕ್ಷಣಗಳಿರಬಹುದು. ಅನ್ನನಾಳ, ಜಠರದ ರೋಗಗಳಲ್ಲಿಯೂ ಎದೆನೋವು ಬರಬಹುದು. ಈ ನೋವು ಎದೆಯ ಮಧ್ಯಭಾಗ ಮತ್ತು ಹೊಟ್ಟೆಯ ಮೇಲ್ಭಾಗದಲ್ಲಿದ್ದು ಪ್ರತ್ಯಾಮ್ಲಗಳ (Atacids) ಸೇವನೆಯ ನಂತರ ನೋವು ಕಡಿಮೆಯಾಗುತ್ತದೆ.

## ಚಿಕಿತ್ಸೆ:

ಆಘಾತಕ್ಕೊಳಗಾಗಿರುವ ಹೃದಯದ ಭಾಗ, ಅದರ ವ್ಯಾಪ್ತಿ, ಪ್ರಮಾಣ, ಉಂಟಾಗಿರುವ ತೊಡಕುಗಳು, ಇವುಗಳನ್ನು 'ವಿದ್ಯುತ್ ಹೃದಯ ಲೇಖನ'ದಿಂದ (ಎಲೆಕ್ಟ್ರೋಕಾರ್ಡಿಯೋ ಗ್ರಾಂ) ಗುರುತಿಸಬಹುದು. ಅಲ್ಲದೆ ಅಘಾತದಿಂದ ನಿರ್ಜೀವವಾದ ಹೃದಯದ ಸ್ನಾಯುಗಳಿಂದ ಹಲವಾರು ಕಿಣ್ವಗಳು ರಕ್ತಕ್ಕೆ ಬಿಡುಗಡೆಯಾಗುತ್ತವೆ. ರಕ್ತದಲ್ಲಿನ ಇವುಗಳ ಪ್ರಮಾಣವನ್ನು ಅಳೆಯುವುದರಿಂದಲೂ ಹೃದಯಾ



ಹೃದಯದ ಪುನಶ್ಚೇತನ ಚಿಕಿತ್ಸೆ

ಘಾತವನ್ನು ಸ್ಪಷ್ಟವಾಗಿ ಗುರುತಿಸಬಹುದು.

ಹೃದಯಾಘಾತಕ್ಕೊಳಗಾದ ರೋಗಿಗಳಿಗೆ ಪ್ರಪ್ರಥಮ ತುರ್ತು ಚಿಕಿತ್ಸೆಯೆಂದರೆ 'ಸಂಪೂರ್ಣ ವಿಶ್ರಾಂತಿ'. ಮುಂದಿನದು ಯಾತನೆಯನ್ನು ಶಮನಗೊಳಿಸಿ ಕಳವಳ, ಕಾತರಗಳನ್ನು ನಿವಾರಿಸುವುದು. ಜೊತೆಗೆ ರೋಗಿಗೆ ಮತ್ತು ಅವನ ಬಂಧುಗಳಿಗೆ ಸೂಕ್ತ ಭರವಸೆ. ಇದೊಂದು ಗಂಭೀರ ತುರ್ತು ಪರಿಸ್ಥಿತಿಯಾದರೂ ಮಾನಸಿಕ ಸ್ಥೈರ್ಯ-ಧೈರ್ಯಗಳು ಅವಶ್ಯ. ಶಕ್ತಿಶಾಲಿ ನೋವು ನಿವಾರಕಗಳಾದ ಪೆಥಡೀನ್, ಮಾರ್ಫೀನ್ ಎದೆನೋವನ್ನು ಶಮನಗೊಳಿಸುವುದರಲ್ಲಿ ಯಶಸ್ವಿಯಾಗುತ್ತವೆ. ರೋಗಿಯ ಆತಂಕ ಉದ್ವೇಗಗಳನ್ನು ಕಡಿಮೆಮಾಡಿ ಮನಸ್ಸನ್ನು ಶಾಂತಗೊಳಿಸುವ ಔಷಧಗಳೂ ಲಭ್ಯ. ಪರಿಶುದ್ಧ ಆಮ್ಲಜನಕದ ಸೇವನೆ ಆಘಾತಹೊಂದಿದ ಹೃದಯಕ್ಕೆ ಅವಶ್ಯ. ಆಘಾತದಿಂದಾದ ಹೃದಯದ ಗಾಯ ಮಾಯಲು ಹೃದಯಕ್ಕೆ ವಿಶ್ರಾಂತಿ ಅಗತ್ಯವಿರುತ್ತದೆ. ದಣಿವಾಗುವಂತಹ ಅವಕಾಶಗಳನ್ನು ತಪ್ಪಿಸಲು ರೋಗಿಯನ್ನು ಹಾಸಿಗೆ ಬಿಟ್ಟು ಮೇಲೇಳದಂತೆ ನಿರ್ಬಂಧಿಸಲಾಗುತ್ತದೆ.

ಹೃದಯಾಘಾತದ ನಂತರದ ಮೊದಲ ೨೪ ರಿಂದ ೪೮ ಗಂಟೆಗಳು ಅತಿಕ್ಲಿಷ್ಟಕರ ಅವಧಿ. ಈ ವೇಳೆಯಲ್ಲಿ ಉಂಟಾಗಬಹುದಾದ ಹಲವಾರು ತೊಡಕುಗಳನ್ನು ಎಚ್ಚರಿಕೆಯಿಂದ ಗಮನಿಸಿ, ಗುರುತಿಸಿ ಚಿಕಿತ್ಸೆ ನೀಡಬೇಕಾಗುತ್ತದೆ. ರಕ್ತದೊತ್ತಡದ ಕುಸಿತ, ಹೃದಯ ಸ್ತಂಭನ, ಹೃದಯದ ಲಯದಲ್ಲಿನ ಏರುಪೇರುಗಳು ಇಂಥವುಗಳು ಸಾಮಾನ್ಯವಾಗಿ ಕಂಡುಬರುವಂತಹ ತೊಡಕುಗಳು. ಆದುದರಿಂದ ಈ ಅವಧಿಯಲ್ಲಿ

ಕಡ್ಡಾಯವಾಗಿ ವೈದ್ಯಕೀಯ ನೆರವು ಅತ್ಯಗತ್ಯ. ಆದ್ದರಿಂದಲೇ ಎಲ್ಲ ತುರ್ತು ಸನ್ನಿವೇಶಗಳನ್ನೆದುರಿಸಲು ವ್ಯವಸ್ಥಿತವಾಗಿ ಸಜ್ಜಾದ 'ಇಂಟೆನ್ಸಿವ್ ಕರೊನರಿ ಕೇರ್ ಯೂನಿಟ್' ಎಂಬ ಪ್ರತ್ಯೇಕ ವಿಭಾಗದಲ್ಲಿ ರೋಗಿಯನ್ನು ದಾಖಲು ಮಾಡಿಕೊಳ್ಳಲಾಗುತ್ತದೆ. ಈ ವಿಭಾಗ ದೊಡ್ಡ ದೊಡ್ಡ ಆಸ್ಪತ್ರೆಗಳಲ್ಲಿ ಲಭ್ಯವಿರುತ್ತದೆ. ಇಲ್ಲಿ ಎಲ್ಲ ತೊಂದರೆಗಳನ್ನೂ ಸಕಾಲದಲ್ಲಿ ಚಿಕಿತ್ಸೆ ಮಾಡಲು ಅಗತ್ಯವಾದ ಸಿಬ್ಬಂದಿ ಹಾಗೂ ಯಂತ್ರೋಪಕರಣಗಳು, ಔಷಧ ಸಾಮಗ್ರಿಗಳೂ ಸಿದ್ಧವಿರುತ್ತವೆ.

ಈ ಚಿಕಿತ್ಸೆಯ ಜೊತೆಗೆ ರೋಗಿಗೆ ಮಾನಸಿಕ ವಿಶ್ರಾಂತಿ ಹೆಚ್ಚು ಅಗತ್ಯ. ರೋಗಿ ಚೇತರಿಸಿಕೊಳ್ಳಲು ಪ್ರಶಾಂತ ವಾತಾವರಣ ಮುಖ್ಯ. ರೋಗಿಗೆ ಸುಲಭವಾಗಿ ಜೀರ್ಣವಾಗುವ ದ್ರವರೂಪದ ಆಹಾರ ಅಗತ್ಯವಿರುತ್ತದೆ. ಮಲವಿಸರ್ಜನೆ ಶ್ರಮವಿಲ್ಲದೆ ಆಗಲು ವಿರೇಚಕಗಳನ್ನು ಕೊಡಬಹುದು. ಜೊತೆಗೆ ರಕ್ತದೊತ್ತಡ, ಸಿಹಿ ಮೂತ್ರ ರೋಗಗಳಿದ್ದಲ್ಲಿ ಅವುಗಳನ್ನು ನಿಯಂತ್ರಿಸುವುದು ಚಿಕಿತ್ಸೆಯ ಒಂದು ಭಾಗ.

ಒಂದು ವಾರದ ನಂತರ ಯಾವುದೇ ಅಪಾಯಕಾರಿ ತೊಡಕುಗಳು ಕಂಡುಬರದಿದ್ದಲ್ಲಿ ರೋಗಿಯ ಕೆಲವು ನಿರ್ಬಂಧಗಳನ್ನು ಸಡಿಲಿಸಲಾಗುವುದು. ಆಗ ಆತ ಹಾಸಿಗೆಯಲ್ಲಿ ಎದ್ದು ಕೂಡಬಹುದು. ಘನಾಹಾರಗಳನ್ನು ಇತಿಮಿತಿಯಲ್ಲಿ ಸೇವಿಸಬಹುದು. ಒಂದೆರಡು ವಾರಗಳಲ್ಲಿ ಎದ್ದು ಓಡಾಡಲು ಅಂದರೆ ಶೌಚಾಲಯಕ್ಕೆ ಹೋಗಿಬರಲು, ಕುರ್ಚಿಯಲ್ಲಿ ಕುಳಿತುಕೊಳ್ಳಲು ಅವಕಾಶ ನೀಡಲಾಗುವುದು. ಔಷಧೋಪಚಾರಗಳ ಜೊತೆಗೆ ರೋಗಿಯನ್ನು ಆಹ್ಲಾದಾಯಕವಾಗಿರಿಸಲು ಬೇಕಾಗುವ ಮನೋಚಿಕಿತ್ಸೆ ಅತಿಮುಖ್ಯ. ಯಾವುದೇ ತೊಡಕುಗಳು ಕಂಡುಬಾರದಿದ್ದಲ್ಲಿ ೪ ರಿಂದ ೬ ವಾರಗಳಲ್ಲಿ ವೈದ್ಯರ ಆದೇಶದ ಮೇರೆಗೆ ಬಿಡುಗಡೆ ಹೊಂದಿ ಮನೆಗೆ ಹೋಗಬಹುದು.

ಹೃದಯಾಘಾತಕ್ಕೀಡಾದ ಹೃದಯದ ಭಾಗ ರಕ್ತ ಪೂರೈಕೆಯಿಲ್ಲದೆ ಕಲೆಗಟ್ಟಿ, ನಿರ್ಜೀವವಾಗಿ ಆ ಭಾಗದ ಎಲ್ಲ ಕೆಲಸಕಾರ್ಯಗಳೂ ಸ್ಥಗಿತವಾಗಿರುತ್ತವೆ. ಈ ನಿರ್ಜೀವ ಅಂಗಾಂಶಗಳ ದುರಸ್ತಿ ಕಾರ್ಯ ದೇಹದಲ್ಲಿ ವರುಷದಿಂದಲೇ ಪ್ರಾರಂಭವಾಗುತ್ತದೆ. ಇದು ಪೂರ್ಣಗೊಳ್ಳಲು ಸುಮಾರು ೪ ರಿಂದ ೬ ವಾರಗಳು ಹಿಡಿಯುತ್ತವೆ. ಈ ವೇಳೆಯಲ್ಲಿ ಹೊಸ ರಕ್ತನಾಳಗಳು ಗಾಯವಾದ ಸ್ಥಳದಲ್ಲಿ ಬೆಳೆಯುತ್ತವೆ. ಹೊಸ ಅಡ್ಡ ಕೂಡಿಕೆಗಳುಂಟಾಗಿ ರಕ್ತ ಪೂರೈಕೆಯನ್ನು ಸ್ವಲ್ಪ ಮಟ್ಟಿಗೆ ಪುನರ್‌ಸ್ಥಾಪಿಸುತ್ತವೆ. ನಿರ್ಜೀವ ಅಂಗಾಂಶಗಳು ನಾರಿನಂತಹ ವಸ್ತುಗಳಿಂದ ಪುನರ್ರಚಿತವಾಗುತ್ತವೆ.

## ನಂತರದ ಜೀವನ:

ಹೃದಯಾಘಾತದಿಂದ ಚೇತರಿಸಿಕೊಂಡ ವ್ಯಕ್ತಿಯ ಮುಂದಿನ ಜೀವನದಲ್ಲಿ

ಕೆಲವೊಂದು ಮಾರ್ಪಾಡುಗಳು ಅತ್ಯವಶ್ಯಕ. ಭಾವಾವೇಶಗಳಿಗೆ, ಆತಂಕ- ಉದ್ವೇಗಗಳಿಗೆ, ದೈಹಿಕ ಪರಿಶ್ರಮಗಳಿಗೆ ಪೂರ್ಣವಿರಾಮ ಹಾಕಿ ಶಾಂತಜೀವನ ನಡೆಸಲು ಸಜ್ಜಾಗಬೇಕು. ಒಮ್ಮೆ ಹೃದಯಾಘಾತದಿಂದ ಚೇತರಿಸಿಕೊಂಡು ಹಲವಾರು ವರ್ಷಗಳು ಆರೋಗ್ಯ ಜೀವನ ಸಾಗಿಸಿದವರೂ ಇದ್ದಾರೆ.

ವ್ಯಕ್ತಿ ತನ್ನ ದಿನನಿತ್ಯದ ಕೆಲಸಕಾರ್ಯಗಳಲ್ಲಿ ಮಾರ್ಪಾಟು ಮಾಡಿಕೊಳ್ಳುವುದು ಅತಿಮುಖ್ಯ. ದೈಹಿಕ ಶ್ರಮವಿಲ್ಲದೆ ಕುಳಿತೇ ಮಾಡುವಂತಹ ಕೆಲಸಗಳು ಕ್ಷೇಮಕರ. ಆಹಾರದ ವಿಷಯದಲ್ಲೂ ಬದಲಾವಣೆಗಳು ಅವಶ್ಯಕ. ಉಪ್ಪು ಮತ್ತು ಜಿಡ್ಡಿನಿಂದ ಕೂಡಿದ ಆಹಾರ ಪದಾರ್ಥಗಳನ್ನು ಮಿತವಾಗಿ ಸೇವಿಸಬೇಕು. ಪ್ರಾಣಿಗಳ ಮಾಂಸದಲ್ಲಿನ ಕೊಬ್ಬು, ಮೊಟ್ಟೆ, ಮೀನು, ತುಪ್ಪ, ಬೆಣ್ಣೆ ಇವುಗಳನ್ನು ಆದಷ್ಟು ವರ್ಜಿಸಬೇಕು. ಹಸಿರು ತರಕಾರಿಗಳು, ಹಣ್ಣು, ಪ್ರೊಟೀನ್ ಉಳ್ಳ ಆಹಾರ ಪದಾರ್ಥಗಳು ದೇಹಕ್ಕೆ ಉತ್ತಮ. ಊಟದ ವಿಷಯದಲ್ಲಿ ಅವಸರವಾಗಿ ಒಂದೇ ಸಾರಿ ಕಂಠಪೂರ್ತಿ ಭೋಜನ ನಿಷಿದ್ಧ. ಸ್ಥೂಲ ದೇಹಿಗಳಿಗೆ ತೂಕ ಕಡಿಮೆ ಮಾಡಬಲ್ಲ ಆಹಾರಕ್ರಮಗಳು ಅವಶ್ಯಕ. ಮಧುಮೇಹದ ರೋಗಿಗಳೂ ವೈದ್ಯರ ಸಲಹೆಯ ಪ್ರಕಾರ ಆಹಾರ ಸೇವಿಸುವುದು ಸೂಕ್ತ. ಊಟವಾದ ಕೂಡಲೇ ಮಲಗುವ ಅಭ್ಯಾಸ ಒಳ್ಳೆಯದಲ್ಲ. ಮಲಬದ್ಧತೆಯನ್ನು ನಿವಾರಿಸಿಕೊಳ್ಳಬೇಕು. ಹಸಿರು ತರಕಾರಿಗಳು, ಸೊಪ್ಪುಗಳ ಸೇವನೆ ಇದಕ್ಕೆ ಉತ್ತಮ. ಧೂಮಪಾನದ ಅಭ್ಯಾಸವಿರುವವರು ಅದನ್ನು ವರ್ಜಿಸಲೇಬೇಕು. ಯಾವುದೇ ತೊಡಕುಗಳಿಲ್ಲದಿದ್ದಲ್ಲಿ (ಉಬ್ಬಸ, ಹೃದಯದ ಸೋಲು, ಹೃದಯ ಶೂಲೆ ಇತ್ಯಾದಿ) ಸಮತಟ್ಟಾದ ನೆಲದ ಮೇಲೆ ಬೆಳಗಿನ ವಿಹಾರ ಬಹಳ ಉತ್ತಮವಾದ ವ್ಯಾಯಾಮ. ಇದರಿಂದ ಯಾವುದೇ ಶ್ರಮವಿಲ್ಲದೆ ಶರೀರಕ್ಕೆ ವ್ಯಾಯಾಮ ದೊರಕುವುದಲ್ಲದೆ ರಕ್ತಸಂಚಾರ ಸುಗಮವಾಗಿ ದೇಹದ ಕೊಬ್ಬಿನ ಅಂಶಗಳು ಕರಗುತ್ತವೆ. ಯೋಗಾಭ್ಯಾಸದಿಂದ ಮಾನಸಿಕ ಶಾಂತಿ-ಸ್ಥಿರತೆಯನ್ನು ಕಾಪಾಡಿಕೊಳ್ಳಬಹುದು. ಸಿಹಿಮೂತ್ರರೋಗ, ರಕ್ತದ ಒತ್ತಡ ಇವುಗಳಿದ್ದಲ್ಲಿ ಚಿಕಿತ್ಸೆಯನ್ನು ಮುಂದುವರೆಸಬೇಕು. ಇವೆಲ್ಲವುದರ ಜೊತೆಗೆ ವೈದ್ಯರಿಂದ ಕ್ರಮಬದ್ಧ ತಪಾಸಣೆ, ಔಷಧಗಳ ಸೇವನೆ ಮತ್ತು ಸಲಹೆ ಸೂಚನೆಗಳನ್ನು ಪಾಲಿಸುವುದು ಅತ್ಯಗತ್ಯ.

## ಹೃದಯರೋಗಗಳನ್ನು ತಡೆಗಟ್ಟಬಹುದೆ?

ಕರೊನರಿ ಹೃದಯರೋಗಗಳನ್ನು ತಡೆಗಟ್ಟಲಾಗದಿದ್ದರೂ ಅವುಗಳ ಸಂಭವವನ್ನು ಅವಶ್ಯಕವಾಗಿ ಮುಂದೂಡಬಹುದು. ಇವುಗಳಿಗೆ ಮುಖ್ಯ ಕಾರಣವಾದ ರಕ್ತನಾಳಗಳ ಅಥೆರೋಸ್ಕ್ಲೀರೋಸಿಸ್‌ಅನ್ನು ನಿಯಂತ್ರಿಸಲು ಆಹಾರಕ್ರಮಗಳಲ್ಲಿ ಸೂಕ್ತ ಬದಲಾವಣೆಗಳನ್ನು ಮಾಡಿಕೊಂಡು, ಧೂಮಪಾನ ಮದ್ಯಪಾನದಂತಹ ದುಶ್ಚಟಗಳನ್ನು ವರ್ಜಿಸಿ, ಯೋಗ, ವ್ಯಾಯಾಮಗಳಲ್ಲಿ ನಿರತರಾಗಿ, ರಕ್ತದೊತ್ತಡ ಸಿಹಿಮೂತ್ರದಂ

ತಹ ರೋಗಗಳನ್ನು ನಿಯಂತ್ರಿಸಿಕೊಂಡು, ಆತಂಕ, ಉದ್ವೇಗದ ಭಾವಾವೇಶಗಳಿಗೆ ಕಡಿವಾಣ ಹಾಕಿಕೊಂಡರೆ ಅವಶ್ಯವಾಗಿ ಈ ರೋಗಗಳ ಸಂಭವಗಳನ್ನು ಮುಂದೂಡಿ ನೆಮ್ಮದಿಯ ಜೀವನ ಸಾಗಿಸಬಹುದು.

** ** **

## ಹೃದಯ ಸ್ತಂಭನ-ಪುನಶ್ಚೇತನ ಚಿಕಿತ್ಸೆ

ಹೃದಯ ಸ್ತಂಭನ ಎಂದರೆ ಹಠಾತ್ತನೆ ಹೃದಯದ ಕ್ರಿಯೆ ಸ್ಥಗಿತಗೊಳ್ಳುವುದು. ಹೃದಯಾಘಾತವಾದವರಲ್ಲಿ ಹೃದಯ ಸ್ತಂಭನದಿಂದ ಸಾವು ಸಂಭವಿಸುತ್ತದೆ. ಅಪಘಾತಗಳಿಗೀಡಾದವರಲ್ಲಿಯೂ ವಿದ್ಯುತ್ ಆಘಾತಗಳಿಗೆ ಒಳಗಾದವರಲ್ಲಿಯೂ ಹೃದಯಸ್ತಂಭನ ಉಂಟಾಗುತ್ತದೆ. ಈ ಸನ್ನಿವೇಶಗಳಲ್ಲಿ ಹೃದಯದ ಸ್ಪಂದನಗಳು ನಿಲ್ಲುವುದರ ಜೊತೆಗೆ, ರಕ್ತ ಪರಿಚಲನೆಗೆ ಪೂರ್ಣ ವಿರಾಮ ಬೀಳುತ್ತದೆ. ಇದರಿಂದ ದೇಹದ ಅಂಗಾಂಗಗಳಿಗೆ ರಕ್ತ ಪೂರೈಕೆಯಾಗದೆ ಅವುಗಳ ಕೆಲಸ ಕಾರ್ಯಗಳು ನಿಲ್ಲುತ್ತವೆ. ಪ್ರಮುಖವಾಗಿ ಮೆದುಳಿಗೆ ನಾಲ್ಕೈದು ನಿಮಿಷ ರಕ್ತ ಪೂರೈಕೆ ನಿಂತುಹೋದರೆ ನರಕೋಶಗಳಿಗೆ ಶಾಶ್ವತ ಧಕ್ಕೆಯಾಗಿ ಸಾವು ಸಂಭವಿಸುತ್ತದೆ.

ಹೃದಯ ಸ್ತಂಭನದ ಪ್ರಕರಣಗಳಲ್ಲಿ ವ್ಯಕ್ತಿಯ ನಾಡಿಯ ಬಡಿತ, ಹೃದಯದ ಬಡಿತಗಳು ಸ್ತಬ್ಧವಾಗುತ್ತವೆ. ಉಸಿರಾಟ ನಿಂತು ಕಣ್ಣಿನ ಪಾಪೆಗಳು ದೊಡ್ಡವಾಗುತ್ತವೆ. ರೋಗಿಯ ಕೈಕಾಲುಗಳು ತಣ್ಣಗಾಗಿ ನಿಶ್ಚೇಷ್ಟಿತವಾಗುತ್ತವೆ.

ಹೀಗೆ ಅನಿರೀಕ್ಷಿತವಾಗಿ ಒಮ್ಮೆಲೆ ಮುಷ್ಕರ ಹೂಡಿದಂತೆ ಸ್ಥಗಿತಗೊಳ್ಳುವ ಹೃದಯವನ್ನು ಸಕಾಲಿಕ ಚಿಕಿತ್ಸೆಯಿಂದ ಪುನಶ್ಚೇತನಗೊಳಿಸುವ ಪ್ರಯತ್ನ ಮಾಡಬಹುದು. ಬಾಯಿಯ ಶ್ವಾಸೋಚ್ಛ್ವಾಸ ಮತ್ತು ಹೃದಯದ ಬಾಹ್ಯ ಮರ್ದನದಿಂದ ನಿಂತಿರುವ ಹೃದಯವನ್ನು ಕೆಲ ಸಂದರ್ಭಗಳಲ್ಲಿ ಪುನರಾರಂಭಿಸಿ ಜೀವ ತುಂಬಬಹುದು.

**ಚಿಕಿತ್ಸೆ;** ಹೃದಯ ಸ್ತಂಭನವನ್ನು ಗುರುತಿಸಿದ ಕೂಡಲೇ ರೋಗಿಯ ಎದೆಯ ಮಧ್ಯಭಾಗದ ಸ್ವಲ್ಪ ಎಡಕ್ಕೆ, ಮೊಲೆತೊಟ್ಟಿನ ಕೆಳಭಾಗಕ್ಕೆ (ಹೃದಯವಿರುವ ಜಾಗ) ಬಿಗಿದ ಮುಷ್ಟಿಯಿಂದ ಲಘುವಾಗಿ ಹೊಡೆತವನ್ನು ಕೊಡಬೇಕು. ಕೆಲ ಸಮಯಗಳಲ್ಲಿ ಈ ಪ್ರಚೋದನೆ ಹೃದಯಕ್ರಿಯೆಯನ್ನು ಪುನರ್ ನಿರ್ಮಾಣ ಮಾಡಬಹುದು. ನಾಡಿಬಡಿತ ಹೃದಯಬಡಿತಗಳು ಉಂಟಾದರೆ ಹೃದಯಕ್ರಿಯೆ ಆರಂಭವಾಗಿದೆ ಎಂದೂ, ಇಲ್ಲದಿದ್ದಲ್ಲಿ ಮುಂದಿನ ಚಿಕಿತ್ಸೆ ಆರಂಭಿಸಬೇಕು.

**ಬಾಯಿಯಿಂದ ಶ್ವಾಸೋಚ್ಛ್ವಾಸ:** ರೋಗಿಯನ್ನು ನೆಲದ ಮೇಲೆ ಅಂಗಾತ ಮಲಗಿಸಬೇಕು. ಗಲ್ಲವನ್ನು ಹಿಂದಕ್ಕೆ ಎಳೆದು ಕೊರಳನ್ನು ಉದ್ದಮಾಡಿದರೆ ಶ್ವಾಸನಾಳ ನೇರವಾಗುತ್ತದೆ. ರೋಗಿಯ ಮೂಗನ್ನು ಒತ್ತಿ ಹಿಡಿದು, ಅವನ ಬಾಯಿಗೆ ಬಾಯಿ ಸೇರಿಸಿ ಶ್ವಾಸಕೋಶಗಳಿಗೆ ಗಾಳಿಯನ್ನು ಊದಬೇಕು. ಬಾಯಿ ತೆರೆದು ಮೂಗಿನ ಮೇಲಿನ ಹಿಡಿತವನ್ನು ಸಡಿಲಿಸಿದರೆ ಒಳಗಿನ ಗಾಳಿ ಹೊರಹೋಗುತ್ತದೆ. ಇದೇ ವಿಧಾನವನ್ನು ಪುನರಾವರ್ತನೆ ಮಾಡಬೇಕು.

### ಹೃದಯದ ಬಾಹ್ಯ ಮರ್ದನ (External Cardiac Massage)

ರೋಗಿಯ ಪಕ್ಕದಲ್ಲಿ ಮಂಡೆಯೂರಿ ಕುಳಿತುಕೊಂಡು ರೋಗಿಯ ಎದೆಯ ಮೇಲೆ, ಹೃದಯದ ಜಾಗದಲ್ಲಿ ಒಂದರ ಮೇಲೊಂದು ಹಸ್ತವನ್ನಿರಿಸಿ, ಮೊಣಕೈಗಳನ್ನು ಉದ್ದಮಾಡಿ ಎದೆಯನ್ನು ಒತ್ತಿ ಬಿಡಬೇಕು. ಒತ್ತುವ ಬಲ ಎದೆಯನ್ನು ೩ ರಿಂದ ೫ ಸೆಂ.ಮೀ. ನಷ್ಟು ಒಳತಳ್ಳಬೇಕು. ಹೀಗೆ ನಿಮಿಷಕ್ಕೆ ೬೦-೧೦೦ ಬಾರಿ ಮಾಡಬೇಕು. ಪ್ರತಿ ಐದು ಮರ್ದನಗಳಿಗೆ ಒಂದು ಸಾರಿ ಮತ್ತೊಬ್ಬರು ಬಾಯಿಯಿಂದ ಶ್ವಾಸೋಚ್ಛ್ವಾಸ ನಡೆಸಬೇಕು. ಹೀಗೆ ಮಾಡುವುದರಿಂದ ಬೆನ್ನು ಮತ್ತು ಎದೆಯ ಮೂಳೆಗಳ ನಡುವೆ ಒತ್ತಲ್ಪಟ್ಟ ಹೃದಯದಿಂದ ರಕ್ತ ಧಮನಿಗಳಿಗೆ ನುಗ್ಗುತ್ತದೆ ಮತ್ತು ಈ ಪ್ರಚೋದನೆಯಿಂದ ಹೃದಯದ ಬಡಿತ ಪ್ರಾರಂಭವಾಗಬಹುದು. ಹೃದಯ ಬಡಿತ ಪ್ರಾರಂಭವಾದಲ್ಲಿ ಚಿಕಿತ್ಸೆ ನಿಲ್ಲಿಸಬೇಕು. ಹೃದಯಸ್ತಂಭನದ ಪ್ರಕರಣಗಳಲ್ಲಿ ಈ ಚಿಕಿತ್ಸೆಯಿಂದ ಕೆಲ ಸಂದರ್ಭಗಳಲ್ಲಿ ಹೃದಯವನ್ನು ಪುನಶ್ಚೇತನಗೊಳಿಸುವುದರಲ್ಲಿ ಯಶಸ್ವಿಯಾಗಬಹುದು.

Printed & Published by S.K. KATOTE on behalf of
Loka Shikshna Trust at Samyukta Karnataka
Press, Koppikar Road, Hubli-580020. (Phone: 364303)
No. 2, Residency Road, Bangalore-560025. (Phone: 2214366)

Managing Editor: K, SHAMARAO
Registered with the Registrar of Newspaper
for India under No. 3633/57